ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದ

ವಾಗ್ಭೂಷಣಗ್ರಂಥಮಾಲೆಯ ೫ನೆಯ ಪುಸ್ತಕವು

---

ನಾಮದಾರ

# ವಿಲಿಯಮ್ ಎವರ್ಟ್ ಗ್ಲ್ಯಾಡ್‌ಸ್ಟನ್

## ದೊರೆಗಳ ಚರಿತ್ರೆಯು.

ಇದನ್ನು

ದೊಡ್ಡ ಅಲೆಗ್ಝಾಂಡರನ, ಡ್ಯೂಕ್ ಅಫ್ ವೆಲಿಂಗ್ಟನ್ನನ, ಏಕ
ನಾಥ ಸಾಧುಗಳ ಚರಿತ್ರೆಗಳನ್ನು ಬರೆದವರೂ,
ಇಂಗ್ಲಂಡ ದೇಶದ ಇತಿಹಾಸವನ್ನು ಸಂಗ್ರಹಿಸಿ
ದವರೂ, ಭೂಮಿತಿಯ ಕೆಲವು ಪುಸ್ತಕಗ
ಳನ್ನು ಕನ್ನಡಿಸಿದವರೂ ಆದ

**ಗುರುಬಸಪ್ಪಾ ಫಕ್ಕೀರಪ್ಪಾ ಹಳಕಟ್ಟಿ**

ಕಾರಕೂನ, ಎಜ್ಯುಕೇಶನಲ್ ಇನಸ್ಪೆಕ್ಟರ, ದಕ್ಷಿಣಭಾಗ,

ಇವರು ರಚಿಸಿದರು.

ಮೊದಲನೆಯ ಆವೃತ್ತಿ

ಧಾರವಾಡ.

೧೯೦೯



ಬೆಲೆ ೧ ರೂಪಾಯಿ.

TO

# Raoji Balaji Ranandikar, Esquire, B. A.

## Educational Inspector,

SOUTHERN DIVISION,

This Book Is Gratefully Dedicated

( *with his kind permission* )

OUT OF DEEP REGARD

For

**His keen interest in the Kannada people**

AND THEIR LANGUAGE

BY

**His dutiful pupil**

The Author.

# ಪ್ರಸ್ತಾವನೆಯು.

ವ॥ ಅತ್ಯುಚ್ಚತರಾಂಗ್ಲೇಯರ । ಮಾತ್ಯಪದದೆ ತನ್ನಗರಿಮೆಯಂ ಮೆರೆದುರ್ವೀ ॥
ನುತ್ಯನೆನಿಸಿದಾ ಗ್ಲಾಡ್‌ಸ್ಟ । ನ್ಸತ್ಯಾತ್ಮಕನವನೆ ಜಗದೆ ಧನ್ಯಂ ಮಾನ್ಯಂ ॥೧॥
ಸದ್ಧರ್ಮನೀತಿ ವಿಮಲ । ಶ್ರದ್ಧಾಸೌಶೀಲ್ಯ ಶುದ್ಧ ನಿಜವರ್ತನದಿಂ ॥
ದುದ್ಧರಿಸುತೆ ನಿಜಕುಲಮಂ । ಸಿದ್ಧಂ ತಾನಾದನವನ ಜನ್ಮವೆ ಜನ್ಮಂ ॥೨॥
ದೀನಜನರ್ಗಾಧಾರಂ । ಮಾನಿತಗುಣಪೂರನಮಲಕೀರ್ತಿಶರೀರಂ ॥
ನೂನಂ ದೃಢಮತಿಸಾರಂ । ತಾನೆಂದುಂ ಜಗಕೆ ಮಾರ್ಗದರ್ಶಕಧೀರಂ ॥೩॥

ಈ ಮೇರೆಗೆ ಎಲ್ಲರಿಂದಲೂ ಕೊಂಡಾಡಿಸಿಕೊಂಡಂಥ ಈ ಚರಿತ್ರನಾಯಕನು ಹತ್ತು ವರ್ಷಗಳ ಹಿಂದೆ ದೀರ್ಘಶಯನಂಗೈದನು. ಇವನ ಮರಣಕ್ಕಾಗಿ ಇವನ ಹಿತಬಾಂಧವರು ಮಾತ್ರವಲ್ಲ ಪೃಥ್ವಿಯೊಳಗಿನ ಸುಧಾರಿಸಿದ ಎಲ್ಲ ರಾಷ್ಟ್ರದವರೂ ಧಾರಾಳವಾಗಿ ಕಣ್ಣೀರು ಸುರಿಸಿದರು. ಈ ದೊಡ್ಡ ಮನುಷ್ಯನ ಚರಿತ್ರೆಯನ್ನು ಉದ್ಗ್ರಂಥಕರ್ತರು ಹೇರಳವಾಗಿ ಬರೆದಿರುವರು. ಅವು ಪಾಶ್ಚಿಮಾತ್ಯರಿಗೆ ಅತಿ ಪ್ರಿಯವಾಗಿರುವದರಿಂದ, ಅವುಗಳ ಸಹಸ್ರಾವಧಿ ಪ್ರತಿಗಳು ಪ್ರತಿವರ್ಷದಲ್ಲಿ ವೆಚ್ಚ ವಾಗುತ್ತಲಿರುವವು. ಇವನು ಸನ್ ೧೮೩೩ ನೆಯ ಇಸವಿಯಲ್ಲಿ ಬ್ರಿಟಿಷ್ ಪಾರ್ಲಮೆಂಟಿನ ಸಭಾಮಂದಿರವನ್ನು ಪ್ರವೇಶಿಸಿ, ತನ್ನ ಬುದ್ಧಿವೈಭವದಿಂದಲೂ ಸತ್ಯಾವಲಂಬನಸ್ವಭಾವದಿಂದಲೂ ಏರುತ್ತೇರುತ್ತ ಪರಮಾವಧಿ ಘನತೆಗೇರಿ, ಇಂಗ್ಲಂಡದ ರಾಜ್ಞಿಯೂ ಹಿಂದುಸ್ಥಾನದ ಚಕ್ರವರ್ತಿನಿಯೂ ಆದ ವ್ಹಿಕ್ಟೋರಿಯಾ ಮಹಾರಾಣಿಯವರ ಆಡಳಿತದಲ್ಲಿ ಅತ್ಯುಚ್ಚಸ್ಥಾನವಾದ ಮುಖ್ಯಮಂತ್ರಿಯ ಸ್ಥಳವನ್ನು ಹೊಂದಿ, ಅವರ ವಿಸ್ತಾರವಾದ ರಾಜ್ಯವನ್ನು ರಾಜನಿಷ್ಠೆಯಿಂದಲೂ ಪ್ರಜಾವಾತ್ಸಲ್ಯದಿಂದಲೂ ಜಾಣತನದಿಂದಲೂ ಹದಿನಾಲ್ಕು ವರ್ಷಗಳ ವರೆಗೆ ನ್ಯಾಯಕ್ಕನುಗುಣವಾಗಿ ಪರಿಪಾಲಿಸಿ, ಅಖಂಡ ಕೀರ್ತಿಯನ್ನು ಗಳಿಸಿಕೊಂಡನು. ಇಂಥ ಸದ್ಗುಣಸಂಪನ್ನನ ಚರಿತ್ರೆಯನ್ನು ಬರೆಯುವವರಿಗೆ ಸಾಹಿತ್ಯಗಳಿಗೇನೂ ಕಡಿಮೆಯಿಲ್ಲ. ಆದರೆ ನನ್ನ ಅಲ್ಪ ಸಾಮರ್ಥ್ಯಕ್ಕನುಸರಿಸಿ, ಅವುಗಳಲ್ಲಿ ಅಲ್ಲೊಂದು ಇಲ್ಲೊಂದು ಸಂಗತಿಯನ್ನು ಆರಿಸಿಕೊಂಡು, ಅವುಗಳನ್ನೇ ಸರಿಗೊಳಿಸಿ, ಈ ಸಂಕ್ಷೇಪವಾದ ಚರಿತ್ರೆಯನ್ನು ಬರೆದು ಕರ್ನಾಟಕ ವಾಚಕರ ಮುಂದಿಟ್ಟಿದ್ದೇನೆ. ಅವರು ಅಲ್ಪವಾದ ಈ ಭಾಷಾಸೇವೆಯನ್ನು ಹಂಸಕ್ಷೀರನ್ಯಾಯದಿಂದ ಸ್ವೀಕರಿಸಬೇಕೆಂದು ಬೇಡಿಕೊಳ್ಳುತ್ತೇನೆ.

ಈ ಚರಿತ್ರೆಯಲ್ಲಿ ಚರಿತ್ರನಾಯಕನ ವಂಶಿಕರು ಈಗ ಯಾವ ಯಾವ ಸ್ಥಿತಿಯಲ್ಲಿರುವರೆಂಬ ಸಂಗತಿಯನ್ನು ಹೇಳುವದು ಉಚಿತವಾಗಿ ತೋರಿತು. ಆದರೆ ಅದನ್ನು ಹೇಗೆ ಸಂಗ್ರಹಿಸಬೇಕೆಂದು ಯೋಚಿಸುತ್ತಿರುವಲ್ಲಿ, ನಮ್ಮ ಚರಿತ್ರನಾಯಕನ ಳನೆಯ

ಚಿರಂಜೀವರಾದ ನಾಮದಾರ ಹರ್‌ಬರ್ಟ ಗ್ಲ್ಯಾಡ್‌ಸ್ಟನ್ನರೆಂಬವರು ನಮ್ಮ ಪ್ರ
ಗಳಾದ ಎಡ್ವರ್ಡ ಬಾದಶಹರ ಪ್ರಧಾನಮಂಡಲದಲ್ಲಿ ಒಬ್ಬ ಮಂತ್ರಿಗಳಾಗಿ
ರೆಂಬ ವೃತ್ತಾಂತವನ್ನು ಕೇಳಿ, ಆ ಮಹಾನುಭಾವರಿಗೆ ನನ್ನ ಕೋರಿಕೆಯ
ಅರುಹಲು, ಅವರು ಆತ್ಮಾನಂದದಿಂದ ನನಗೆ ಬೇಕಾದ ವಿವರವನ್ನೊದಗಿಸಿಕೊಟ್ಟು
ಈ ಗ್ರಂಥಕ್ಕೆ ಒಳ್ಳೆಯ ಸಹಾಯಕರಾದರು. ಇದಕ್ಕಾಗಿ ಅವರನ್ನು ಅನನ್ಯಭಾವ
ದಿಂದ ವಂದಿಸುತ್ತೇನೆ.

ಈ ಗ್ರಂಥದಲ್ಲಿ ಅಲ್ಲಲ್ಲಿಗೆ ಶೋಭಿಸುತ್ತಿರುವ ಕನ್ನಡದ ಕವಿತೆಗಳನ್ನು ಮೈಸೂ
ರ ಸೀಮೆಯಲ್ಲಿಯ ಕನ್ನಡದ ಪಂಡಿತರೂ ಪುರಾತನ ಧರ್ಮಗ್ರಂಥಗಳ ಜೀರ್ಣೋ
ದ್ಧಾರಕರೂ ಬಸವರಾಜವಿಜಯ, ಚನ್ನಬಸವರಾಜವಿಜಯ ಮುಂತಾದ ಉದ್ಗ್ರಂಥ
ಗಳ ಕರ್ತರೂ ಆದ ಶ್ರೀಯುತ ಎಸ್. ಆರ್. ಕರಿಬಸವ ಶಾಸ್ತ್ರಿಗಳವರು ರಚಿಸಿಕೊ
ಟ್ಟು, ನನಗೆ ಅಧಿಕವಾದ ಸಹಾಯವನ್ನಿತ್ತಿರುವರು. ಈ ಮಹನೀಯರ ಉಪಕಾ
ರವನ್ನು ಎಷ್ಟು ಸ್ಮರಿಸಿದರೂ ಅಲ್ಪವೇ.

ಮನೆಯಲ್ಲಿ ಸಿದ್ಧಪಡಿಸಿದ ಪಾಕವನ್ನು ಇಷ್ಟದೇವತೆಗೆ ಸಮರ್ಪಿಸದೆ, ಅದರ
ವಿನಾಸಲು ಮುರಿಯಕೂಡದೆಂಬ ಶಾಸ್ತ್ರವಚನವನ್ನನುಸರಿಸಿ, ಈ ಗ್ರಂಥರೂಪವಾದ
ಪಾಕವನ್ನು ಬಾಲ್ಯದಲ್ಲೆನಗೆ ಶಿಕ್ಷಣವನ್ನಿತ್ತವರೂ ಕಾಲಕಾಲಕ್ಕೆ ಸದುಪದೇಶಗಳಿಂ
ದ ನನ್ನನ್ನು ಎಚ್ಚರಗೊಳಿಸಿದವರೂ ಈ ಪ್ರಪಂಚದಲ್ಲೊದಗುವ ತರತರದ ಎಡರುಗ
ಳಿಗೆದೆಗೊಟ್ಟು ವರ್ತಿಸಲು ನನ್ನನ್ನು ಉತ್ಸಾಹಪೂರಿತನನ್ನಾಗಿ ಮಾಡಿದವರೂ ಆದ
ರಾ. ಸಾ. ರಾವಜಿ ಬಾಳಾಜಿ ಕರಂದಿಕರರಾಯರಿಗೆ ಸಮರ್ಪಿಸುವದು ನನ್ನ ಕರ್ತ
ವ್ಯವಾಗಿದೆಂದೆಣಿಸಿ, ಅವರನ್ನು ಪ್ರಾರ್ಥಿಸಿಕೊಳ್ಳಲು, ಆ ಸದ್ಗುರುಗಳು ಶಿಷ್ಯವಾ
ತ್ಸಲ್ಯದಿಂದ ಈ ಗ್ರಂಥವೆಂಬ ಪಾಕದ ಸಮರ್ಪಣೆಯನ್ನು ಸ್ವೀಕರಿಸಿ, ಇದನ್ನು
ಪರಿಶುದ್ಧಗೊಳಿಸಿದರು. ಈ ವಾತ್ಸಲ್ಯಕ್ಕಾಗಿ ಆ ಗುರುರಾಯರನ್ನು ಮನದಣೀ
ಕೊಂಡಾಡುತ್ತೇನೆ.

ಈ ಗ್ರಂಥದ ಜನ್ಮಕ್ಕೆ ಕಾರಣರಾದ ಕರ್ನಾಟಕ ವಿದ್ಯಾವರ್ಧಕ ಸಂಘದ
ವರ ಉಪಕಾರವನ್ನು ನೆನಿಸುವದೂ ನನ್ನ ಕರ್ತವ್ಯವಾಗಿದೆ. ಅವರ ಪ್ರಯತ್ನಗಳಿಂ
ದಲೇ ಇತ್ತಿತ್ತಲಾಗಿ ಹಲಕೆಲವು ಕನ್ನಡ ಗ್ರಂಥಗಳು ಬಯಲಿಗೆ ಬರಹತ್ತಿರುವ
ಸಂಗತಿಯು ಕರ್ನಾಟಕದ ಬಂಧುಗಳಿಗೆ ವೇದ್ಯವೇ ಉಂಟು. ಅವರ ಈ ಪ್ರಯ
ತ್ನಗಳಿಗೆ ಹೆಚ್ಚು ಹೆಚ್ಚು ಉತ್ಸಾಹವನ್ನು ಕರುಣಿಸೆಂದು ಶ್ರೀ ಪರಮೇಶ್ವರನನ್ನು
ಬೇಡಿಕೊಂಡು ಈ ಪ್ರಸ್ತಾವನೆಯನ್ನು ಮುಗಿಸುತ್ತೇನೆ.

ಧಾರವಾಡ,
೨೫ನೆಯ ಅಗಸ್ಟ ೧೯೦೯.

ವಿದ್ವಜ್ಜನ ವಿಧೇಯ,
ಗುರುಬಸಪ್ಪ ಫ. ಹಳಕಟ್ಟಿ.

# ಶುದ್ಧಾಶುದ್ಧಿ ಪತ್ರಿಕೆಯು.

| | ಸಾಲು | ಅಶುದ್ಧ. | ಶುದ್ಧ. |
|---|---|---|---|
| | ೧೧ | ಉಚಪ್ರತಿಯು | ಉಚ್ಚ ಪ್ರತಿಯು |
| | ೯ | ಅವರ ಬುದಿ ವೈಭವದ | ಅದರ ಬುದ್ಧಿವೈಭವದ |
| | ೨೦ | ಹೊಂದಿಕೆ ಮಾಡಿದನು. | ಹೊಂದಿಕೆ ಮಾಡಿದ್ದನು. |
| ,, | ೨೧ | ಹೋಣೆತಿಯಾಗಿ. | ಹೋಣೆತಿಯಾಗಿ, |
| ,, | ೨೪ | ಅರಿತುಕೊಂಡಿದನು | ಅರಿತುಕೊಂಡಿದ್ದನು. |
| ೬ | ೬ | ಅವನನು | ಅವನನ್ನು |
| ೭ | ೨೩ | ಕೃತ್ಯಗಳನು | ಕೃತ್ಯಗಳನ್ನು |
| ೮ | ೨೩ | ಗೊತ್ತು ಮಾಡಿದ ದಿನ ವ್ಯಾಖ್ಯಾನಗಳನ್ನು | ಗೊತ್ತುಮಾಡಿದದಿನ ಅವರು ವ್ಯಾಖ್ಯಾನಗಳನ್ನು |
| ೧೧ | ೩೦ | ನೀವೂ ನನ್ನನ್ನು ಅದೆ | ನೀವೂ ನನ್ನನ್ನು ಅದೇ |
| ೧೨ | ೮ | ನನ್ನಿಂದ ಪಡೆಯಲಾಗದು. | ನನ್ನಿಂದ ಪಡೆಯಲಾಗದು.” |
| ೧೩ | ೨೬ | ವಷಯುಗಳ ಮೇಲೆ | ವಿಷಯಗಳ ಮೇಲೆ |
| ೧೯ | ೨೭ | ಬಿಶಪ್ಪರು | ಬಿಶಪ್ಪರು |
| ೨೦ | ೨೪ | ಕಾರ್ಯಗಳನ್ನೆಸಗಿದರೆ, ಮಾತ್ರ | ಕಾರ್ಯಗಳನ್ನೆಸಗಿದರೆ ಮಾತ್ರ |
| ೨೩ | ೨೦ | ಕುರುಹುಗಳನ್ನು | ಕುರುಹುಗಳು |
| ೨೮ | ೨೫ | ಮನಗಂಡಿದನು. | ಮನಗಂಡಿದ್ದನು. |
| ೩೨ | ೧ | ಧರ್ಮಶಾಸ್ತ್ರಸಮ್ಮತನಾಗಿದ್ದರೂ | ಧರ್ಮಶಾಸ್ತ್ರಸಮ್ಮತವಾಗಿದ್ದರೂ |
| ೩೭ | ೨೪ | ಈ ಪದತಿಯು | ಈ ಪದ್ಧತಿಯು |
| ೩೯ | ೨೯ | ತನಪ್ಟಕ್ಕೆ | ತನ್ನಷ್ಟಕ್ಕೆ |
| ೪೨ | ೩೦ | ಪ್ರಸಿದ ಪುರುಷರು | ಪ್ರಸಿದ್ಧ ಪುರುಷರು |
| ೪೪ | ೩೦ | ಅವನು ತನ | ಅವನು ತನ್ನ |
| ೪೮ | ೧೭ | ಸ್ವಭಾವಿಕವು.” | ಸ್ವಾಭಾವಿಕವು.” |
| ೫೨ | ೧೬ | ಇತ್ತಲಾಗಿ ವ್ಯಾಪಾರ | ಇತ್ತಲಾಗಿನ ವ್ಯಾಪಾರ |
| ೫೬ | ೧೭ | ವಿರುದ್ಧವಾಗಿ | ವಿರುದ್ಧವಾಗಿ |
| ೬೨ | ೯ | ಪಕರಣದಲ್ಲಿ | ಪ್ರಕರಣದಲ್ಲಿ |
| ೬೩ | ೩೦ | ತಂದಿದನು | ತಂದಿದ್ದನು. |
| ೬೪ | ೩೦ | ಪರ್ಷದ | ವರ್ಷದ |
| ೭೩ | ೧೧ | ಮಾಡದಿರುಡದು | ಮಾಡದಿರುವದು |
| ೭೭ | ೨೮ | ಅಲೆಕ್ಸಾಂಡ್ರಿಯಾ | ಅಲೆಕ್ಸಾಂಡ್ರಿಯಾ |
| ೭೮ | ೧ | ಲಾರ್ಡ್ | ಲಾರ್ಡ್ |
| ೭೯ | ೩೦ | ಇಂಗಿಪ್ | ಇಂಗ್ಲಿಷ್ |
| ೮೫ | ೩ | ಹೀಗಿರುವಲ್ಲಿ ತಾನು | ಹೀಗಿರುವಲ್ಲಿ, ತಾನು |
| ,, | ೧೬ | ಮಹಾರಾಣಿ ಸಾಹೇಬ ಮುಖ್ಯ ಮಂತ್ರಿಯಾಗಿ | ಮಹಾರಾಣಿ ಸಾಹೇಬರ ಮುಖ್ಯ ಮಂತ್ರಿಯಾಗಿ |
| ೯೭ | ೭ | ಮನವರಿಕಯಾಯಿತು. | ಮನವರಿಕೆಯಾಯಿತು. |

| ಪುಟ | ಸಾಲು | ಅಶುದ್ಧ. | ಶುದ್ಧ. |
|---|---|---|---|
| ೮೮ | ೧೬ | ಮರಮರುಗದೆ | ಮರಮರ ಮರುಗದೆ |
| ೯೦ | ೬ | ಧೆರ್ಯಶಾಲಿಗಳೂ | ಧೈರ್ಯಶಾಲಿಗಳೂ |
| ೯೩ | ೧೨ | ಸ.ಲಾನನೆಂದೆನ್ನುವರು. | ಸುಲ್ತಾನನೆಂದೆನ್ನುವರು. |
| ೯೯ | ೩೦ | ನಾನು ನನ | ನಾನು ನನ್ನ |
| ೧೦೦ | ೩೦ | ತೊಡಕುಳ | ತೊಡಕುಳ್ಳ |
| ೧೦೬ | ೮ | ಭೂವಿಗಳನ್ನು | ಭೂಮಿಗಳನ್ನು |
| ,, | ೧೭ | ದುಡಿನಿಂದ | ದುರ್ದಿನಿಂದ |
| ,, | ೩೧ | ಹೆಚಿಸುವ | ಹೆಚ್ಚಿಸುವ |
| ೧೦೯ | ೯ | ತಕ್ಕವಟ್ಟಿಗೆ | ತಕ್ಕಮಟ್ಟಿಗೆ |
| ೧೧೨ | ೪ | ಹೇಗೆ ಬೆಳೆಯುವದೆಂಬದನ್ನು | ಹೇಗೆ ಬೆಳೆಯುವದೆಂಬದನ್ನೂ |
| ೧೧೫ | ೨೩ | ಹೋವ್‌ ರೂಲನ್ನ | ಹೋಮ್‌ರೂಲನ್ನು |
| ೧೧೯ | ೨೦ | ಹೇಗೆ ಬೆಳೆಯುವದು. | ಹೇಗೆ ಬೆಳೆಯುವದು; |
| ೧೨೦ | ೩೦ | ಬಡದೇಶವನ್ನು ನಿರಾಶಿತರಾಗಿ | ಬಡದೇಶವನ್ನು ನಿರಾಶಿತವಾಗಿ |
| ೧೨೩ | ೧೧-೧೨ | ಎಂಡನೆಯದು | ಎರಡನೆಯದು |
| ೧೨೪ | ೧\|೨ | ಸುದಿಯನ್ನು | ಸುದ್ದಿಯನ್ನು |
| ೧೨೭ | ೧೦ | ಕಣ್ಣುಗಳಿದು | ಕಣು ಗಳಿದ್ದು |
| ೧೨೮ | ೫\|೬ | ಹಣಾಗಿದನು | ಹಣ್ಣಾಗಿದ್ದನು. |
| ,, | ೨೨ | ಕಲಾಣವೇ | ಕಲ್ಯಾಣವೇ |
| ೧೩೨ | ೬ | ಸಂತೊಹದಿಂದಲೂ | ಸಂತೋಷದಿಂದಲೂ |
| ,, | ೧೫ | ಕುಳಿತುಕೊಂಡಿದನು. | ಕುಳಿತುಕೊಂಡಿದ್ದನು. |
| ೧೪೩ | ೨೦ | ಇಂಗಂಡದ | ಇಂಗ್ಲಂಡದ |
| ೧೪೫ | ೯ | ಮಾರ ಮಾಡಲಿ. | ಪಾರಮಾಡಲಿ. |
| ೧೪೯ | ೧ | ತಣ ಗಾಗುತ್ತ ನಡೆದವು | ತಣ್ಣಗಾಗುತ್ತ ನಡೆದವು. |
| ೧೫೨ | ೨ | ಕಳಕೊಂಡದು | ಕಳಕೊಂಡದ್ದು |
| ೧೫೭ | ೩೦ | ಉತ್ತರಕ್ರಿಯುಗಳನು | ಉತ್ತರಕ್ರಿಯೆಗಳನ್ನು |
| ೧೫೯ | ೩ | ಜನರ | ಜನರು |
| ೧೬೦ | ೩ | ಪಾಲಮೆಂಟಿನ | ಪಾರ್ಲಮೆಂಟಿನ |
| ,, | ೫ | ಅದರೆ | ಅಂದರೆ |
| ೧೭೩ | ೩೦ | ದೊಡದೊಡ | ದೊಡ ದೊಡ್ಡ |
| ೧೭೫ | ೫ | ಸ್ವಭಾವಜನ | ಸ್ವಭಾವಜನ್ಯ |
| ೧೭೬ | ೨೪ | ಕಣುತುಂಬ ನೋಡಿದರೆ, | ಕಣ್ಣುತುಂಬ ನೋಡಿದರೆ, |
| ೧೭೭ | ೬ | ಮಾರ್ಗದರ್ಶಕಪಾಗಲಿ, | ಮಾರ್ಗದರ್ಶಕವಾಗಲಿ, |
| ೧೮೬ | ೧೩ | ಉದಾರ ಬುದ್ಧಿಯು | ಉದಾರ ಬುದ್ಧಿಯು |
| ೧೮೭ | ೧೩ | ಸಷ್ಟವಾಗಿ | ಸ್ಪಷ್ಟವಾಗಿ |

## ಉಮದಾರ ವಿಲಿಯಮ್ ಎವರ್ಟ್ ಗ್ಲ್ಯಾಡ್‌ಸ್ಟನ್ ದೊರೆಯ ಚರಿತ್ರೆಯು.

# ೧ನೆಯ ಅಧ್ಯಾಯವು.

### ಜನನವು, ಬಾಲ್ಯವು, ವಿದ್ಯಾಭ್ಯಾಸವು.

---

ಅಹಹ, ಮಹತಾಂ ನಿಃಸೀಮಾನಶ್ಚರಿತ್ರವಿಭೂತಯಃ ||

(ನೀತಿಶತಕ.)

ಅಹಹ, ಮಹಾಪುರುಷರ ಚರಿತ್ರಮಹಿಮೆಗಳು ಅಗಾಧವಾದವುಗಳು !

---

*ಮಧ್ಯಮ ವರ್ಗದ ಜನರ ಮಹತ್ವವು.*

ಸೂಕ್ಷ್ಮರೀತಿಯಿಂದ ವಿಚಾರಮಾಡಿದರೆ, ಪ್ರತಿ ಒಂದು ದೇಶದಲ್ಲಿ ಉಚ್ಚ ಪ್ರತಿಯ ಜನರೂ ಮಧ್ಯಮ ಪ್ರತಿಯ ಜನರೂ ಕನಿಷ್ಠ ಪ್ರತಿಯ ಜನರೂ ಎಂಬ ಮೂರು ವರ್ಗಗಳ ಜನರಿರುವರೆಂದು ತಿಳಿಯುವದು. ಇವರಲ್ಲಿ ಮಧ್ಯಮ ವರ್ಗದವರು ತಮ್ಮ ದೇಶದ ಉತ್ಕರ್ಷಕ್ಕೆ ವಿಶೇಷ ಕಾರಣವಾಗುವರು. ಉಚ್ಚ ಪ್ರತಿಯ ಜನರಲ್ಲಿ ರಾಜ್ಯಕಾರ್ಯಧುರಂಧರರೂ, ಕಲಾನಿಪುಣರೂ ಗ್ರಂಥಕರ್ತರೂ ಆಗಲು ತಕ್ಕವರಾದ ಮಕ್ಕಳು ಒಂದು ವೇಳೆ ಹುಟ್ಟಿದರೂ, ಅವರ ತಾಯಿತಂದೆಗಳು ಅಚ್ಚುಳಿಂದ ಅವರಿಗೆ ಯೋಗ್ಯ ಶಿಕ್ಷಣ ಕೊಡಲು ಸಾಕಷ್ಟು ಲಕ್ಷ್ಯಗೊಡುವದಿಲ್ಲ. ಇದರಿಂದ ಆ ಮಕ್ಕಳು ಸೋಮಾರಿಗಳೂ ವಿಷಯಲಂಪಟರೂ ತುಂಟರೂ ಆಗುವರು. ಇದರಿಂದ ಆ ದೇಶಕ್ಕೆ ಯಾವುದೊಂದು ದೊಡ್ಡ ಲಾಭವು ಆಗಲಾರದೆಂಬ ಮಾತು ಸ್ಪಷ್ಟವೇ. ಇದೇ ಮೇರೆಗೆ ಕನಿಷ್ಠ ಪ್ರತಿಯ ಜನರಲ್ಲಿ ಒಂದುವೇಳೆ ಮೇಲು ಬುದ್ಧಿಯ ಹುಡುಗರು ಹುಟ್ಟಿದರೂ ಅವರಿಗೆ ಯೋಗ್ಯ ಶಿಕ್ಷಣ ಕೊಡುವಷ್ಟು ಧನಸಹಾಯವೂ ಅನುಕೂಲತೆಗಳೂ ಅವರ ತಾಯಿತಂದೆಗಳಿಗಿರುವದಿಲ್ಲ. ಇದರಿಂದ ಆ ಮಕ್ಕಳಲ್ಲಿದ್ದ ಕುಶಾಗ್ರ ಬುದ್ಧಿಯು ತಕ್ಕ ಪೋಷಣೆಯನ್ನು ಹೊಂದದೆ ಅಲ್ಲಿಂದಲ್ಲಿಯೇ ಕುಗ್ಗಿ ಹೋಗುವದು. ಆದರೆ ಉಚ್ಚ ವರ್ಗದ ಮಕ್ಕಳಿಗಿರುವ ಅಚ್ಚುಗಳೂ ಮೋಹಗಳೂ ಅಥವಾ ಕನಿಷ್ಠ ವರ್ಗದ ಬಾಲಕರಿಗಿರುವ ಕಷ್ಟಗಳೂ ಬಡತನವೂ ಮಧ್ಯಮ ವರ್ಗದ ಹುಡುಗರಿಗಿರುವದಿಲ್ಲ. ಆದುಕಾರಣ ಅವರಲ್ಲಿಯ

ಚುರುಕು ಬುದ್ಧಿಯುಳ್ಳವರು ತರ್ಕ ಶಿಕ್ಷಣ ಪಡೆದು, ಬೆಳಕಿಗೆ ಬಂದು, ತಮ್ಮ ದೇಶದ ಘನತೆಯನ್ನೂ ಐಶ್ವರ್ಯವನ್ನೂ ಹೆಚ್ಚಿಸಲು ವಿಶೇಷ ಕಾರಣವಾಗುವರು. ಈ ಸರ್ವಸಾಮಾನ್ಯವಾದ ನಿಯಮವು ಇಂಗ್ಲಂಡ ದೇಶಕ್ಕೆ ಸರಿಯಾಗಿ ಹತ್ತುವದು. ಆ ದೇಶದಲ್ಲಿ ಈ ಮೂರೂ ತರಗತಿಯ ಜನರಿರುವರು. ಒಂದುವೇಳೆ ಯಾವುದೊಂದು ಸಾಮಾಜಿಕ ಇಲ್ಲವೆ ರಾಜಕೀಯ ಜಗಳವು ಹುಟ್ಟಿ, ಅದರಿಂದ ಮಹಾ ಅನರ್ಥವು ಸಂಭವಿಸುವ ಪ್ರಸಂಗವು ಬಂದರೆ, ಅದಕ್ಕೆ ತಲೆಗೊಟ್ಟು ನಿಂತು, ಅದನ್ನು ಹೋಗಲಾಡಿಸಿ, ಆ ದೇಶವನ್ನು ಕಾಪಾಡುತ್ತ ಬಂದವರು ಮಧ್ಯಮ ವರ್ಗದ ಜನರೇ ಆಗಿರುವರು. ಇದು ಅಲ್ಲದೆ ಇಂಗ್ಲಿಷ್ ಜನಾಂಗದ ಘನತೆಯನ್ನು ಪರಮಾವಧಿ ಹೆಚ್ಚಿಸಿದವರೂ ಅವರ ಬುದ್ಧಿವೈಭವದ ಕೀರ್ತಿಯನ್ನು ಮೂಡುವಲ್ಲಿಯೂ ಮುಳುಗುವಲ್ಲಿಯೂ ಕೂಡ ಹಬ್ಬಿಸಿದವರೂ ಅವರೇ. ಆ ದೇಶದ ಇತಿಹಾಸವನ್ನು ಓದಿದರೆ, ಮಹಾ ಬುದ್ಧಿಶಾಲಿಗಳೂ, ಸಹಾಸಿಗರೂ ದೀರ್ಘದೃಷ್ಟಿಯವರೂ ಮಧ್ಯಮ ವರ್ಗದವರಲ್ಲಿ ಬಹು ಜನರು ಹುಟ್ಟಿದರೆಂದು ತಿಳಿಯುವದಲ್ಲದೆ, ತಮ್ಮ ಕರ್ತೃತ್ವಶಕ್ತಿಯಿಂದಲೂ ಜಾಣತನದಿಂದಲೂ ವಿವೇಕದಿಂದಲೂ ಇಂಗ್ಲಂಡ ದೇಶಕ್ಕೆ ಆಧಾರಸ್ತಂಭವಾಗಿದ್ದವರೂ, ವ್ಯಕ್ತಿಯ ಅಥವಾ ಜನಾಂಗದ ಸ್ವಾತಂತ್ರ್ಯಕ್ಕಾಗಿ ಹುರುಪಿನಿಂದ ಹೋರಾಡಿದವರೂ, ಅರಸರ ಮತ್ತು ಉಚ್ಚ ವರ್ಗದವರ ಅಧಿಕಾರವನ್ನು ಅಷ್ಟೊಂದು ಬೆಳೆಯಗೊಡದವರೂ ಕನಿಷ್ಠ ವರ್ಗದವರು ಪೀಡುವ ಕಂಡ ಕಂಡ ಅಧಿಕಾರಗಳಿಗೆ ಅಡ್ಡ ಬಂದವರೂ ಅವರೇ ಆಗಿರುವರೆಂದು ತಿಳಿಯುವದು. ಈ ಕಾರಣದಿಂದ ಮಧ್ಯಮ ವರ್ಗವು ಇಂಗ್ಲಂಡ ದೇಶದ ಬೆನ್ನಲಬಿನಂತಿರುವದೆಂದು ದೊಡ್ಡ ದೊಡ್ಡ ಗ್ರಂಥಕಾರರು ವರ್ಣಿಸಿರುವರು. ಇದು ದಿಟವಾದದ್ದು. ಈ ವರ್ಗದಲ್ಲಿಯೇ ನಮ್ಮ ಚರಿತ್ರನಾಯಕನು ಹುಟ್ಟಿದನು.

ಗ್ಲ್ಯಾಡ್‌ಸ್ಟನ್ನನ ಜನನ, ೧೮೦೯ ಡಿಶಂಬರ ೨೯.

ಇಂಗ್ಲಂಡದ ಉತ್ತರದಲ್ಲಿ (Liverpool.) ಲಿವ್ಹರಪೂಲವೆಂಬದೊಂದು ದೊಡ್ಡ ಪಟ್ಟಣವುಂಟು. ಅದು ವ್ಯಾಪಾರದಲ್ಲಿ ಬಹಳೇ ಹೆಸರ್ಗೊಂಡಿದೆ. ಅದರಲ್ಲಿ (Sir John Gladstone) ಸರ್ ಜಾನ್ ಗ್ಲ್ಯಾಡ್‌ಸ್ಟನ್ನನೆಂಬವನೊಬ್ಬ ಪ್ರಾಮಾಣಿಕನೂ ಸಜ್ಜನನೂ ಆದ ವರ್ತಕನಿದ್ದನು. ಅವನಿಗೆ ಸುಶೀಲೆಯೂ ಸುಶಿಕ್ಷಿತೆಯೂ ಆದ ಹೆಂಡತಿಯು ಇದ್ದಳು. ಅವಳ ಹೆಸರು (Miss Robertson) ಮಿಸ್ ರಾಬರ್ಟಸನ್ನಳು. ಈ ಗಂಡಹೆಂಡರಿಬ್ಬರೂ ಮಹಾ ಧರ್ಮಶೀಲರಾಗಿದ್ದರು. ಇವರಿಗೆ ಉಣಲಿಕ್ಕೂ ಉಡಲಿಕ್ಕೂ ಏನು ಕಡಿಮೆ ಇದ್ದಿಲ್ಲ. ಇವನ ವ್ಯಾಪಾರವು ಏರಿಕೆಯ ಸ್ಥಿತಿಯಲ್ಲಿತ್ತು. ಸ್ಥಾವರ ಆಸ್ತಿಯಾದರೂ ಇವನಿಗೆ ಸಾಕಷ್ಟು ಇತ್ತು. ಕೆಲವು ವರ್ಷಗಳವರೆಗೆ ಇವನು ಪಾರ್ಲಮೆಂಟ್ ಸಭೆಯ ಸಭಾಸದನಾಗಿದ್ದನು.

ರಾಂತ ಇವನು ತನ್ನ ಒಗರಿಟ್ಟುಕೊಂಡು ನಾಲ್ಕು ಜನರು ಹೌದೆನ್ನುವಂತೆ ತ
ಸಂಸಾರವನ್ನು ಸಾಗಿಸುತ್ತಿದ್ದನು. ಈ ದಂಪತಿಗಳಿಗೆ ನಾಲ್ಕು ಗಂಡು, ಎರ
ಹೆಣ್ಣು ಈ ಮೇರೆಗೆ ಆರು ಮಂದಿ ಮಕ್ಕಳು. ಇವರೊಳಗಿನ ೪ನೆಯ ಮಗ
ದ (William Ewart Gladstone)ವಿಲಿಯಮ್ ಎವರ್ಟ್ ಗ್ಲ್ಯಾಡ್‌ಸ್ಟ
ನೆಂಬವನು ಸನ್ ೧೮೦೯ನೆಯ ಇಸವಿಯ ಡಿಶಂಬರ ೨೯ನೆಯ ತಾರೀಖಿನ
ದಿವಸ ಹುಟ್ಟಿದನು. ಇವನೇ ಈ ಚರಿತ್ರೆಯ ನಾಯಕನು.

|| ಮತ್ತೇಭವಿಕ್ರೀಡಿತ ವೃತ್ತ- ||

ಮಗನಂ ತಾಂ ಪಡೆದಂತರಿಂದಮೆ ಪಿತಂ ತಾನಾದೆನೆಂದುಬ್ಬಲೇಂ।
ತೆಗೆ ಸಚ್ಛಿಕ್ಷಣದಿಂ ಸುಧೀತಿಲಕನಂ ಸುಜ್ಞಾನಿಯುಂ ಗೆಯ್ದೊಡಾ ॥
ಮಗನಂ ತಾಂ ಕೃತಕಾರ್ಯನಪ್ಪನವನೇ ಸಾರ್ಥಂ ಪಿತಂ ಮಿಕ್ಕತಂ।
ದೆಗಳೆಲ್ಲರ್ ಬರಿದಂದೆಗಳ್ ಹರಿಯನಾಮಂ ಕಪ್ಪೆಗಿದ್ದಂತೆವೋಲ್ ॥ ೧ ॥

ತಮಗೆ ಮಕ್ಕಳು ಹುಟ್ಟಿದ ಕೂಡಲೆ ಸಂತೋಷ ಪಡುವವರೇ ಬಹು ಜನರು.
ಇಷ್ಟರಿಂದಲೇ ಅವರ ಕಾರ್ಯವು ತೀರಲಿಲ್ಲ. ಆದರೆ ಆ

ಗೃಹಶಿಕ್ಷಣ.

ಮಕ್ಕಳಿಗೆ ಇಹಪರಗಳಲ್ಲಿ ಸುಖವನ್ನೀಯುವ ಶಿಕ್ಷಣವ
ನ್ನು ಕೊಡುವದು ತಮ್ಮ ಕರ್ತವ್ಯವಾಗಿದೆಂದು ತಿಳಿದುಕೊಂಡು, ಅದರಂತೆ ವರ್ತಿ
ಸುವವರು ಮಾತ್ರ 'ತಂದೆ' ಎಂಬ ಹೆಸರಿಗೆ ತಕ್ಕವರಾಗುವರು. ಮಕ್ಕಳ ಸಂಬಂಧದ
ಈ ಕರ್ತವ್ಯವನ್ನು ಸರ್ ಜಾನ್ ಗ್ಲ್ಯಾಡ್‌ಸ್ಟನ್ನನು ಚನ್ನಾಗಿ ಬಲ್ಲವನಾಗಿದ್ದದರಿಂದ
ಅವರ ಐಹಿಕ ಮತ್ತು ಪಾರಮಾರ್ಥಿಕ ಶಿಕ್ಷಣಗಳಿಗೆ ಸರಿಯಾಗಿ ಲಕ್ಷಗೊಟ್ಟ
ನು. ಅವನು ಪ್ರಾಥಮಿಕ ಶಿಕ್ಷಣವು ಮನೆಯಲ್ಲಿ ತನ್ನಿಂದಲೂ, ಶಾಲೆಯಲ್ಲಿ ಉತ್ತಮ
ಗುರುಗಳಿಂದಲೂ ಅವರಿಗೆ ದೊರೆಯುವಂತೆ ಹೊಂದಿಕೆಮಾಡಿದ್ದನು. ಅವರ ಪಾರಮಾ
ರ್ಥಿಕ ಶಿಕ್ಷಣದ ಹೊರೆಗಂತೂ ತಾನೇ ಹೊಣೆಯಾಗಿ, ಧರ್ಮಗ್ರಂಥಗಳನ್ನು ಒಳ್ಳೆ
ಯ ದಕ್ಷತೆಯಿಂದಲೂ ಅಂತಃಕರಣಪೂರ್ವಕವಾಗಿಯೂ ಅವರಿಗೆ ಕಲಿಸುತ್ತಿದ್ದನು.
ವಿದ್ಯೆಯು ಮನಸ್ಸಿಗೆ ಪೌಷ್ಟಿಕ ಆಹಾರವಾಗಿದ್ದಂತೆ ಧರ್ಮಜ್ಞಾನವು ಆತ್ಮಕ್ಕೆ
ಪೌಷ್ಟಿಕ ಅನ್ನವಾಗಿದೆಂದು ಅವನು ತುಂಬಾ ಅರಿತುಕೊಂಡಿದ್ದನು. ಆದುಕಾರ
ಣ, ಈ ಎರಡೂ ವಿಷಯಗಳಲ್ಲಿ ಅವನು ತನ್ನ ಮಕ್ಕಳನ್ನು ಜ್ಞಾನಸಂಪನ್ನರನ್ನಾಗಿ
ಮಾಡಲು ಯತ್ನಿಸುತ್ತಿದ್ದನು.

ಅವನು ತನ್ನ ಮಕ್ಕಳೊಂದಿಗೆ ಬಹು ಪ್ರೀತಿಯಿಂದ ವರ್ತಿಸುತ್ತಿದ್ದನು. ಅವ
ರಿಗೆ ತರತರದ ಒಡವೆಗಳನ್ನು ಪ್ರತ್ಯಕ್ಷವಾಗಿ ತೋರಿಸಿ, ವಿಧವಿಧದ ಸಂಗತಿಗಳನ್ನು

ಅವರಿಗೆ ವಿವರವಾಗಿ ಹೇಳಿ, ಅವರ ಪ್ರಶ್ನಗಳಿಗೆ ಸಮರ್ಪಕವಾದ ಉತ್ತರಗಳ ಕೊಟ್ಟು, ಪ್ರತಿ ಒಂದು ವಿಷಯವು ಅವರ ಮನಸ್ಸಿನಲ್ಲಿ ಚೆನ್ನಾಗಿ ಬಿಂಬಿಸುವ ಮಾಡುತ್ತಿದ್ದನು. ಇದರಿಂದ ಅವರ ಬುದ್ಧಿಯು ಚಿಕ್ಕಂದಿನಲ್ಲಿಯೇ ಒಳಿತ ಬೆಳೆಯಿತು. ಇದರ ಹೊರತು ನೋಡಿದ ಅಥವಾ ಕೇಳಿದ ಪ್ರತಿ ಒಂದು ಸ ಯು ವಿಷಯವಾಗಿ ವಿಚಾರ ಮಾಡುವ ಶಕ್ತಿಯೂ ಜಿಜ್ಞಾಸೆಯೂ ಅವರಲ್ಲಿ ಹುಟ್ಟಿ ವು. ಇವುಗಳನ್ನು ಹುಟ್ಟಿಸುವದು ಬಹು ಕೌಶಲ್ಯದ ಕೆಲಸವು. ಇದು ತಾಯಿ ತಂದೆಗಳಿಗೆ ಸಾಧ್ಯವಿರುವಷ್ಟು ಶಾಲೆಯ ಗುರುಗಳಿಗೆ ಸಾಧ್ಯವಿರುವದಿಲ್ಲ. ಯಾಕೆಂ ದರೆ ಹೆತ್ತ ತಾಯಿಗೂ ಮಕ್ಕಳನ್ನಾಡಿಸುವ ತೊತ್ತಿಗೂ ಇರುವಷ್ಟು ಹೆಚ್ಚು ಕಡಿ ಮೆಯು ತಾಯಿತಂದೆಗಳಿಗೂ ಶಾಲಾ ಗುರುಗಳಿಗೂ ಇರುವದು. ಒಂದುವೇಳೆ ಅದಕ್ಕು ಹೆಚ್ಚಿರುವದೆಂದು ಹೇಳಿದರೂ ಒಪ್ಪುವದು.

ಸರ್ ಜಾನ್ ಗ್ಲ್ಯಾಡ್‌ಸ್ಟವ್ನನು ತನ್ನ ಮಕ್ಕಳನ್ನೆಲ್ಲಾ ಬಳಿಯಲ್ಲಿ ಕುಳ್ಳಿರಿಸಿ ಕೊಂಡು, ಯಾವುದೊಂದು ಸಾಧಾರಣ ವಿಷಯದ ಮೇಲೆ ಅವರೊಡನೆ ವಾದವಿವಾ ದಗಳನ್ನು ಮಾಡುತ್ತಲೂ ಕೋಟಿಕ್ರಮ ನಡೆಯಿಸುತ್ತಲೂ ಕುಳಿತುಕೊಳ್ಳುತ್ತಿದ್ದ ನು. ಈ ಪ್ರಸಂಗದಲ್ಲಿ ನಡುವೆ ಹೊಸ ವಿಷಯು ಹೊರಟರೆ, ಅದನ್ನು ಕುರಿತು ತಾನು ಮೊದಲು ಮಾತನಾಡಿ, ಆಮೇಲೆ ಒಬ್ಬೊಬ್ಬರಿಗೆ ಮಾತನಾಡಹೇಳುತ್ತಿದ್ದ ನು. ಇಷ್ಟಾದ ಮೇಲೆ ಅವನು ಆ ವಿಷಯಕ್ಕೆ ಸಾಧಕ ಬಾಧಕ ಪ್ರಮಾಣಗಳನ್ನು ತೋರಿಸಿ, ಕಡೆಗೆ ತನ್ನ ತೀರ್ಪನ್ನು ಹೇಳುತ್ತಿದ್ದನು. ಈ ಕಾಲದಲ್ಲಿ ಒಬ್ಬನು ಹೇ ಳಿದ್ದೇ ನಿಜವೆಂದು ಉಳಿದವರು ಎಂದೂ ಒಪ್ಪಿಕೊಳ್ಳುತ್ತಿದ್ದಿಲ್ಲ. ಅವರ ಈ ವಾದ ವಿವಾದಗಳನ್ನು ಕಿವಿಗೊಟ್ಟು ಕೇಳಿದ ಒಬ್ಬ ಗೃಹಸ್ಥನು ಬರೆದಿರುವದು ಹೇಗೆಂದರೆ:- " ಇಂಥದೊಂದು ಪದಾರ್ಥವನ್ನು ಸುಟ್ಟು ತಿನ್ನುವದು ಹಿತಕರವೋ, ಇಲ್ಲವೆ ಬೇ ಯಿಸಿ ತಿನ್ನುವದು ಹಿತಕರವೋ; ಇಂಥದೊಂದು ಕಿಟಕಿಯನ್ನು ಮುಚ್ಚಿದರೆ ಲೇ ಸೋ, ತೆರೆದರೆ ಲೇಸೋ; ನಾಳೆ ಆಕಾಶದಲ್ಲಿ ಮೋಡಗಳು ಹುಟ್ಟುವವೋ, ಅಥ ವಾ ಇಲ್ಲವೋ; ಈ ತರದ ಬಳಕೆಯೊಳಗಿನ ವಿಷಯಗಳ ಮೇಲೆ ಸಹ ಅವರಲ್ಲಿ ಚರ್ಚೆಗಳೂ ವಾಗ್ವಾದಗಳೂ ಭರದಿಂದ ಸಾಗುತ್ತಿದ್ದವು. ಈ ಕಾಲದಲ್ಲಿ ಅವರೊ ಳಗಿನ ಯಾವನೊಬ್ಬನಾದರೂ ಸುಮ್ಮ ಸುಮ್ಮನೆ ಬಾಯಿಗೆ ಬಂದದ್ದನ್ನು ಮಾತನಾ ಡುತ್ತಿದ್ದಿಲ್ಲ. ಅವನು ತನ್ನ ಮಾತಿಗೆ ತಕ್ಕ ಪ್ರಮಾಣಗಳನ್ನೂ ದೃಷ್ಟಾಂತಗಳನ್ನೂ ಕೊಟ್ಟು, ವಿಷಯ ಪ್ರತಿಪಾದನ ಮಾಡಲು ಹವಣಿಸುತ್ತಿದ್ದನು." ಚಿಕ್ಕಂದಿನಲ್ಲಿ ಯೇ ಈ ರೀತಿಯಾಗಿ ಉಪನ್ಯಾಸ ಮಾಡುವದನ್ನೂ ವಾದವಿವಾದ ನಡೆಯಿಸುವದ ನ್ನೂ ಅಭ್ಯಾಸಿಸುವ ಮಕ್ಕಳು ನಿಶ್ಚಯವಾಗಿ ದೈವಶಾಲಿಗಳೆಂದು ಹೇಳಬೇಕು.

ಈ ವೇಳೆಗೆ ಮನೆಯಲ್ಲಿಯೂ ಮನೆಯ ನೆರೆಯಲ್ಲಿದ್ದ ಶಾಲೆಯಲ್ಲಿಯೂ ವಿಲಿ

ಗ್ಲ್ಯಾಡ್‌ಸ್ಟನ್ನನು ಈಟನ್ ವಿದ್ಯಾಲಯವನ್ನು ಸೇರಿದ್ದು, ೧೮೨೧, ಸೆಪ್ಟೆಂಬರ. ಈ ವಿದ್ಯಾಲಯದ ಮಹತ್ವವು.

ಯಮ್ ಗ್ಲ್ಯಾಡ್‌ಸ್ಟನ್ನನು ಮೊದಲಿನ ಇಯತ್ತೆಗಳನ್ನು ಕಲಿತಮೇಲೆ, ಅವನ ತಾಯಿತಂದೆಗಳು ಅವನನ್ನು (Eton) ಈಟನ್ನವೆಂಬ ಪಟ್ಟಣದೊಳಗಿನ ಪ್ರಸಿದ್ಧವಾದ ವಿದ್ಯಾಲಯಕ್ಕೆ ಕಳುಹಿಸಿದರು. ಈ ವಿದ್ಯಾಲಯವು ಬಹು ಪುರಾತನದ್ದು. ಇಂಗ್ಲಂಡದ ಅರಸನಾದ ೬ನೆಯ ಹೆನ್ರಿಯು ಚಿಕ್ಕವನಿದ್ದಾಗ, ತನ್ನ ಸ್ವಂತ ದುಡ್ಡಿನಿಂದ ತೀರ ಬಡ ಹುಡುಗರ ಸಲುವಾಗಿ ೧೪೪೦ನೆಯ ಇಸವಿಯಲ್ಲಿ ಈ ಶಾಲೆಯನ್ನು ಸ್ಥಾಪಿಸಿದನು. ಈ ವಿದ್ಯಾಲಯದ ಮಹತ್ವವು ಬರಬರುತ್ತ ಬೆಳೆದು, ಈಗಲಂತು ಬಹಳೇ ಬೆಳೆದದೆ. ಇದನ್ನು ಸರಿಗಟ್ಟುವ ವಿದ್ಯಾಲಯವು ಇಂಗ್ಲಂಡದಲ್ಲಿ ಮತ್ತೊಂದಿಲ್ಲೆಂದು ಎಷ್ಟೋ ಜನರು ಹೇಳುವರು. ಈ ಮಾತಿಗೆ ಗ್ಲ್ಯಾಡ್‌ಸ್ಟನ್ನನು ಸಹ ಒಪ್ಪಿಕೊಂಡಿರುವನು. ಈ ಶಾಲೆಯಲ್ಲಿ ಲ್ಯಾಟಿನ್ ಮತ್ತು ಗ್ರೀಕ್ ಭಾಷಾವಿಷಯಗಳಿಗೆ ಲಕ್ಷ್ಯಗೊಡುವಷ್ಟು ಉಳಿದ ವಿಷಯಗಳಿಗೆ ಲಕ್ಷ್ಯಗೊಡುವದಿಲ್ಲ. ಇಲ್ಲಿ ಮೇಲಿನ ಎರಡು ವರ್ಗಗಳೊಳಗಿನ ವಿದ್ಯಾರ್ಥಿಗಳ ಆಜ್ಞೆಗಳನ್ನೆಲ್ಲ ಕೆಳಗಿನ ವಿದ್ಯಾರ್ಥಿಗಳು ಊಳಿಗದವರಂತೆ ಪಾಲಿಸಬೇಕೆಂಬದೊಂದು ವಿಶೇಷ ಕಟ್ಟಳೆಯುಂಟು. ಇದು ತೀರ ಒತ್ತಾಯದ್ದೇ ಸರಿ. ಇಲ್ಲಿ ಸ್ವತಃ ಲಕ್ಷ್ಯಗೊಟ್ಟು ಕಲಿಯುವ ವಿದ್ಯಾರ್ಥಿಗಳ ಅಭ್ಯಾಸವು ಚೆನ್ನಾಗಿ ಆಗುವದು. ಆದರೆ ಅದಕ್ಕೆ ಅಷ್ಟೊಂದು ಲಕ್ಷ್ಯಗೊಡದ ಮೈಗಳ್ಳರಿಗೆ ಬೇಕಾದಷ್ಟು ಸಡಿಲು ಸಿಕ್ಕು, ಅವರ ಅಭ್ಯಾಸವು ಹರಹರಕಾಗುವದು. ಈ ಸ್ಥಿತಿಯು ಯಾವ ಶಾಲೆಯಲ್ಲಾದರೂ ಸ್ವಲ್ಪ ಹೆಚ್ಚುಕಡಿಮೆ ಪ್ರಮಾಣದಿಂದಿರುವದು. ಈ ಶಾಲೆಯಲ್ಲಿ ೧೦ ವರ್ಷಕ್ಕಿಂತ ಕಡಿಮೆ ವಯಸ್ಸಿನವರನ್ನು ಸೇರಿಸಿಕೊಳ್ಳುವದಿಲ್ಲ. ೧೮ ವರ್ಷದ ವಯಸ್ಸು ಮೀರಿದವರನ್ನು ಇಟ್ಟುಕೊಳ್ಳುವದಿಲ್ಲ. ಇದುವರೆಗೆ ಗ್ರೇಟ್‌ಬ್ರಿಟನ್ನದಲ್ಲಿ ಕೀರ್ತಿಯನ್ನು ಪಡೆದವರೊಳಗಿನ ಅನೇಕ ಪುರುಷರು ಅಂದರೆ (Grey) ಗ್ರೇ, (Shelley ) ಶೆಲೇ, (Arthur wellesley) ಆರ್ಥರ್ ವೆಲ್ಲೆಸ್ಲಿ, (Pitt) ಪಿಟ್, (Fox) ಫಾಕ್ಸ್, (Lord North) ಲಾರ್ಡ್ ನಾರ್ಥ, ಮೊದಲಾದವರು ಇದೇ ಶಾಲೆಯ ವಿದ್ಯಾರ್ಥಿಗಳಾಗಿದ್ದರು. ಹಿಂದುಸ್ಥಾನದ ಮೊದಲನೆಯ ಸರ್ವಾಧಿಪತಿಯಾದ (Lord Canning) ಲಾರ್ಡ್ ಕ್ಯಾನಿಂಗನು ಗ್ಲ್ಯಾಡ್‌ಸ್ಟನ್ನನ ಸಹಾಧ್ಯಾಯಿಯು. ಈ ಶಾಲೆಯಲ್ಲಿ ಲೌಕಿಕ ಶಿಕ್ಷಣವೂ ಧರ್ಮಶಿಕ್ಷಣವೂ ಕೂಡೇ ನಡೆಯುವವು. ಈ ವಿದ್ಯಾಲಯವು ಎಡರಿಲ್ಲದೆ ನಿರಂತರವಾಗಿ ನಡೆಯಬೇಕೆಂಬ ಉದ್ದೇಶದಿಂದ ಪ್ರತಿವರ್ಷವೂ ೩೦ ಲಕ್ಷ ರೂಪಾಯಿಗಳ ಆದಾಯವುಳ್ಳದ್ದೊಂದು ಸ್ವತಂತ್ರವಾದ ಧನಸಂಚಯವು ಸ್ಥಾಪಿಸಲ್ಪಟ್ಟಿರುವದು.

ಈಟನ್-ವಿದ್ಯಾಲಯದಲ್ಲಿ ಇದ್ದಾಗ ಗ್ಲಾಡ್‌ಸ್ಟನ್ನನು ತೋರಿಸಿದ ಸದ್ಗುಣಗಳು.

ವಿಲಿಯಮ್ ಗ್ಲ್ಯಾಡ್‌ಸ್ಟನ್ನನು ಈ ಶಾಲೆಯನ್ನು ಸೇರಿದಾಗ್ಗೆ ೧೧ ವರ್ಷದ ತೀರ ಎಳಕನಾಗಿದ್ದನು. ಆದರೂ ಅವನಲ್ಲಿ ಗೃಹಶಿಕ್ಷಣದಿಂದ ಜ್ಞಾನಸಂಪಾದನಾಭಿರುಚಿಯೂ ಧರ್ಮನಿಷ್ಠೆಯೂ ಹುಟ್ಟಿ, ಒಳಿತಾಗಿಯೇ ಬಲಗೊಂಡಿದ್ದವು. ಅವನು ಬಲು ಚಲುವನಾಗಿದ್ದನು. ಸಾವಿರಾರು ಹುಡುಗರಲ್ಲಿ ಅವನನ್ನು ಸೌಂದರ್ಯದಲ್ಲಿ ಸರಿಗಟ್ಟುವವರು ಯಾರೂ ಇದ್ದಿಲ್ಲ. ಅವನ ಪ್ರಕೃತಿಯಲ್ಲಿ ಲೇಶವೂ ದೋಷವಿದ್ದಿಲ್ಲ. ಅವನ ಮುಖದಲ್ಲಿ ಉಲ್ಲಾಸವೃತ್ತಿಯು ಉಕ್ಕುತ್ತಲೂ ಕಾಂತಿಯು ಹೊರಚಿಮ್ಮುತ್ತಲೂ ಇದ್ದವು. ಅವನನ್ನು ನೋಡಿದವರ ಮನಸ್ಸುಗಳು ಅವನಲ್ಲಿಯೇ ಮೋಹಗೊಳ್ಳುತ್ತಿದ್ದವು. ಅಭ್ಯಾಸದಲ್ಲಂತು ಅವನ ಕೈಹಿಡಿಯುವವರು ಯಾರೂ ಇದ್ದಿಲ್ಲ. ಅವನು ತುಂಬಾ ಧರ್ಮಶ್ರದ್ಧೆಯುಳ್ಳವನಾಗಿದ್ದದರಿಂದ, ಅವನಲ್ಲಿ ಶುದ್ಧಾಚರಣೆಯೂ ವಿನಯವೂ ಪರೋಪಕಾರಬುದ್ಧಿಯೂ ಜಾಗ್ರತವಾಗಿದ್ದವು. ಇದರಿಂದ ಅವನ ಶ್ರೇಷ್ಠತ್ವವು ಉಳಿದ ವಿದ್ಯಾರ್ಥಿಗಳಲ್ಲಿ ಸಹಜವಾಗಿಯೇ ಬೆಳೆಯಿತು. ಇವೆಲ್ಲ ಕಾರಣಗಳಿಂದ, ಅವರು ಅವನಿಗೆ ವಿಧೇಯರಾಗುವದಾಗಲಿ, ಅವನಿಗೆ ವಿಶೇಷ ಮನ್ನಣೆಗಳನ್ನೀಯುವದಾಗಲಿ ಏನೂ ಅರಿದಲ್ಲ. (Bishop Hamilton) ಧರ್ಮಾಧಿಕಾರಿಯಾದ ಹ್ಯಾಮಿಲ್ಟನ್ನನು ಅವನ ಸಹಪಾಠಿಯಾಗಿದ್ದನು. ಮುಂದೆ ಕೆಲವು ವರ್ಷಗಳ ತರುವಾಯ ಅವನು ಒಂದು ಸ್ಥಳದಲ್ಲಿ ಬರೆದಿಟ್ಟಿರುವದೇನೆಂದರೆ:—"ನಾನು ಈಟನ್ ಶಾಲೆಯಲ್ಲಿದ್ದಾಗ ತೀರ ಪುಂಡಗಳ್ಳನಾಗಿದ್ದೆನು. ಆದರೆ ಕೆಲವು ದಿವಸಗಳಲ್ಲಿಯೇ ಗ್ಲ್ಯಾಡ್‌ಸ್ಟನ್ನನ ಜೊತೆಯು ನನಗೆ ದೊರೆಯಿತು. ಇದರಿಂದ ನನ್ನ ದೈವವೇ ತೆರೆಯಿತೆಂದು ಹೇಳಬಹುದು. ಇಲ್ಲದಿದ್ದರೆ ನಾನು ಕುಸಂಗತಿ ಹಿಡಿದು, ತೀರ ಕೆಟ್ಟುಹೋಗುವ ಸಂಭವವಿತ್ತು." ಗ್ಲ್ಯಾಡ್‌ಸ್ಟನ್ನನು ಈ ಶಾಲೆಯನ್ನು ಬಿಟ್ಟುಹೋದ ಅರುವತ್ತು ವರ್ಷಗಳ ತರುವಾಯ ಅವನ ಜೊತೆಯಲ್ಲಿ ಕಲಿತವನಾದ ಇನ್ನೊಬ್ಬನು "ಗ್ಲ್ಯಾಡ್‌ಸ್ಟನ್ನನು ಒಂದು ಅವಸರದಲ್ಲಿ ಮದ್ಯಪ್ರಾಶನವನ್ನು ಹೇಗೆ ನಿಷೇಧಿಸಿದನೆಂಬ ಮಾತು ಇನ್ನೂ ನನ್ನ ನೆನಪಿನಲ್ಲುಂಟು." ಎಂದು ಹೇಳಿ, ಅವನನ್ನು ಬಲು ಬಣ್ಣಿಸಿದ್ದಾನೆ. ಅವನು ಅತ್ಯಧಿಕ ವಿದ್ಯಾವ್ಯಾಸಂಗಿಯೂ ಸನ್ಮಾರ್ಗಿಯೂ ಆಗಿದ್ದಂತೆ ಕೋಮಲಾಂತಃಕರಣಿಯೂ ಆಗಿದ್ದನು. ಈಟನ್ ಪಟ್ಟಣದೊಳಗಿನ ಒಂದು ಜಾತ್ರೆಯಲ್ಲಿ ಹಂದಿಗಳ ಬಾಲಗಳನ್ನು ಕಡಿದು, ಆ ಬಡ ಪ್ರಾಣಿಗಳನ್ನು ಪರಿಪರಿಯಿಂದ ಪೀಡಿಸುವ ರೂಢಿಯು ಬಹು ವರ್ಷಗಳಿಂದ ಬಿದ್ದಿತ್ತು. ಇದನ್ನು ನೋಡಿ, ಗ್ಲ್ಯಾಡ್‌ಸ್ಟನ್ನನು ಕಳವಳಗೊಂಡು "ಈ ನಡತೆಯು ತೀರ ಕೆಟ್ಟದ್ದು. ಇದು ಸುಶಿಕ್ಷಿತರ ಕೆಲಸವಲ್ಲ" ಎಂದು ಹೇಳಿ ಅದನ್ನು ಬಹಳವಾಗಿ ತಿರಸ್ಕರಿಸಿದನು. ಇದಕ್ಕೆ ಕೆಲವು ಜನ ವಿದ್ಯಾರ್ಥಿಗಳು

ಸೇರದೆ, ಅವನ ಮೇಲೆ ಮುನಿದು ಅವನಿಗೆ ತಮ್ಮಿಂದಾದಷ್ಟು ಚೇಷ್ಟೆ ಮಾಡಹತ್ತಿದರು. ಆದರೆ ಅವನು ಇದನ್ನು ತುಸುವಾದರೂ ಮನಸ್ಸಿನಲ್ಲಿ ಹಿಡಿಯದೆ, ಸದುಪದೇಶಗಳಿಂದ ಅವರ ಮನಸ್ಸನ್ನೊಲಿಸುವ ಪ್ರಯತ್ನ ನಡೆಸಿಸಿದನು. ಇದೇ ವೇಳೆಗೆ ಅವನ ಶಾಲೆಯಲ್ಲಿಯೇ ಬಹು ದಿವಸಗಳಿಂದ ನಡೆಯುತ್ತ ಬಂದದ್ದೊಂದು ಕೆಟ್ಟ ಪದ್ಧತಿ ಇತ್ತು. ಅದೇನೆಂದರೆ:—ಯಾವನೊಬ್ಬ ವಿದ್ಯಾರ್ಥಿಯು ಎಲ್ಲಕ್ಕೂ ಮೇಲಿನ ವರ್ಗಕ್ಕೆ ಹೋದರೆ, ಅವನು ಉಳಿದ ಹುಡುಗರಿಗೆಲ್ಲ ಒಂದು ಊಟವನ್ನು ಕೊಡಬೇಕಾಗುತ್ತಿತ್ತು. ಈ ಪ್ರಸಂಗದಲ್ಲಿ ಶಾಲೆಯೊಳಗಿನ ವಿದ್ಯಾರ್ಥಿಗಳು ಹಾಸ್ಯಾಸ್ಪದವಾದ ಹೊಸ ಕವಿತೆಗಳನ್ನೂ ಹಾಡುಗಳನ್ನೂ ಕಟ್ಟಿ ಸಭೆಯಲ್ಲಿ ಅಂದುತೋರಿಸುತ್ತಿದ್ದರು. ಈ ಕವನಗಳಲ್ಲಿ ಬೀಭತ್ಸಕರವಾದ ಶಬ್ದಗಳೇ ನೋಡಿದಲ್ಲೆಲ್ಲ ತುಂಬಿಕೊಂಡಿರುತ್ತಿದ್ದವು. ಈ ಪದ್ಧತಿಗೆ ಗ್ಲ್ಯಾಡ್‌ಸ್ಟನ್ನನು ತುಸುವಾದರೂ ಒಪ್ಪದೆ ಇಂಥದೊಂದು ಪ್ರಸಂಗದಲ್ಲಿ ತಾನೂ ಒಂದು ಕವಿತೆಯನ್ನು ರಚಿಸಿ ಅದರಲ್ಲಿ ಈ ಪದ್ಧತಿಯನ್ನು ಸಾದ್ಯಂತವಾಗಿ ವರ್ಣಿಸಿ, ಕಡೆಗೆ ಅದನ್ನು ಸಂಪೂರ್ಣವಾಗಿ ನಿಷೇಧಿಸಿದ್ದನು; ಇದಲ್ಲದೆ ಹಂದಿಗಳ ಸಂಬಂಧದ ಕ್ರೂರತನವನ್ನು ಸಹ ಉಲ್ಲೇಖಿಸಿ ಅದರೊಳಗಿನ ನೀಚತ್ವವನ್ನು ಬಯಲಿಗೆಳೆದು ಅದನ್ನು ಪರಿಪರಿಯಾಗಿ ತಿರಸ್ಕರಿಸಿದ್ದನು. ಇದನ್ನು ಕೇಳಿ ವಿದ್ಯಾರ್ಥಿಗಳೆಲ್ಲರೂ ಕಡು ಸಿಟ್ಟಾಗಿ, ಅವನನ್ನು ಮೇಲಿಂದ ಮೇಲೆ ಮುಳ್ಳಾಡಿಸಲೂ ಕೆಣಕೆಣಕಿ ಅವನಿಗೆ ಕುಚೇಷ್ಟೆಯನ್ನು ಮಾಡಲೂ ಅವನೊಡನೆ ಇಲ್ಲದ್ದೊಂದು ವಾಗ್ವಾದಿಸಲೂ ತೊಡಗಿದರು. ಆದರೆ ಅವನು ಅವುಗಳನ್ನು ಬಹು ತಾಳ್ಮೆಯಿಂದ ತಡೆದುಕೊಂಡು, ತನ್ನ ಮೇಲಾದ ವಾಕ್ಚಾತುರ್ಯದಿಂದ ಅವರ ಮಾತುಗಳನ್ನು ಕಟ್ಟಿ ನೀತಿಯ ವಚನಗಳ ಬೆಳಕನ್ನು ಅವರ ಹೃದಯದಲ್ಲಿ ಕೆಡವಿ, ತನ್ನ ಮಾತಿಗೆ ಅವರನ್ನೊಡಂಬಡಿಸಿದನು. ಈ ರೀತಿಯಾಗಿ ಅವನು ಚಿಕ್ಕತನದಲ್ಲಿಯೇ ತನ್ನ ಸರಿಕರಲ್ಲಿಷ್ಟು ವರ್ಚಸ್ಸನ್ನುಂಟುಮಾಡಿದ್ದು ಸಾಮಾನ್ಯ ಕೆಲಸವಲ್ಲ. ಶಾಲೆಯೊಳಗಿನ ಇವೇ ಆಚರಣೆಗಳು ಬರಬರುತ್ತ ಅವನಲ್ಲಿ ಬಲಗೊಂಡು, ಮುಂದೆ ಅವನ ಕೈಯಿಂದ ದೇಶಕ್ಕೆ ಪ್ರಯೋಜನಕರವಾದ ದೊಡ್ಡ ದೊಡ್ಡ ಕೃತ್ಯಗಳನ್ನು ಮಾಡಿಸಲು ಕಾರಣವಾದವು.

ಈ ಶಾಲೆಯಲ್ಲಿ ಮೇಲಿನ ವರ್ಗಗಳಲ್ಲಿದ್ದ ವಿದ್ಯಾರ್ಥಿಗಳಿಗೆ ವಕ್ತೃತ್ವವನ್ನು ಕಲಿಸುತ್ತಿದ್ದರು. ವಿದ್ಯಾರ್ಥಿಗಳು ಲ್ಯಾಟಿನ್ ಅಥವಾ ಗ್ರೀಕ್ ಭಾಷೆಯಲ್ಲಿರುವ ಪ್ರಸಿದ್ಧ ಪುರುಷರ ಭಾಷಣಗಳಲ್ಲಿ ತಮಗೆ ಬೇಕಾದದ್ದೊಂದನ್ನು ಆರಿಸಿಕೊಂಡು ಪಾಠಮಾಡಿ, ಪ್ರಾಚೀನಕಾಲದ ಉಡತೊಡಗೆಗಳನ್ನು ಧರಿಸಿಕೊಂಡು, ಶಾಲೆ ಬಿಡುವ ಹೊತ್ತಿಗೆ ಕೂಡಿದ ಸಭೆಯಲ್ಲಿ ಅದನ್ನು ಮಾತನಾಡಿ ತೋರಿಸುವ ಸಂಪ್ರದಾಯವಿತ್ತು. ಇದಕ್ಕೆ ಸರಿಯಾಗಿ ಗ್ಲ್ಯಾಡ್‌ಸ್ಟನ್ನನಾದರೂ 'ರೋಮದ ಬೃಹಸ್ಪತಿ' ಎಂದೆನಿಸಿಕೊಂಡ (Ciciro) ಸಿಸಿರೋ ಎಂಬವನು ಕೇಯಸ್ ವೇರೀಸನ ವಿರು

ದ್ಧವಾಗಿ ಮಾಡಿದ ಭಾಷಣವನ್ನು ಕಲಿತು, ಉತ್ತಮ ರೀತಿಯಿಂದ ಮಾತನಾಡಿ ತೋರಿಸಿದನು.

ವಿಲಿಯಮ್ ಗ್ಲ್ಯಾಡಸ್ಟನ್ನನು ತನ್ನ ಶಾಲೆಯ ಗೆಳೆಯರೊಡನೆ ನಾನಾತರದ ಆಟಗಳನ್ನಾಡುತ್ತಿದ್ದನು. ಅವುಗಳಲ್ಲಿ ಅವನು ಹಿರಿಯ ಹುದ್ದೆಯು ಮಾತ್ರ ಎಂದೂ ಆಗುತ್ತಿದ್ದಿಲ್ಲ. ಚೆಂಡಿನಾಟವು ಅವನ ಪ್ರೀತಿಯ ಆಟವು. ಆದರೂ ಇದಕ್ಕಿಂತಲು ತನ್ನ ಓರಿಗೆಯ ಗೆಳೆಯರೊಡನೆ ಬೇಗ ಬೇಗನೇ ನಡೆಯುತ್ತ ದೂರ ದೂರ ತಿರುಗಾಡಿ ಬರುವದನ್ನು ಅವನು ಹೆಚ್ಚು ಪ್ರೀತಿಸುತ್ತಿದ್ದನು. ಇದರಿಂದ ಎರಡು ಲಾಭಗಳುಂಟು. ತಿರುಗಾಟದಿಂದ ವ್ಯಾಯಾಮದ ಲಾಭವಂತು ಆಗೇ ಆಗುವದು. ಇದರ ಹೊರತು ಪರಸ್ಪರರ ಸಂಭಾಷಣದಿಂದ ಜ್ಞಾನವೂ ಬೆಳೆಯುವದು. ಈ ತಿರುಗಾಟದ ವ್ಯಾಯಾಮವು ಮೇಲಾದದ್ದೆಂದು ಈಗಿನ ವಿದ್ಯಾರ್ಥಿಗಳು ಕೂಡ ಎಣಿಸುವರು. (James Milnes Gaskell) ಜೇಮ್ಸ ಮಿಲ್‌ನೆಸ್ ಗಾಸ್ಕೆಲ್ಲನೆಂಬವನೊಬ್ಬ ವಿದ್ಯಾರ್ಥಿಯು ಅವನೊಡನೆ ತಿರುಗಾಡಲಿಕ್ಕೆ ಹೋಗುತ್ತಿದ್ದನು. ಅವನು ಒಂದುಸಾರೆ ಈ ಸಂಗತಿಯನ್ನು ಉದ್ದೇಶಿಸಿ, ತನ್ನ ತಾಯಿಗೆ ಒಂದು ಪತ್ರವನ್ನು ಬರೆದನು. ಅದರ ತಾತ್ಪರ್ಯವೇನೆಂದರೆ:—"ನಿನ್ನೆ ಸಾಯಂಕಾಲದಲ್ಲಿ ನಾನು ಗ್ಲ್ಯಾಡ್‌ಸ್ಟನ್ನನ ಜೊತೆಯಲ್ಲಿ ತಿರುಗಾಡಲಿಕ್ಕೆ ಹೋಗಿದ್ದೆನು. ಅವನು ಮಹಾ ಬುದ್ಧಿಶಾಲಿಯಾದ ವಿದ್ಯಾರ್ಥಿಯಾಗಿದ್ದಾನೆ. ಅವನಷ್ಟು ಜಾಣನನ್ನೂ ದೀರ್ಘದೃಷ್ಟಿಯುಳ್ಳವನನ್ನೂ ನಾನು ಇದುವರೆಗೂ ನೋಡಿದ್ದಿಲ್ಲ." ಇದು ಒಬ್ಬ ಹುಡುಗನು ಮತ್ತೊಬ್ಬ ಹುಡುಗನ ವಿಷಯವಾಗಿ ಕೊಟ್ಟ ಅಭಿಪ್ರಾಯವಾಗಿದೆ. ಈ ಅಭಿಪ್ರಾಯವು ಅಷ್ಟೇನು ಮಹತ್ವವುಳ್ಳದ್ದಾಗಿರದಿದ್ದರೂ ಗ್ಲ್ಯಾಡಸ್ಟನ್ನನು ತನ್ನ ಶಾಲೆಯ ವಿದ್ಯಾರ್ಥಿಗಳಲ್ಲಿ ಯಾವ ತರದ ಮನೋಭಾವವನ್ನು ಹುಟ್ಟಿಸಿದ್ದನೆಂಬದು ಇದರಿಂದ ಸರಸಾಗಿ ತಿಳಿಯುವದು.

ಈಟನ್ ಶಾಲೆಯ ವಿದ್ಯಾರ್ಥಿಗಳು ಸ್ಥಾಪಿಸಿದ್ದೊಂದು ಸಭೆ ಇತ್ತು. ಈ ಸಭೆಯಲ್ಲಿ ಗೊತ್ತು ಮಾಡಿದ ದಿನ, ವ್ಯಾಖ್ಯಾನವನ್ನು ಕೊಡುತ್ತಿದ್ದರು. ಅಥವಾ ನಿಬಂಧವನ್ನು ಓದುತ್ತಿದ್ದರು. ಆಮೇಲೆ ಅದೇ ವಿಷಯವನ್ನು ಕುರಿತು ವಾದವಿವಾದಗಳನ್ನು ನಡೆಯಿಸುತ್ತಿದ್ದರು. ಗ್ಲ್ಯಾಡ್‌ಸ್ಟನ್ನನು ಈ ಸಭೆಯಲ್ಲಿ ಕಾಲಿಟ್ಟ ತುಸು ದಿವಸಗಳಲ್ಲಿಯೇ ಅದರ ಮುಂದಾಳಾದನು. ಈ ಸಭೆಯಲ್ಲಿ ರಾಜಕೀಯ ಪ್ರಚಲಿತ ವಿಷಯಗಳನ್ನು ಚರ್ಚಿಸಬಾರದೆಂಬದೊಂದು ನಿಯಮವಿತ್ತು. ಆದರೆ ರಾಜಕೀಯ ಹಳೆ ವಿಷಯಗಳ ಮೇಲೆ ವಿವೇಚನೆ ಮಾಡಲು ಏನೂ ಅಡ್ಡಿ ಇದ್ದಿಲ್ಲ. ಈ ವಿಷಯಗಳಲ್ಲಿ ನಡೆಯುವ ವಾದವಿವಾದಗಳಿಂದ ಪ್ರಕೃತದಲ್ಲಿ ನಡೆಯುತ್ತಿದ್ದ

ವಿಷಯುಗಳ ಬಗ್ಗೆ ಯಾವ ಯಾವ ಸಭಾಸದರ ಮತಗಳು ಹೇಗೆ ಹೇಗೆ ಇರುತ್ತ ವೆಂಬದು ವ್ಯಕ್ತವಾಗುತ್ತಿತ್ತು. ಇದರಿಂದ ಗ್ಲ್ಯಾಡ್‌ಸ್ಟನ್ನನು ವಾಡಿಕೆಯಾಗಿ ಕಾನ್‌ಸರ್ವೇಟೀವ್ ಪಕ್ಷದ ಅಭಿಮಾನಿಯಾಗಿರುವನೆಂದು ಸ್ಪಷ್ಟವಾಗಿ ಕಂಡುಬರುತ್ತಿತ್ತು.

ಈಟನ್‌ಸ್ಕೂಲಿನ ನೋಟಗಳಲ್ಲಿ ವಿಲಿಯಮ್ ಗ್ಲ್ಯಾಡ್‌ಸ್ಟನ್ನನು ಹಿರಿಯತನವನ್ನು ವಹಿಸುತ್ತಿದ್ದಿಲ್ಲವೆಂದು ಹಿಂದೆ ಹೇಳಿದ್ದೇವೆ. ಆದರೆ ಅವನು ಈ ಸಭೆಯೊಳಗಿನ ವಾದವಿವಾದಗಳಲ್ಲಿ ಮಾತ್ರ ಎಲ್ಲರಿಗಿಂತ ಮುಂದಿರುತ್ತಿದ್ದನು. ಅವನು ಯಾವುದೊಂದು ವಿಷಯದ ಮೇಲೆ ಮಾತನಾಡಹತ್ತಿದನೆಂದರೆ, ಇಡಿ ಸಭೆಯನ್ನೇ ಗಡಗಡ ನಡುಗಿಸಿ ಬಿಡುತ್ತಿದ್ದನು. ಅವನು ಏನು ಮಾತನಾಡಿದರೂ ಅನ್ಯರಿಗೆ ಇಂಬು ಸಿಗದಂತೆ ಸಪ್ರಮಾಣವಾಗಿ ಮಾತನಾಡುತ್ತಿದ್ದನು. ಒಂದುವೇಳೆ ಅವನ ವಿರುದ್ಧವಾಗಿ ಯಾರಾದರೂ ಸ್ವಲ್ಪ ಮಾತನ್ನಾಡಿದರಾಯಿತು, ಅವನು ಕೂಡಲೆ ತನ್ನ ಬಲವಾದ ವಕ್ತೃತ್ವ ಶಕ್ತಿಯಿಂದ ಅವರಿಗೆ ಸಾಕು ಸಾಕು ಅನ್ನಿಸಿಬಿಡುತ್ತಿದ್ದನು. ಸಭೆಯಲ್ಲಿ ಬಲ್ಲವರೇ ಇರತಕ್ಕದ್ದು, ಗಹನ ಮತ್ತು ಉಪಯುಕ್ತ ವಿಷಯುಗಳನ್ನೇ ಆರಿಸಿ ನಿಯಮಿಸತಕ್ಕದ್ದು, ವಿಷಯುಗಳ ಮೇಲೆ ವಾದವಿವಾದ ನಡೆಯಿಸುವವರು ಸಭ್ಯರೀತಿಯಿಂದ ಮಾತನಾಡತಕ್ಕದ್ದು, ಸಭಾಸದರು ಬರಬರುತ್ತ ಹೆಚ್ಚು ಹೆಚ್ಚು ಜ್ಞಾನವನ್ನು ಪಡಕೊಳ್ಳುತ್ತ ಹೋಗಬೇಕು ಇವೇ ಮುಂತಾದ ಸಂಗತಿಗಳನ್ನು ಮೇಲುಪಂಕ್ತಿಯಾಗಿರಿಸಿಕೊಂಡು ಅವನು ಯಾವಾಗಲೂ ಪ್ರಯತ್ನಿಸುತ್ತಿದ್ದನು.

ಈಟನ್‌ಮಿಸಿಲೆನೀ ಎಂಬ ಮಾಸಿಕ ಪುಸ್ತಕವು.

ಗ್ಲ್ಯಾಡ್‌ಸ್ಟನ್ನನು ಈ ಶಾಲೆಯನ್ನು ಪ್ರವೇಶಿಸಿದ ೭ನೆಯ ವರ್ಷದಲ್ಲಿ ಅಂದರೆ ೧೮೨೭ನೆಯ ಇಸವಿಯಲ್ಲಿ ಕೆಲವು ಜನ ವಿದ್ಯಾರ್ಥಿಗಳು ಕೂಡಿ Eton Miscellany ಈಟನ್‌ಮಿಸಿಲೆನೀ ಎಂಬ ಹೆಸರಿನದೊಂದು ಮಾಸಿಕ ಪುಸ್ತಕವನ್ನು ಹೊರಡಿಸ ಹತ್ತಿದರು. ಅದು ಹೊರಡಲಿಕ್ಕೆ ಗ್ಲ್ಯಾಡ್‌ಸ್ಟನ್ನನ ಪ್ರಯತ್ನಗಳೇ ವಿಶೇಷ ಕಾರಣವಾಗಿದ್ದವು. ಆ ಪುಸ್ತಕಕ್ಕೆ ಬೇಕಾಗುವ ವಿಷಯುಗಳನ್ನು ಬರೆದು ಕೊಡಲು ಬಹುಜನ ವಿದ್ಯಾರ್ಥಿಗಳು ಒಡಂಬಟ್ಟಿದ್ದರು. ಅದು ಜೂನ ತಿಂಗಳಿನಿಂದ ಡಿಶಂಬರದ ವರೆಗೆ ಅಂತೂ ಇಂತೂ ಹೊರಟಿತು. ಆದರೆ ಮುಂದೆ ವಿಷಯುಗಳನ್ನು ಬರೆದು ಕೊಡುವವರು ಇಲ್ಲದಂತೆ ಆಗಲು, ಅದು ಅಷ್ಟಕ್ಕೆ ನಿಂತುಹೋಯಿತು. ಆರಂಭಶೂರತ್ವದ ದೋಷವು ಹೆಚ್ಚುಕಡಿಮೆ ಎಲ್ಲ ಕಡೆಯಲ್ಲಿಯೂ ಇರುವದು. ಆ ದೋಷವು ಬರೀ ದಕ್ಷಿಣಾತ್ಯರಾದ ನಮ್ಮಲ್ಲಿ ಮಾತ್ರವೇ ಇರುವದು ನಿಜವಲ್ಲ. ಆ ಮಾಸಿಕ ಪುಸ್ತಕದಲ್ಲಿ ಗ್ಲ್ಯಾಡ್‌ಸ್ಟನ್ನನ ಎಷ್ಟೋ ಮಹತ್ವದ ಲೇಖಗಳು ಪ್ರಸಿದ್ಧಿಸಲ್ಪಟ್ಟವು. ಅವುಗಳಿಂದ ಅವನ ಹೆಸರು ನಾಲ್ಕು ಜನರಲ್ಲಿ ಪ್ರಸಿದ್ಧಿಗೆ ಬರಲು ಕಾರಣವಾಯಿತು. ಅವನು ತನ್ನದೊಂದು ಲೇಖದಲ್ಲಿ ಬರೆದಿರುವದೇನೆಂದರೆ:—" ಈಗ

ನಾನು ಹಿಡಿದಿರುವ ದಾರಿಯಲ್ಲಿ ಜನರ ಸದಭಿಪ್ರಾಯಸಂಬದೊಂದು ಪ್ರಚಂಡವಾದ ನದಿಯು ಅಡ್ಡಬಂದಿದೆ. ಇದನ್ನು ನೋಡಿದ ಮಾತ್ರದಿಂದಲೇ ನನ್ನ ಎದೆಯು ಡವಗುಟ್ಟಿ ಹಾರುತ್ತಿದೆ. ಇದರಲ್ಲಿ ಈಸುಬಿದ್ದು, ಇದನ್ನು ದಾಟಿ ಹೋಗುವ ಶಕ್ತಿಯು ನನ್ನ ರಟ್ಟೆಯಲ್ಲಿಲ್ಲ. ಆದರೂ ನಾನು ಹಿಂಜರೆಯುವದಿಲ್ಲ. ಯಾಕೆಂದರೆ ಮನುಷ್ಯನ ಪ್ರಯತ್ನಕ್ಕೆ ನಿಲುಕದ ಒಡವೆಯು ಈ ಜಗತ್ತಿನಲ್ಲಿ ಯಾವದೂ ಇಲ್ಲೆಂಬ ಅನುಭವ ಸಿದ್ಧವಾದ ನುಡಿಯು ನನ್ನಲ್ಲಿ ಆಶೆಯನ್ನು ಹುಟ್ಟಿಸಿ ಇದೆ. ಇದಲ್ಲದೆ 'ವಿದ್ಯಾಸಂಪನ್ನವಾದ ಈ ನಾಡಿನಲ್ಲಿ ಮನುಷ್ಯನ ಯೋಗ್ಯತೆಗೆ ಸರಿಯಾದ ಫಲಗಳು ದೊರೆಯದೇ ಇರುವದಿಲ್ಲ; ಒಂದುವೇಳೆ ನಿನ್ನಲ್ಲಿ ಅಂತಹ ಯೋಗ್ಯತೆಯು ಸದ್ಯಕ್ಕೆ ಇಲ್ಲದಿದ್ದರೂ ದೀರ್ಘೋದ್ಯೋಗದಿಂದ ಅದನ್ನು ಪಡಿದುಕೋ, ಅದರ ಸಹಾಯದಿಂದ ನೀನು ಜನರ ಸದಭಿಪ್ರಾಯವೆಂಬ ಪ್ರಚಂಡವಾದ ನದಿಯನ್ನು ಅತಿ ಸುಲಭವಾಗಿ ದಾಟುವಿ' ಎಂದು ನನ್ನ ಮನೋದೇವತೆಯು ನನಗೆ ಸೂಚಿಸುತ್ತದೆ." ಈ ಬರವಣಿಗೆಯಿಂದ ಗ್ಲ್ಯಾಡ್‌ಸ್ಟನ್ನನು ವಿದ್ಯಾರ್ಥಿಯಾಗಿರುವಾಗಲೇ ಇಂಗ್ಲಿಷ್ ದರಬಾರಿನಲ್ಲಿದ್ದ ಅತ್ಯುಚ್ಚಸ್ಥಾನದ ಮೇಲೆ ದೃಷ್ಟಿಯನ್ನಿಟ್ಟಿದ್ದನೆಂದು ಸ್ಪಷ್ಟವಾಗಿ ತಿಳಿಯುವದು. ಈ ಸ್ಥಳವನ್ನು ಅವನಿಗೆ ಕೊಡುವ ಅಧಿಕಾರವು ಸಿಂಹಾಸನಾಧಿಪತಿಗಲ್ಲದೆ ಮತ್ತಾರಿಗೂ ಇದ್ದಿಲ್ಲ.

'ವಕ್ತೃತ್ವ' ಎಂಬ ವಿಷಯದ ಮೇಲೆ ಗ್ಲ್ಯಾಡ್‌ಸ್ಟನ್ನನ ಮತ್ತೊಂದು ಲೇಖವು ಆ ಮಾಸಿಕ ಪುಸ್ತಕದಲ್ಲಿ ಪ್ರಸಿದ್ಧಿಸಲ್ಪಟ್ಟಿರುತ್ತದೆ. ಅದರಿಂದ, ಪಾರ್ಲಮೆಂಟಿನಲ್ಲಿ ಉತ್ತಮ ಭಾಷಣ ಮಾಡುವವರ ಕೀರ್ತಿಯು ಹೇಗೆ ಹಬ್ಬುತ್ತದೆ, ಅವರಿಗೆ ಮನ್ನಣೆಗಳು ಎಂತು ದೊರೆಯುತ್ತವೆ, ಎಂಬ ಸಂಗತಿಗಳು ಆ ತರುಣ ವಿದ್ಯಾರ್ಥಿಯ ಮನಸ್ಸನ್ನು ಸಂಪೂರ್ಣವಾಗಿ ವ್ಯಾಪಿಸಿಕೊಂಡಿದ್ದವೆಂದು ಸ್ಪಷ್ಟವಾಗಿ ತಿಳಿಯುವದು. ಅವನು ಹೇಳುವದೇನೆಂದರೆ:—"ಕುಶಾಗ್ರಬುದ್ಧಿಯವನು ಮತ್ತು ಸ್ವೋನ್ನತಿಯ ಹಂಬಲವುಳ್ಳವನು ವಕ್ತೃತ್ವ ಕಲೆಯನ್ನು ಪಡೆದು, ಪಾರ್ಲಮೆಂಟ್ ಸಭೆಯನ್ನು ಸೇರುವದೊಳಿತು. ಒಂದುವೇಳೆ ಅವನು ಪಾರ್ಲಮೆಂಟಿನಲ್ಲಿ ತನ್ನ ಪ್ರಥಮ-ಭಾಷಣವನ್ನು ಉತ್ತಮರೀತಿಯಿಂದ ಮಾಡಿ, ಸಭಿಕರನ್ನು ತಲೆದೂಗಿಸಿದರೆ, ಮಂತ್ರಿ-ಮಂಡಲದವರು ಅವನಿಗೆ ಮೆಚ್ಚಿ, ಯಾವುದೊಂದು ಮಂತ್ರಿಯ ಸ್ಥಳವನ್ನಾಗಲಿ, ಒಂದುವೇಳೆ ಮುಖ್ಯ-ಮಂತ್ರಿಯ ಸ್ಥಳವನ್ನು ಕೂಡ ಕೊಡಬಹುದು. ಆ ತರುಣನಿಗೆ ಇದಕ್ಕಿಂತಲು ಹೆಚ್ಚಿನದೇನು ಬೇಕು? ಆದರೆ ಇದು ಸುಲಭಸಾಧ್ಯವಾದದ್ದೆಂದು ಮಾತ್ರ ಎಣಿಸಕೂಡದು. ಯಾಕೆಂದರೆ ಅವನು ಅಲ್ಲಿ ಒಂದು ಹೆಚ್ಚಿನ ಎಡರನ್ನು ದಾಟಬೇಕಾಗುವದು. ಮತ್ತು ಒಂದು ಕಠಿಣವಾದ ಪರೀಕ್ಷೆಯನ್ನು ಕೊಡಬೇಕಾಗುವದು. ಈ ಪರೀಕ್ಷೆಯು ನಡೆದ ಸಮಯದಲ್ಲಿ ಒಮ್ಮೊಮ್ಮೆ ಕೇಕರಿಕೆಯ ಅಬ್ಬರಣೆಗಳೂ ಕೆಮ್ಮಿನ ಗರ್ಜನೆಗಳೂ ಸಾಕು-ಸಾಕು, ಕುಳ್ಳಿರುಕು

ಶೈರು ಎಂಬ ಭಯೋತ್ಪಾದಕ ಶಬ್ದಗಳೂ ಹುಟ್ಟಿ, ಅವನ ಎದೆಯೊಡೆಸಿ, ಅವನನ್ನು ನೆಲಕ್ಕೆ ಕುಕ್ಕುರಗೆಡಹುವವು. ಒಮ್ಮೊಮ್ಮೆ ಸೈ-ಸೈ; ಶಾಬಾಸು-ಶಾಬಾಸು; ಸಾಗಲೀ-ಸಾಗಲೀ; ಕೇಳಿರಿ-ಕೇಳಿರಿ; ಎಂಬ ಮೆಚ್ಚಿಕೆಯ ಉದ್ಗಾರಗಳೂ, ಕರತಾಡನಗಳೇ ಮುಂತಾದ ಆನಂದಸೂಚಕ ಕೃತಿಗಳೂ ಗೋಚರಿಸುವವು. ಅದರಲ್ಲಿ ವಿಶೇಷವಾಗಿ ಪ್ರಥಮ-ಭಾಷಣವು ಕೇಳುವವರ ಶ್ವಾಸ ಕೋಶದಲ್ಲಿ ವಿಧವಿಧದ ವಿಕಾರಗಳನ್ನು ಹುಟ್ಟಿಸುವದು. ಇಂಥ ವಿಕಾರಗಳನ್ನು ಚಳಿಗಾಲದ ಕೆಟ್ಟ ಮೂಡಣ ಗಾಳಿಯು ಸಹ ಹುಟ್ಟಿಸಲಿಕ್ಕಿಲ್ಲ" ಅವನು ಈ ಲೇಖದ ಕೊನೆಯಲ್ಲಿ 'ಪಾರ್ಲಮೆಂಟಿನಲ್ಲಿರುವ ಈಗಿನ ಪ್ರಸಿದ್ಧ ವಾಗ್ಮಿಗಳಲ್ಲಿ (Lord Marpeth) ಲಾರ್ಡ್ ಮಾರ್ಪೆಥ್, (Edward Geoffrey Stanley) ಎಡ್ವರ್ಡ್‌ಜಾಫ್ರೆ ಸ್ಟ್ಯಾನ್ಲೀ, ಮತ್ತು (Lord Castlereagh) ಲಾರ್ಡ್‌ಕಾಸಲ್‌ರೇ ಎಂಬ ಈ ಮೂವರಿರುವರು; ಇವರೆಲ್ಲರೂ ಒಮ್ಮೆ ಈಟನ್ ವಿದ್ಯಾಲಯದೊಳಗಿನ ಇದೇ ಸಭೆಯ ಸಭಾಸದರಾಗಿದ್ದರು; ಈ ಸಂಗತಿಯು ಮಾತ್ರ ಪ್ರೋತ್ಸಾಹ ಪಡಿಸುವದಾಗಿದೆ' ಎಂದು ಬರೆದಿದ್ದಾನೆ. ಈ ಮೇರೆಗೆ ಪಾರ್ಲಮೆಂಟ್ ಸಭೆಗೆ ಹೆದರಿಕೊಂಡಿದ್ದ ಗ್ಲ್ಯಾಡ್‌ಸ್ಟನ್ನನು ಮುಂದೆ ಕೆಲವು ವರ್ಷಗಳಲ್ಲಿ ಆ ಕಠಿಣವಾದ ಪರೀಕ್ಷೆಯನ್ನು ಕೊಟ್ಟದ್ದು ಮಾತ್ರವಲ್ಲ, ಆದರೆ ಮಂತ್ರಿ-ಮಂಡಲದೊಳಗಿನ ಬಹು ಮಾನದ ಮತ್ತು ಅತಿ ಶ್ರೇಷ್ಠವಾದ ಪದವಿಯನ್ನು ಅಲಂಕರಿಸಲು ಸಿಂಹಾಸನಾಧಿಪತಿಗಳಿಂದಲೇ ಕರೆಯಿಸಲ್ಪಟ್ಟನು.

ಈಟನ್ ವಿದ್ಯಾಲಯದಲ್ಲಿ ಗ್ಲ್ಯಾಡ್‌ಸ್ಟನ್ನನು ಪಡೆದ ಸದಭಿಪ್ರಾಯಗಳು.

ಗ್ಲ್ಯಾಡ್‌ಸ್ಟನ್ನನು ಈಟನ್ ಶಾಲೆಯೊಳಗಿನ ಎಲ್ಲ ವಿದ್ಯಾರ್ಥಿಗಳಿಗೂ ಬೇಕಾಗಿದ್ದನು. ಅವರು ಅವನ ಸಹವಾಸದಿಂದ ತಮಗೆ ಬಹು ಪ್ರಯೋಜನ ಉಂಟೆಂದೆಣಿಸುತ್ತಿದ್ದರು. ಗ್ಲ್ಯಾಡ್‌ಸ್ಟನ್ನನ ಸಹಾಧ್ಯಾಯಿಯಾದ ಜೇಮ್ಸ್ ಮಿಲ್‌ನೇಸ್ ಗ್ಯಾಸ್ಕೆಲ್ಲನು ಈ ಶಾಲೆಯೊಳಗಿನ ಅಭ್ಯಾಸ ಕ್ರಮವನ್ನು ಮುಗಿಸಿದ್ದರಿಂದ, ಅವನನ್ನು ಈ ಶಾಲೆಯಿಂದ (Cambridge) ಕೇಂಬ್ರಿಜ್ ವಿಶ್ವವಿದ್ಯಾಲಯಕ್ಕೆ ಕಳುಹಿಸುವ ಯೋಚನೆಯನ್ನು ಅವನ ತಾಯಿತಂದೆಗಳು ಮಾಡಿದ್ದರು. ಆದರೆ ಗ್ಲ್ಯಾಡ್‌ಸ್ಟನ್ನನು ಈ ಶಾಲೆಯಿಂದ (Oxford) ಆಕ್ಸಫರ್ಡ ವಿಶ್ವವಿದ್ಯಾಲಯವನ್ನು ಸೇರತಕ್ಕವನೆಂಬ ಸುದ್ದಿಯನ್ನು ಕೇಳಿದ ಕೂಡಲೆ, ಅವನು ತನ್ನ ತಾಯಿತಂದೆಗಳಿಗೆ ಪತ್ರ ಬರೆದದ್ದೇನೆಂದರೆ:—"ಗ್ಲ್ಯಾಡ್‌ಸ್ಟನ್ನನಿಗೂ ನನಗೂ ಒಳ್ಳೆ ಪರಿಚಯವಾಗಿದೆ. ಒಂದುವೇಳೆ ನಮ್ಮಿಬ್ಬರಲ್ಲಿ ಗೆಳೆತನವು ಕೂಡಿದೆ ಎಂದು ಹೇಳಿದರೂ ಹೇಳಬಹುದು. ಗ್ಲ್ಯಾಡ್‌ಸ್ಟನ್ನನು ಈಟನ್ನಿಂದ ಆಕ್ಸಫರ್ಡ ವಿಶ್ವವಿದ್ಯಾಲಯಕ್ಕೆ ಹೋಗುವನು. ಒಂದುವೇಳೆ ನೀವು ನನ್ನನ್ನು ಅದೆ

ವಿದ್ಯಾಲಯಕ್ಕೆ ಕಳುಹಿಸಿದರೆ, ನಮ್ಮ ಸ್ನೇಹವು ಅವಿಚ್ಛಿನ್ನವಾಗಿ ಉಳಿದು, ಅದರಿಂದ ನನಗೆ ಬಹು ಹಿತವಾಗುವದು. ಗ್ಲ್ಯಾಡ್‌ಸ್ಟನ್ನನು ಸಾಮಾನ್ಯ ವಿದ್ಯಾರ್ಥಿಯಲ್ಲ. 'ನಿನ್ನ ಜೀವದ ಗೆಳೆಯನು ಮತ್ತು ಹೊತ್ತುಬಂದರೆ ನಿನಗೆ ಮನಸುಟ್ಟಿ ನೆರವಾಗುವವನು ಯಾರು?' ಎಂದು ನನ್ನನ್ನು ಯಾರಾದರೂ ಕೇಳಿದರೆ ನಾನು ಗ್ಲ್ಯಾಡಸ್ಟನ್ನನ ಹೆಸರನ್ನೇ ಹೇಳುವೆನು. ಹೀಗಿದ್ದರೂ ನೀವು ಕೇಂಬ್ರಿಜ್ ವಿದ್ಯಾಲಯಕ್ಕೆ ಹೋಗಬೇಕೆಂದು ನನಗೆ ಅಜ್ಞಾಪಿಸಿದರೆ ನಾನು ಸುಮ್ಮನೆ ಅಲ್ಲಿಗೆ ಹೋಗಬೇಕಾಗುವದು. ಆದರೆ ಗ್ಲ್ಯಾಡ್‌ಸ್ಟನ್ನನ ವಿಯೋಗಜನ್ಯ ದುಃಖವನ್ನು ಮಾತ್ರ ನನ್ನಿಂದ ತಡೆಯಲಾಗದು. ಇದೇಮೇರೆಗೆ(Arthur Hallam)ಆರ್ಥರ್ ಹ್ಯಾಲಮನೆಂಬ ಗ್ರಂಥಕರ್ತನು ಅವನ ವಿಷಯವಾಗಿ ಬರೆದಿರುವದೇನೆಂದರೆ:-"ಇಂದಿನ ವರೆಗೆ ನಾನು ಎಷ್ಟೋಜನರ ತಾರುಣ್ಯವನ್ನು ನೋಡಿರುವೆನು. ಆದರೆ ಗ್ಲ್ಯಾಡ್‌ಸ್ಟನ್ನನ ತಾರುಣ್ಯವು ಈಗ ಒಂದು ಮೊಗ್ಗೆಯಂತಿದೆ. ಅದು ತನ್ನ ಹಂಗಾಮಕ್ಕೆ ಸರಿಯಾಗಿ ಅರಳಿದರೆ, ಅದರ ಸುವಾಸನೆಯು ಸುತ್ತಲೂ ಹಬ್ಬುವದೆಂದು ನನಗೆ ತೋರುತ್ತಿದೆ." ಈ ಉದಾಹರಣೆಗಳಿಂದ ಈಟನ್ ಶಾಲೆಯಲ್ಲಿ ಗ್ಲ್ಯಾಡ್‌ಸ್ಟನ್ನನು ಎಷ್ಟು ಉತ್ತಮವಿದ್ಯಾರ್ಥಿಯೆಂದೆನಿಸಿಕೊಂಡನು, ಅವನ ಮುಂದಿನ ದೊಡ್ಡಸ್ತನದ ಅಂಕುರವು ಅವನ ವರ್ತನದಿಂದ ಹೇಗೆ ವ್ಯಕ್ತವಾಯಿತು ಎಂಬ ಸಂಗತಿಗಳು ಸುಲಭವಾಗಿ ತಿಳಿಯುವವು.

ಗ್ಲ್ಯಾಡ್‌ಸ್ಟನ್ನನು ತನ್ನ ವಿದ್ಯಾಭ್ಯಾಸದಲ್ಲಿಯೂ ಸದಾಚರಣೆಯಲ್ಲಿಯೂ ಉದ್ಯೋಗದಲ್ಲಿಯೂ ನಾಲ್ವರಿಂದ ಹೌದ್ಹೌದೆನ್ನಿಸಿಕೊಂಡು, ಈಟನ್ ಶಾಲೆಯೊಳಗಿನ ಶಿಕ್ಷಣವನ್ನೆಲ್ಲ ಪಡೆದುಕೊಂಡು ಸನ್ ೧೮೨೭ನೆಯ ಇಸವಿಯಲ್ಲಿ ಅಲ್ಲಿಂದ ಹೊರಬಿದ್ದನು. ಅವನು ಆಕ್ಸ್‌ಫರ್ಡ ವಿಶ್ವವಿದ್ಯಾಲಯವನ್ನು ಸೇರತಕ್ಕವನಾಗಿದ್ದನಷ್ಟೇ. ಆದರೆ ಇನ್ನೂ ಕೆಲವು ಗ್ರಂಥಗಳನ್ನು ಕಲಿತುಕೊಂಡ ಬಳಿಕ, ಆ ವಿದ್ಯಾಲಯಕ್ಕೆ ಹೋಗುವದು ಲೇಸೆಂದೆಣಿಸಿ ಅವನು(Doctor Turner)ಡಾಕ್ಟರ್ ಟರ್ನರ್ ಎಂಬ ಪ್ರಸಿದ್ಧ ಶಿಕ್ಷಕನಿಂದ ಕೆಲವು ದಿವಸಗಳ ವರೆಗೆ ಆ ಗ್ರಂಥಗಳನ್ನು ಹೇಳಿಸಿಕೊಂಡು ಮನೆಯಲ್ಲಿಯೇ ಅಭ್ಯಾಸ ಮಾಡಿದನು. ಇದೇ ಶಿಕ್ಷಕನು ಮುಂದೆ ಕಲಕತ್ತೆಯ ಧರ್ಮಾಧಿಕಾರಿಯಾಗಿ ನಮ್ಮ ದೇಶಕ್ಕೆ ಬಂದನು.

—— ಮೊದಲು ಗೊತ್ತಾದ ಮೇರೆಗೆ ಗ್ಲ್ಯಾಡ್‌ಸ್ಟನ್ನನು ಸನ್ ೧೮೨೮ನೆಯ ಇಸವಿಯ ಅಕ್ಟೋಬರ ತಿಂಗಳಿನಲ್ಲಿ, ಆಕ್ಸಫರ್ಡ ವಿಶ್ವವಿದ್ಯಾಲಯದ ಶಾಖೆಯಾದ(Christ-church)ಕ್ರಾಯಿಸ್ಟ-ಚರ್ಚ ಎಂಬ ವಿದ್ಯಾಲಯವನ್ನು ಸೇರಿದನು. ಇಲ್ಲಿ ನ್ಯಾಯಶಾಸ್ತ್ರ, ಲ್ಯಾಟಿನ್, ಮತ್ತು ಗ್ರೀಕ್ ಭಾಷೆಗಳು (Aristotle)

ಗ್ಲ್ಯಾಡಸ್ಟನ್ನನು ಆಕ್ಸಫರ್ಡ ವಿಶ್ವವಿದ್ಯಾಲಯವನ್ನು ಸೇರಿದ್ದು, ೧೮೨೮.

ಕ್ಸ್ಫೋಬರ. ಅಲ್ಲಿ ಅವನು ವ್ಯಕ್ತಪಡಿಸಿದ ಶುದ್ಧಾಚರಣೆಗಳು.

ಅರಿಸ್ಟಾಟಲನ ಗ್ರಂಥಗಳು ಮತ್ತು ಧರ್ಮಶಾಸ್ತ್ರಗಳೇ ಮೊದಲಾದವುಗಳನ್ನು ವಿಶೇಷವಾಗಿ ಕಲಿಸುತ್ತಿದ್ದರು. ಈ ವಿಶ್ವವಿದ್ಯಾಲಯವು ಹೆಸರಾದದ್ದು. ೧೯ನೆಯ ಶತಮಾನದಲ್ಲಿ ಇಲ್ಲಿಯ ವಿದ್ಯಾರ್ಥಿಗಳೊಳಗಿನ (Lord Liverpool) ಲಾರ್ಡ ಲಿವರ್‌ಪೂಲ್ (George Canning) ಜಾರ್ಜ ಕ್ಯಾನಿಂಗ್, (Sir Robert Peel) ಸರ್ ರಾಬರ್ಟ ಪೀಲ್, (Lord Derby) ಲಾರ್ಡ ಡರ್ಬಿ, (Lord Salisbury) ಲಾರ್ಡ ಸಾಲಿಸ್‌ಬರೀ, ಗ್ಲ್ಯಾಡ್‌ಸ್ಟನ್, (Lord Rosebury) ಲಾರ್ಡ ರೋಜ್‌ಬರೀ ಎಂಬ ಈ ಏಳು ಜನರು ಇಂಗ್ಲೀಷ್ ರಾಜ್ಯದ ಮುಖ್ಯಮಂತ್ರಿಗಳಾದರು. ನಿಜವಾದ ಈ ಸಂಗತಿಯನ್ನು ನೋಡಿದರೆ ಆಕ್ಸಫರ್ಡ ವಿಶ್ವವಿದ್ಯಾಲಯವು ಇಂಗ್ಲಂಡದ ಮುಖ್ಯ ಮಂತ್ರಿಗಳನ್ನು ಸೃಷ್ಟಿಸುವ ವಿದ್ಯಾಪೀಠವೆಂಬಂತೆ ತೋರುವದು. ಇಲ್ಲಿ ಗ್ಲ್ಯಾಡ್‌ಸ್ಟನ್ನನು ಬಹು ಆಸಕ್ತಿಯಿಂದ ತನ್ನ ವಿದ್ಯಾಭ್ಯಾಸವನ್ನು ಮಾಡತೊಡಗಿದನು. ಅವನು ಹುಟ್ಟಾ ಬುದ್ಧಿಶಾಲಿಯೂ ಧರ್ಮಿಷ್ಠನೂ ಆಗಿದ್ದನು. ಅದರಲ್ಲಿ ಉತ್ತಮ ಗುರುಗಳೂ ದೊರಕಿದರು. ಹೀಗಾದ ಮೇಲೆ ಕೇಳುವದೇನದೆ; ಚೊಕ್ಕ ಚಿನ್ನಕ್ಕೆ ಕುಂದಣವಿಟ್ಟಂತಾಯಿತು. ಅವನಲ್ಲಿ ಇಷ್ಟು ದಿವಸಗಳವರೆಗೆ ಹುದುಗಿಕೊಂಡಿದ್ದ ಉತ್ತಮೋತ್ತಮ ಗುಣಗಳು ಪೂರ್ಣತ್ವವನ್ನು ಪಡೆದು, ಒಂದರಹಿಂದೊಂದು ಹೊರಬೀಳ ಹತ್ತಿದವು. ಅವುಗಳನ್ನು ಕಂಡು, ಆ ವಿದ್ಯಾಲಯದೊಳಗಿನ ದೊಡ್ಡ ದೊಡ್ಡ ಪಂಡಿತರು ಸಹ ಅವನನ್ನು ಹೊಗಳಲಾರಂಭಿಸಿದರು. ಅವನ ಸಹಾಧ್ಯಾಯಿಗಳಲ್ಲಿ ಎಷ್ಟೋ ಜನರು 'ಗ್ಲ್ಯಾಡ್‌ಸ್ಟನ್ನನು ಲೋಕೋತ್ತರ ಪುರುಷನಾಗಿರುವನು. ಇವನು ನಿಶ್ಚಯವಾಗಿ ದೊಡ್ಡ ಯೋಗ್ಯತೆಗೇರುವನು' ಎಂದು ತಮ್ಮ ತಮ್ಮೊಳಗೆ ಮಾತನಾಡಹತ್ತಿದರು. ಸನ್ ೧೮೨೯ನೆಯ ಡಿಶಂಬರ ತಿಂಗಳಿನಲ್ಲಿ ಕೇಂಬ್ರಿಜ್ ವಿಶ್ವವಿದ್ಯಾಲಯದಲ್ಲಿ ಜಾಣರೆಂದೆನಿಸಿಕೊಂಡ ಕೆಲ ಜನ ವಿದ್ಯಾರ್ಥಿಗಳು ಆಕ್ಸಫರ್ಡ ವಿಶ್ವವಿದ್ಯಾಲಯವನ್ನು ನೋಡಲಿಕ್ಕಾಗಿ ಬಂದರು. ಅವರಲ್ಲಿ (Richard Monckton) ರಿಚರ್ಡ ಮಾಂಕ್‌ಟನ್ನನೆಂಬವನೊಬ್ಬ ತರುಣನಾದ ವಿದ್ಯಾರ್ಥಿಯು ಇದ್ದನು. ಮುಂದೆ (Lord Houghton) ಲಾರ್ಡ ಹೌಟನ್ನನೆಂಬ ಇತಿಹಾಸ-ಪ್ರಸಿದ್ಧವಾದ ಹೆಸರನ್ನು ಪಡೆದವನು ಇವನೇ. ಇವನು ಗ್ಲ್ಯಾಡ್‌ಸ್ಟನ್ನನ ವಿಷಯವಾಗಿ ಉಲ್ಲೇಖಿಸಿರುವದೇನೆಂದರೆ:—“ಆಕ್ಸಫರ್ಡ ವಿದ್ಯಾಲಯದೊಳಗಿನ ವಿದ್ಯಾರ್ಥಿಗಳಲ್ಲಿ ಗ್ಲ್ಯಾಡ್‌ಸ್ಟನ್ನನು ಮಾತ್ರ ನನ್ನ ಲಕ್ಷವನ್ನು ತನ್ನ ಕಡೆಗೆ ಸಂಪೂರ್ಣವಾಗಿ ಎಳೆದುಕೊಂಡನು. ಅವನು ಬಹು ದೊಡ್ಡ ಯೋಗ್ಯತೆಯ ಗೃಹಸ್ಥನಾಗಿರುವನೆಂದು ನಾನು ಮನಗಂಡೆನು.”

ಈ ವಿದ್ಯಾಲಯದಲ್ಲಿ ಸಹ ಗ್ಲ್ಯಾಡ್‌ಸ್ಟನ್ನನು ವಿದ್ಯಾವ್ಯಾಸಂಗದೊಡನೆಯೂ ಶು

ದಾಚರಣೆಗಳಿಂದಲೂ ತನ್ನ ವರ್ಚಸ್ಸನ್ನು ಉಳಿದ ವಿದ್ಯಾರ್ಥಿಗಳಲ್ಲಿ ಸಹಜವಾಗಿಯೇ ಕೆಡಹಿದನು. ಅವನ ನಡತೆಯು ತಕ್ಕದ್ದಾಗಿಯೂ ಅನುಸರಣೀಯವಾಗಿಯೂ ಆಗಿತ್ತು. ಇದನ್ನು ಕಂಡು ಅಲ್ಲಿಯ ಅವ್ಯವಸ್ಥಿತರಾದ ಮತ್ತು ದುವ್ಯಸನಿಗಳಾದ ವಿದ್ಯಾರ್ಥಿಗಳು ಬಹಳವಾಗಿ ನಾಚಿಕೊಳ್ಳಹತ್ತಿದರು. ಆ ವಿದ್ಯಾರ್ಥಿಗಳಲ್ಲಿ ನೆಲೆಗೊಂಡಿದ್ದ ಯಾವ ವ್ಯಸನಕ್ಕೂ ಅವನು ಒಳಗಾಗಲಿಲ್ಲ. ಅಲ್ಲಿ ವಾಡಿಕೆಯಾಗಿ ನಡೆಯುತ್ತಿದ್ದ ಸೆರೆಬಡಕತನವು ಅವನ ಉದಾಹರಣೆಯಿಂದ ಬಹಳೇ ಕಡಿಮೆಯಾಯಿತು. ಈ ಸ್ಥಿತಿಯು ಅವನು ಅಲ್ಲಿರುವ ತನಕ ಮಾತ್ರ ಇತ್ತೆಂತಲ್ಲ; ಆದರೆ ಅವನು ಆ ವಿದ್ಯಾಲಯವನ್ನು ಬಿಟ್ಟು ಹೋದ ಮೇಲೆಯೂ ಸುಮಾರು ಹತ್ತು ವರ್ಷಗಳವರೆಗೆ ಹೀಗೆಯೇ ಕಡಿಮೆಯಾಗಿತ್ತೆಂದು ನಿದರ್ಶನಕ್ಕೆ ಬಂದಿದೆ. ಇದು ನಿಜವದೆ. ಹೂವು ಮಣ್ಣಿನಲ್ಲಿ ಬಿದ್ದರೆ, ಆ ಹೂವಿನ ಸುವಾಸನೆಯು ಮಣ್ಣಿನಲ್ಲಿ ಸೇರಿಕೊಳ್ಳುವದೇ ಹೊರತು ಆ ಮಣ್ಣಿನ ವಾಸನೆಯು ಹೂವಿನಲ್ಲಿ ಸೇರಿಕೊಳ್ಳುವದಿಲ್ಲ.

ಗ್ಲ್ಯಾಡ್‌ಸ್ಟನ್ನನಲ್ಲಿದ್ದ ಪಿತೃಭಕ್ತಿಯು.

ಗ್ಲ್ಯಾಡ್‌ಸ್ಟನ್ನನ ಕುಶಾಗ್ರ ಬುದ್ಧಿಯನ್ನು ಕಂಡು, ಆ ವಿದ್ಯಾಲಯದ ಅಧಿಕಾರಸ್ಥರು ಪ್ರತಿವರ್ಷ ಒಂದು ಸಾವಿರ ರೂಪಾಯಿಗಳ ವಿದ್ಯಾರ್ಥಿವೇತನವನ್ನು (ಸ್ಕಾಲರಶಿಪ್ಪನ್ನು) ಅವನಿಗೆ ಕೊಟ್ಟರು. ಇದನ್ನು ಬಡ ವಿದ್ಯಾರ್ಥಿಗಳ ಬದಲು ಅವನಿಗೆ ಕೊಟ್ಟರೆಂದು ಎಷ್ಟೋ ಜನರು ದೂರುಹೇಳಿದರು. ಈ ವಿದ್ಯಾರ್ಥಿವೇತನವನ್ನು ಹೊಂದಿದವರು ದಕ್ಷತೆಯಿಂದ ಅಭ್ಯಾಸ ಮಾಡಿ, ಉಚ್ಚ ಪದವಿಗಳನ್ನು ಪಡೆದು, ತಮ್ಮ ವಿದ್ಯಾಲಯದ ಗೌರವವನ್ನು ಹೆಚ್ಚಿಸುವರೆಂಬ ಗ್ರಹಿಕೆಯಿಂದ ಆ ಅಧಿಕಾರಸ್ಥರು ಗ್ಲ್ಯಾಡ್‌ಸ್ಟನ್ನನಲ್ಲಿದ್ದ ವಿಶೇಷ ಗುಣಗಳನ್ನು ಕಂಡು, ಈ ವಿದ್ಯಾರ್ಥಿವೇತನವನ್ನು ಅವನಿಗೆ ಕೊಟ್ಟಿದ್ದರು. ಅವನಾದರೂ ತಾಳ್ಮೆಯಿಂದಲೂ ದೃಢನಿಶ್ಚಯದಿಂದಲೂ ಅಭ್ಯಾಸ ಮಾಡಿ, ಮೇಲ್ತರದ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿ, ಈ ಸ್ಕಾಲರಶಿಪ್ಪಿನ ಋಣದಿಂದ ಮುಕ್ತನಾದನು. ಈ ಸಂದರ್ಭದಲ್ಲಿ ಇನ್ನೊಂದು ಸಂಗತಿಯನ್ನು ಹೇಳಬೇಕಾಗಿದೆ. ಅದೇನೆಂದರೆ:— ಎಮ್. ಎ. ಪರೀಕ್ಷೆಗೆ ಪ್ರಾಚೀನ ಭಾಷೆ ಮತ್ತು ಗಣಿತಶಾಸ್ತ್ರ ಇವೆರಡು ವಿಷಯಗಳಿದ್ದವು. ಇವೆರಡರಲ್ಲೊಂದನ್ನು ವಿದ್ಯಾರ್ಥಿಯು ಐಚ್ಛಿಕ ವಿಷಯವಾಗಿ ಆರಿಸಿಕೊಂಡು, ಅದರಲ್ಲಿ "ಉತ್ತಮನು" ಎಂದೆನ್ನಿಸಿಕೊಳ್ಳಲು ತಕ್ಕಷ್ಟು ಗುಣಗಳನ್ನು ಪರೀಕ್ಷೆಯಲ್ಲಿ ಪಡೆಯಬೇಕಾಗುತ್ತಿತ್ತು. ಗ್ಲ್ಯಾಡ್‌ಸ್ಟನ್ನನು ಭಾಷಾ ವಿಷಯವನ್ನು ಐಚ್ಛಿಕ ವಿಷಯವಾಗಿ ತೆಗೆದುಕೊಂಡು, ಅದರಲ್ಲಿ ಎಮ್. ಎ. ಪದವಿಯನ್ನು ಪಡೆಯಬೇಕೆಂದು ನಿಶ್ಚಯಿಸಿದನು. ಈ ಸುದ್ದಿಯನ್ನು ಅವನ ತಂದೆಯು ಕೇಳಿದ ಕೂಡಲೆ ಅವನಿಗೆ ಪತ್ರ ಬರೆದದ್ದೇನೆಂದರೆ:—"ಮಗನೇ, ಗಣಿ

ತ ಶಾಸ್ತ್ರದಲ್ಲಿ ಗತಿ ಇಲ್ಲದವನು ಮನುಷ್ಯನೇ ಅಲ್ಲವೆಂದು ನಾನು ಎಣಿಸುತ್ತೇನೆ. ಆದುಕಾರಣ ನೀನು ಗಣಿತ ಶಾಸ್ತ್ರದಲ್ಲಿಯೇ ಎಮ್. ಏ. ಪರೀಕ್ಷೆಯನ್ನು ಕೊಡತಕ್ಕದ್ದು." ಈ ಪತ್ರವನ್ನು ನೋಡಿ, ಆ ಬುದ್ಧಿವಂತನಾದ ಮಗನು ಎಳ್ಳು ಕಾಳಷ್ಟಾದರೂ ಹಿಂದುಮುಂದಾಗದೆ, ಹಿರಿಯರ ಆಜ್ಞೆಯಂತೆ ಗಣಿತ ಶಾಸ್ತ್ರದ ಅಭ್ಯಾಸಕ್ಕೆ ತೊಡಗಿದನು. ಅವನು ಮುಂದೆ ತನ್ನ ಪ್ರೌಢ ವಯಸ್ಸಿನಲ್ಲಿ 'ನಾನು ಗಣಿತ ಶಾಸ್ತ್ರವನ್ನು ಚೆನ್ನಾಗಿ ಕಲಿತದ್ದರಿಂದ, ನನಗೆ ಲೆಖ್ಖದ ವ್ಯವಹಾರವು ಸುಲಭವಾಗಿ ತಿಳಿಯಲು ಮಾರ್ಗವಾಯಿತು; ಇದರಿಂದ ನನಗೆ ರಾಜ್ಯಕಾರಭಾರದಲ್ಲಿ ಆಯವ್ಯಯವನ್ನು ನೋಡುವ ಉದ್ಯೋಗವು ದೊರೆಯಿತು. ಇಲ್ಲದಿದ್ದರೆ ನಾನು ತೊಡಕುಳ್ಳ ಆ ಉದ್ಯೋಗಕ್ಕೆ ಎಂದೂ ಯೋಗ್ಯನಾಗುತ್ತಿದ್ದಿಲ್ಲ. ಈ ಶ್ರೇಯಸ್ಸೆಲ್ಲಾ ತಂದೆಗಳಿಗೇ ಇರುತ್ತದೆ.' ಎಂದು ಮೇಲಿಂದ ಮೇಲೆ ಹೇಳುತ್ತಿದ್ದನು. ಇದೇ ಸುಪುತ್ರನ ಲಕ್ಷಣವು.

ಗ್ಲ್ಯಾಡ್‌ಸ್ಟನ್ನನು ಎಮ್. ಏ. ಪರೀಕ್ಷೆಯಲ್ಲಿ ಉತ್ತಮೋತ್ತಮನು ಎಂಬ ಬಹುಮಾನವನ್ನು ಪಡೆದದ್ದು.

ಈ ಕಾಲದಲ್ಲಿ ಅವನು ದಿನಾಲು ಎಂಟೆಂಟು ಹತ್ತು ಹತ್ತು ತಾಸುಗಳ ವರೆಗೆ ಒಂದೇ ಸಮನೆ ಅಭ್ಯಾಸ ಮಾಡುತ್ತಿದ್ದನು. ಒಂದು ಅರಕ್ಷಣವನ್ನಾದರೂ ವ್ಯರ್ಥವಾಗಿ ಕಳೆಯುತ್ತಿದ್ದಿಲ್ಲ. ಅವನು ಓದಿದ್ದನ್ನೆಲ್ಲ ತನ್ನದಾಗಿ ಮಾಡಿಕೊಳ್ಳುತ್ತಿದ್ದನು. ತಾನು ಓದಿದ್ದರಲ್ಲಿ ವಿಚಾರಮಾಡತಕ್ಕದ್ದು ಯಾವುದು, ನೆನಪಿನಲ್ಲಿಟ್ಟುಕೊಳ್ಳತಕ್ಕದ್ದು ಯಾವುದು ಎಂಬದನ್ನು ನಿರ್ಧರಿಸುವದರಲ್ಲಿ ಅವನು ಎಂದೂ ತಪ್ಪುತ್ತಿದ್ದಿಲ್ಲ. ಈ ಉದ್ಯೋಗದ ಪರಿಣಾಮವೇನಾಯಿತೆಂದರೆ-- ಗಣಿತ ಶಾಸ್ತ್ರದಲ್ಲಿ 'ಉತ್ತಮನು' ಎಂದು ಅನ್ನಿಸಿಕೊಳ್ಳಲು ಬೇಕಾಗುವಷ್ಟು ಗುಣಗಳನ್ನು ಅವನು ಪಡೆದದ್ದಲ್ಲದೆ ಭಾಷಾವಿಷಯದಲ್ಲಿಯೂ ಅಷ್ಟೇ ಗುಣಗಳನ್ನು ಪಡೆದನು. ಆದರಿಂದ ಅವನು ತನ್ನ ಪರೀಕ್ಷೆಯಲ್ಲಿ "ಉತ್ತಮೋತ್ತಮನು" ಎಂಬ ಅತಿ ಗೌರವದ ಬಿರುದನ್ನು ಪಡೆದನು. ಇದಕ್ಕೂ ಹೆಚ್ಚಿನ ಮಾನವನ್ನು ದೊರಕಿಸುವದು ಆ ವಿದ್ಯಾಲಯದಲ್ಲಿ ಉಳಿದುಳೇ ಇಲ್ಲ. ಇಷ್ಟರಲ್ಲಿಯೇ ಅವನು ಹಿಬ್ರೂ ಭಾಷೆಯನ್ನು ಸಹ ಕಲಿತುಕೊಂಡನು.

ಗ್ಲ್ಯಾಡ್‌ಸ್ಟನ್ನನು ಆಕ್ಸಫರ್ಡ ವಿಶ್ವವಿದ್ಯಾಲಯದೊಳಗಿನ ಐಕ್ಯಸಭೆಯ ಅಧ್ಯಕ್ಷನಾದದ್ದು.

ಈ ವಿದ್ಯಾಲಯದಲ್ಲಿ ಐಕ್ಯಸಭೆ ಎಂಬ ಹೆಸರಿನದೊಂದು ಸಭೆ ಇತ್ತು. ಇದರಲ್ಲಿ ಬೇರೆ ಬೇರೆ ವಿಷಯಗಳ ಮೇಲೆ ವಾದವಿವಾದಗಳು ನಡೆಯುತ್ತಿದ್ದವು. ನಿಬಂಧಗಳು ಸಹ ಓದಲ್ಪಡುತ್ತಿದ್ದವು. ಈ ಸಭೆಗೆ ಒಳ್ಳೆಯ ಬುದ್ಧಿಶಾಲಿಗಳಾದ ಬಹು ಜನ ವಿದ್ಯಾರ್ಥಿಗಳು ಸೇರಿದ್ದರು. ಗ್ಲ್ಯಾಡ್‌ಸ್ಟನ್ನನು ಈ ಸಭೆಯಲ್ಲಿ ಸನ್ ೧೮೩೦ನೆಯ ಇಸವಿಯ ಫೆಬ್ರುವರಿ ೧೧ನೆಯ ತಾರೀಖಿನ ದಿವಸ ಒಂದು ವ್ಯಾಖ್ಯಾನವನ್ನು ಕೊಟ್ಟನು. ಅವ

ನ ಭಾಷಣವನ್ನು ಕೇಳಿ, ಸಭೆಯ ಚಾಲಕರು ಅದೇ ದಿವಸ ಅವನನ್ನು ಬಹು ಸಂತೋಷದಿಂದ ತಮ್ಮ ಸಭಾಸದನನ್ನಾಗಿ ಮಾಡಿಕೊಂಡರು. ಮರುವರ್ಷದಲ್ಲಿ ಅವನು ಸಭೆಯ ಕಾರ್ಯದರ್ಶಿಯಾಗಿ ನಿಯಮಿಸಲ್ಪಟ್ಟನು. ಈ ಕೆಲಸವನ್ನು ಅವನು ಜಾಣತನದಿಂದಲೂ ಜಾಗ್ರತೆಯಿಂದಲೂ ನಡಿಸಿದನು. ಈ ಸಭೆಯಲ್ಲಿ ಅವನು ಎಷ್ಟೋ ಮಹತ್ವದ ವಿಷಯಗಳ ಮೇಲೆ ಭಾಷಣ ಮಾಡಿ, ತನ್ನ ಮತಗಳನ್ನು ಸ್ಥಾಪಿಸಿದನು. ಕಟ್ಟಕಡೆಗೆ ಅದರ ಅಧ್ಯಕ್ಷನೇ ಆಗಿ, ವಿದ್ಯಾಲಯವನ್ನು ಬಿಟ್ಟು ಹೋಗುವವರೆಗೆ ಆ ಕೆಲಸವನ್ನು ದಕ್ಷತೆಯಿಂದ ನಡೆಯಿಸಿ, ಸಭೆಯ ಗೌರವವನ್ನು ಮತ್ತಿಷ್ಟು ಹೆಚ್ಚಿಸಿದನು. ಈ ಯಾವತ್ತು ಕೃತ್ಯಗಳಿಂದ ಅವನ ಕೀರ್ತಿಯು ಕ್ರಮೇಣ ಹಬ್ಬುತ್ತಲೇ ನಡೆಯಿತು.

ಗ್ಲ್ಯಾಡ್‌ಸ್ಟನ್ನನ ಧರ್ಮನಿಷ್ಠೆಯು.

ತಾಯಿಯು ಧರ್ಮಶೀಲಳು; ತಂದೆಯೂ ಧರ್ಮಶೀಲನು; ಮೊಟ್ಟಮೊದಲು ಶಿಕ್ಷಣ ಕೊಟ್ಟ ಶಾಲೆಯ ಗುರುಗಳಂತು ಪರಮಧರ್ಮಶೀಲರು; ಇವೆಲ್ಲ ಯೋಗಗಳು ಕೂಡಿ ಬಂದದ್ದರಿಂದ, ಗ್ಲ್ಯಾಡ್‌ಸ್ಟನ್ನನ ಮನಸ್ಸಿನಲ್ಲಿ ಚಿಕ್ಕಂದಿನಲ್ಲಿಯೇ ಹುಟ್ಟಿದ ಧರ್ಮನಿಷ್ಠೆಯು ಅಂಕುರವು, ಅವನೊಂದಿಗೆ ಬೆಳೆಯುತ್ತಲೇ ಹೋಯಿತು. ಯಾವಾಗಲೂ ದೇವರಿಗಂಜಿ ನಡೆಯುವದು, ಕೈಯಿಂದಾದಷ್ಟು ಪರೋಪಕಾರದ ಕೃತ್ಯಗಳನ್ನೆಸಗುವದು, ಮನೋವಿಕಾರಗಳಿಗೆ ವಶವಾಗದಿರುವದು, ಹೊತ್ತು ಹೊತ್ತಿಗೆ ದೇವರ ಪ್ರಾರ್ಥನೆ ಮಾಡುವದು ಇವೇ ಮುಂತಾದವುಗಳನ್ನು ಅವನು ಚಿಕ್ಕಂದಿನಲ್ಲಿ ಮಾಡುತ್ತಿದ್ದಂತೆಯೇ ಈಟನ್ ಶಾಲೆಯಲ್ಲಿಯೂ ಆಕ್ಸಫರ್ಡ ವಿಶ್ವವಿದ್ಯಾಲಯದಲ್ಲಿಯೂ ತಪ್ಪದೆ ಮಾಡುತ್ತಿದ್ದನು. (Bishop Charles Wordsworth) ಬಿಶಪ್ ಚಾರ್ಲಸ್ ವರ್ಡ್ಸ್‌ವರ್ಥನೆಂಬ ಪ್ರಸಿದ್ಧ ಧರ್ಮಾಧಿಕಾರಿಯು ಈ ಸಂಬಂಧವಾಗಿ ಹೇಳುವದೇನೆಂದರೆ:— "ವಿದ್ಯಾಲಯದೊಳಗಿನ ಅವನ ಸರಿಕ ವಿದ್ಯಾರ್ಥಿಗಳಲ್ಲಿ, ಧರ್ಮಶಾಸ್ತ್ರವನ್ನು ನಿಯಮದಿಂದ ಓದುವವನೂ ಅದರ ಅರ್ಥವನ್ನು ಮಾರ್ಮಿಕ ರೀತಿಯಿಂದ ತಿಳಿದುಕೊಳ್ಳುವವನೂ ಗ್ಲ್ಯಾಡ್‌ಸ್ಟನ್ನನೊಬ್ಬನೇ ಸರಿ. ಅವನ ಹೊರತು ಮತ್ತೊಬ್ಬರನ್ನು ನಾನು ಕಾಣಲಿಲ್ಲ. ಇದಲ್ಲದೆ 'ಒಂದಿಲ್ಲೊಂದು ದಿನ ಈ ವಿದ್ಯಾರ್ಥಿಯು ಇಂಗ್ಲಂಡ್ ದೇಶದ ಮುಖ್ಯ-ಮಂತ್ರಿಯ ಸ್ಥಳವನ್ನು ನಿಶ್ಚಯವಾಗಿ ಪಡೆಯುವನು' ಎಂದು ನಾನೊಬ್ಬನಲ್ಲ; ನನ್ನಂತೆ ಬಹು ಜನರು ಕಾಯಾಸಕಟ್ಟಿರುವರು." (Cardinal Manning) ಕಾರ್ಡಿನಲ್ ಮ್ಯಾನಿಂಗನೆಂಬ ಧರ್ಮ ಪ್ರಚಾರಕನು ಅವನ ವಿಷಯವಾಗಿ ಹೀಗೆ ಹೇಳಿರುವನು:—" ಧರ್ಮಶಾಸ್ತ್ರದ ಪುಸ್ತಕವನ್ನೂ ಪ್ರಾರ್ಥನಾಗ್ರಂಥವನ್ನೂ ತನ್ನ ಬಗಲೊಳಗೆ ಹಿಡಿದುಕೊಂಡು, ನಿತ್ಯ ನಿಯಮದಿಂದ ಅವನು ದೇವಾಲಯಕ್ಕೆ ಹೋ

ಗುವದನ್ನು ನಾನು ದಿನಂಪ್ರತಿಯಲ್ಲಿ ನೋಡುತ್ತಿದ್ದೆನು." ಇವೇನು ಸಣ್ಣ ಪ್ರಶ್ನೆ ಸಾಕ್ಷಿಗಳಲ್ಲ. ಚಿಕ್ಕತನದಲ್ಲಿಯೇ ಇಷ್ಟು ಧರ್ಮನಿಷ್ಠೆಯುಳ್ಳ ವಿದ್ಯಾರ್ಥಿಗಳು ಸಿಗುವದು ತೀರ ಅಪರೂಪ. ಈ ತರದ ಧರ್ಮನಿಷ್ಠೆಯು ಗ್ಲ್ಯಾಡ್‌ಸ್ಟನ್ನನಲ್ಲಿ ಕಡೆತನಕ ಸ್ಥಿರವಾಗಿತ್ತು. ಈ ಮಹತ್ವದ ಸಂಗತಿಯು ನಮ್ಮ ಈಗಿನ ವಿದ್ಯಾರ್ಥಿಗಳು, ಅವರಲ್ಲಿ ವಿಶೇಷವಾಗಿ ಮೇಲ್ತರದ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳು, ಲಕ್ಷ್ಯದಲ್ಲಿಡಲು ತಕ್ಕದ್ದಾಗಿದೆ.

ಗ್ಲ್ಯಾಡ್‌ಸ್ಟನ್ನನು ತನ್ನ ಶಿಕ್ಷಣಕ್ರಮವನ್ನು ಮುಗಿಸಿದ್ದು. ೧೮೩೧, ಡಿಸಂಬರ.

ಈ ಮೇರೆಗೆ ಗ್ಲ್ಯಾಡ್‌ಸ್ಟನ್ನನು ತನ್ನ ಶಿಕ್ಷಣವನ್ನು ಮುಗಿಸಿಕೊಂಡು ಆಕ್ಸಫರ್ಡ ವಿಶ್ವವಿದ್ಯಾಲಯದೊಳಗಿನ ಸಮಸ್ತ ಮರ್ಯಾದೆಗಳನ್ನೂ ಎಲ್ಲ ಪದವಿಗಳನ್ನೂ ಪಡೆದು, ಸನ್ ೧೮೩೧ನೆಯ ಇಸವಿಯಲ್ಲಿ ಅಲ್ಲಿಂದ ಹೊರಟನು. ಆ ಮೇಲೆ ಅವನು ಯಾವ ಉದ್ಯೋಗವನ್ನು ಅಂಗೀಕರಿಸಬೇಕೆಂಬ ವಿಚಾರದಲ್ಲಿ ತೊಡಗಿದನು. ಒಂದು ರೀತಿಯಿಂದ ನೋಡಿದರೆ, ಅವನು ತನ್ನ ಉದರನಿರ್ವಾಹಕ್ಕಾಗಿ ಯಾವುದೊಂದು ಉದ್ಯೋಗವನ್ನು ಮಾಡಲಿಕ್ಕೆಬೇಕೆಂಬಂತಿದ್ದಿಲ್ಲ. ಅವನ ಸಂಸಾರವು ಸುಖದಿಂದ ಸಾಗುವಷ್ಟು ಆಸ್ತಿಯನ್ನು ಅವನ ಹಿರಿಯರು ಗಳಿಸಿಟ್ಟಿದ್ದರು. ಆದರೆ ಯಾವುದೊಂದು ಉದ್ಯೋಗವನ್ನು ಮಾಡದೆ ಸುಮ್ಮನೆ ಕೈಮುಚ್ಚಿಕೊಂಡು ಕೂಡ್ರುವದೂ ಅನ್ಯರು ಸಂಪಾದಿಸಿದ ದುಡ್ಡಿನಿಂದ ತನ್ನ ಹೊಟ್ಟೆ ಸಾಗಿಸಿಕೊಳ್ಳುವದೂ ಗ್ಲ್ಯಾಡಸ್ಟನ್ನನಂಥ ಕಾರ್ಯದಕ್ಷನಾದ ಯೌವನಸ್ಥನ ಮನಸ್ಸಿಗೆ ಬರುವದುಂಟೇ? ಎಂದಿಗೂ ಬರಲಾರದು. ಆದದ್ದರಿಂದ ತಾನು ಪಡೆದಿರುವ ಉಚ್ಚಪ್ರತಿಯ ಶಿಕ್ಷಣಕ್ಕೆ ತಕ್ಕದ್ದಾಗಿಯೂ ಚೆನ್ನಾಗಿ ಜರಗಿಸಲು ಶಕ್ಯವಾಗಿಯೂ ಇರುವ ಉದ್ಯೋಗವು ಯಾವುದೆಂದು ಅವನು ವಿಚಾರಮಾಡತೊಡಗಿದನು. ವಿದ್ಯೆಯನ್ನು ಕಲಿತಮೇಲೆ ಏನು ಮಾಡಬೇಕೆಂಬುದನ್ನು ಅವನ ಧರ್ಮಶ್ರದ್ಧೆಯ ಪ್ರಭಾವವು ಅವನಿಗೆ ಈ ಮೊದಲೇ ಸೂಚಿಸಿತ್ತು. ಅದಕ್ಕನುಗುಣವಾಗಿ ಅವನು ದೇವರ ಅನಂತ ಮಹಿಮೆಗಳನ್ನು ಕೊಂಡಾಡಲಿಕ್ಕೂ ಪರೋಪಕಾರಕ್ಕೂ ಶಾನೆ ಅನುಕೂಲವಾಗಿರುವ ಧರ್ಮ-ಪರಿಚಾರಕನ ಉದ್ಯೋಗವನ್ನು ಹಿಡಿಯಲು ನಿಶ್ಚಯಿಸಿದನು. ಈ ಸಂಗತಿಯನ್ನು ಉದ್ದೇಶಿಸಿ ಅವನ ಸಹಾಧ್ಯಾಯಿಯಾದ ಕಾರ್ಡಿನಲ್ ಮ್ಯಾನುಯೇಲನೆಂಬ ಧರ್ಮಗುರುವು ಬರೆದಿರುವದೇನೆಂದರೆ:—"ಧರ್ಮಪರಿಚಾರಕತ್ವವನ್ನು ಸ್ವೀಕರಿಸಲು ಗ್ಲ್ಯಾಡ್‌ಸ್ಟನ್ನನು ನನಗಿಂತಲು ಹೆಚ್ಚು ಯೋಗ್ಯನಾಗಿದ್ದನು. ಯಾಕೆಂದರೆ ಆ ಉದ್ಯೋಗಕ್ಕೆ ನಾನು ಅಸಮರ್ಥನಾಗಿದ್ದಷ್ಟು ಅವನು ಸಮರ್ಥನಾಗಿದ್ದನು." ಆದರೆ ಅವನ ತಂದೆಯ ಅಪೇಕ್ಷೆಯು ಇದರಿಂದ ತೀರ ಬೇರೆಯಾಗಿತ್ತು. ಮಗನು ಉಚ್ಚ ಶಿಕ್ಷಣ ಪಡೆದು

ಘನ ಪಂಡಿತನಾಗಿರುವದರಿಂದ, ಸಾರ್ವಜನಿಕ ಕೃತ್ಯಗಳನ್ನು ಅಂಗೀಕರಿಸಿ, ತನ್ನ ಕರ್ತೃತ್ವ ಶಕ್ತಿಯಿಂದ ನಾಲ್ಕು ಜನರಲ್ಲಿ ಪ್ರಸಿದ್ಧಿಗೆ ಬರಬೇಕೆಂದು ಅವನ ತಂದೆಯು ಬಯಸುತ್ತಿದ್ದನು. ಈ ಮೇರೆಗೆ ಗ್ಲ್ಯಾಡ್‌ಸ್ಟನ್ನನು ಯಾವ ಉದ್ಯೋಗವನ್ನು ಸ್ವೀಕರಿಸಬೇಕೆಂಬ ವಿಷಯವಾಗಿ ಅವನ ಮತ್ತು ಅವನ ತಂದೆಯ ನಡುವೆ ಮತಭೇದವುಂಟಾಯಿತು. ಆದರೂ

‖ ಕಂದ ‖

ಜನಿಯಿಸಿ ಜನಕನ ವಂಶಕೆ।
ಘನತರ ಸತ್ಕೀರ್ತಿಯೆಸಗಿ ಮಾತಾಪಿತರಂ॥
ವಿನಯದೆ ಗುರುದೈವವೆನು।
ತ್ತನಿಶಂ ಸೇವಿಸುತಮಿರ್ಪನೇ ಸತ್ಪುತ್ರಂ ॥ ೧ ॥

ಎಂಬ ಹಿರಿಯರ ವಚನವನ್ನು ಲಕ್ಷ್ಯದಲ್ಲಿ ತಂದು, ತಂದೆಯ ಇಚ್ಛೆಯನ್ನು ತೃಪ್ತಿಪಡಿಸುವದೇ ತನ್ನ ಕರ್ತವ್ಯವಾಗಿದೆಂದು ಆ ಪಿತೃಭಕ್ತನಾದ ಗ್ಲ್ಯಾಡ್‌ಸ್ಟನ್ನನು ಆಲೋಚಿಸಿ, ತನ್ನ ಬಯಕೆಯನ್ನು ಬದಿಗಿಟ್ಟು, ರಾಜ್ಯಕಾರಭಾರದಲ್ಲಿ ಸೇರಲು ನಿಶ್ಚಯಿಸಿದನು. ಪ್ರತಿಯೊಬ್ಬನು ತನ್ನ ಮನಸಿಗೆ ಬಂದ ಉದ್ಯೋಗವನ್ನು ಹಿಡಿಯಲು ಸ್ವತಂತ್ರನಾಗಿರುವನೆಂತಲೂ ಅವನ ಈ ಸ್ವಾತಂತ್ರ್ಯದಲ್ಲಿ ಕೈಹಾಕುವ ಅಧಿಕಾರವು ಇನ್ನೊಬ್ಬನಿಗಿಲ್ಲೆಂತಲೂ ಗ್ರಹಿಸಿ, ತಮ್ಮ ಮನಸಿಗೆ ಬಂದಂತೆ ವರ್ತಿಸುವವರೂ ಅನ್ಯರಿಗೆ ಇದೇ ರೀತಿಯಾಗಿ ಉಪದೇಶಿಸುವವರೂ ಬಹು ಜನರಿರುವರು. ಅವರು ಗ್ಲ್ಯಾಡ್‌ಸ್ಟನ್ನನ ಈ ಮೇಲಾದ ಗುಣವನ್ನು ನೋಡಿ ನಾಚಿಕೊಂಡು, ತಮ್ಮ ನಡತೆಯನ್ನು ತಿದ್ದಿಕೊಳ್ಳಬೇಕು. ಅವನು ಈ ಪ್ರಸಂಗದಲ್ಲಿ ವ್ಯಕ್ತಪಡಿಸಿದ ಪಿತೃಭಕ್ತಿಗೆ ಅವನಲ್ಲಿದ್ದ ದೃಢತರ ಧರ್ಮನಿಷ್ಠೆಯೇ ಕಾರಣವು.

---

## ೨ನೆಯ ಅಧ್ಯಾಯವು.

### ಬ್ರಿಟಿಷ್ ರಾಜ್ಯ ಪದ್ಧತಿಯು ಮತ್ತು ಪಾರ್ಲಮೆಂಟ್ ಸಭೆಯಲ್ಲಿ ಗ್ಲಾಡ್‌ಸ್ಟನ್ನನ ಪ್ರವೇಶವು.

‖ ಕಂದ ‖

ಪರಿಪರಿಯ ಬಿಜ್ಜೆಯಂ ಕ।
ಲ್ತದು ಲೋಕಾನುಭವಪೂರ್ಣನಾಗುತೆ ಕಾರ್ಯಾ ॥
ಕರಣೀಯಂಗಳ ನರಿದು।
ಧ್ವರಿಯೊಳ್ ಸನ್ಮಾರ್ಗಗಾಮಿಯೆನಿಪನೆ ಮಾನ್ಯಂ ॥ ೧ ॥

ಬ್ರಿಟಿಷ್‌ರಾಜ್ಯಪದ್ಧತಿಯ ಸಾಮಾನ್ಯ ವರ್ಣನೆ; ಮತ್ತು ಪಾರ್ಲಮೆಂಟಿನ ರಚನೆ.

ರಾಜ್ಯಪದ್ಧತಿಗಳಲ್ಲಿ ರಾಜಸತ್ತಾತ್ಮಕ, ರಾಜಪ್ರಜಾಸತ್ತಾತ್ಮಕ, ಪ್ರಜಾಸತ್ತಾತ್ಮಕ ಎಂಬ ಮೂರು ಭೇದಗಳುಂಟು. ಅರಸನ ಇಚ್ಛೆಯಂತೆ ನಡೆಯುವ ರಾಜ್ಯಪದ್ಧತಿಗೆ ರಾಜಸತ್ತಾತ್ಮಕವೆಂತಲೂ, ಅರಸನ ಮತ್ತು ಪ್ರಜೆಗಳ ಇಚ್ಛಾನುಸಾರವಾಗಿ ನಡೆಯುವ ರಾಜ್ಯಪದ್ಧತಿಗೆ ರಾಜಪ್ರಜಾಸತ್ತಾತ್ಮಕವೆಂತಲೂ ಪ್ರಜೆಗಳ ಅಭಿಪ್ರಾಯಕ್ಕೆ ಸರಿಯಾಗಿ ನಡೆಯುವ ರಾಜ್ಯಪದ್ಧತಿಗೆ ಪ್ರಜಾಸತ್ತಾತ್ಮಕವೆಂತಲೂ ಹೇಳುವರು. ಅವುಗಳಲ್ಲಿ ರಾಜಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯು ಕೆಲವು ಶತಮಾನಗಳಿಂದ ಇಂಗ್ಲಂಡ್ ದೇಶದಲ್ಲಿ ನಡೆಯುತ್ತ ಬಂದಿದೆ. ಆ ದೇಶದ ಸಿಂಹಾಸನದ ಮೇಲೆ ಅರಸನಿರುವನು ಇಲ್ಲವೆ ರಾಣಿ ಇರುವಳು. ಅವರ ಕೈಯಲ್ಲಿ ನಿಯಮಿತ ಅಧಿಕಾರವಿರುವದೇ ಹೊರತು ಸಂಪೂರ್ಣ ಅಧಿಕಾರವು ಇರುವದಿಲ್ಲ. ಆ ಅರಸನಿಗೆ ಅಥವಾ ರಾಣಿಗೆ ರಾಜ್ಯದಾಡಳಿತದಲ್ಲಿ ನೆರವಾಗುವದೊಂದು ಸಭೆ ಇರುವದು. ಅದಕ್ಕೆ ಪಾರ್ಲಮೆಂಟು ಎಂಬ ಹೆಸರು. ಈ ಪಾರ್ಲಮೆಂಟಿಗೆ ಬಹುಶಃ ಎಲ್ಲ ಅಧಿಕಾರಗಳು ಇರುವವು. ಈ ಸಭೆಯ ಒಪ್ಪಿಗೆ ಇಲ್ಲದೆ ಅರಸನು ಮತ್ತು ರಾಣಿಯು ರಾಜ್ಯಕಾರಭಾರವನ್ನು ನಡೆಯಿಸಲಾರರು. ಇದರಂತೆಯೇ ಪಾರ್ಲಮೆಂಟು ಅರಸನ ಅಥವಾ ರಾಣಿಯ ಅನುಮತಿಯ ಹೊರತು ಯಾವುದೊಂದು ರಾಜ್ಯಕಾರ್ಯವನ್ನು ನಡೆಸಲಾರದು, ಅಂದರೆ ದೇಶದಲ್ಲಿ ಅರಸುತನವು ಒಂದು ಮಹಾಶಕ್ತಿಯಾಗಿದ್ದಂತೆ ಪಾರ್ಲಮೆಂಟು ಸಹ ಒಂದು ಮಹಾಶಕ್ತಿಯಾಗಿದೆಯೆಂತಲೂ ದೇಶಕ್ಕೆ ಹಿತವನ್ನು ಮಾಡುವದು ಅರಸನ ಕೈಯಲ್ಲಿದ್ದ ಹಾಗೆಯೇ ಈ ಸಭೆಯವರ ಕೈಯಲ್ಲಿಯೂ ಉಂಟೆಂತಲೂ ಅಲ್ಲಿಯ ದೊಡ್ಡವರೂ ಸಣ್ಣವರೂ ಗ್ರಹಿಸುವರು. ಈ ಪಾರ್ಲಮೆಂಟಿನಲ್ಲಿ ಎರಡು ಶಾಖೆಗಳುಂಟು. ಒಂದಕ್ಕೆ ಲಾರ್ಡರಸಭೆ, ಎಂದರೆ ಅರಸನ ಮತ್ತು ಉಚ್ಚಪ್ರತಿಯ ಜನರ ಸಭೆಯೆಂತಲೂ ಮತ್ತೊಂದಕ್ಕೆ ಕಾಮನ್ನರಸಭೆ ಎಂದರೆ ಪ್ರಜೆಗಳು ತಮ್ಮ ಪಕ್ಷದಿಂದ ಆರಿಸಿಕೊಟ್ಟ ಪ್ರತಿನಿಧಿಗಳಸಭೆಯೆಂತಲೂ ಹೆಸರುಗಳಿವೆ. ಲಾರ್ಡರ ಸಭೆಯಲ್ಲಿ ಒಟ್ಟು ೫೭೦ ಮಂದಿ ಸಭಾಸದರಿರುವರು. ಇವರಲ್ಲಿ ೬ ಜನ ಅರಸು ಮನೆತನದವರು ಇಬ್ಬರು ಆರ್ಚ್‌ಬಿಶಪ್ಪರು, ೨೨ ಜನ ಡ್ಯೂಕರು, ೨೨ ಜನ ಮಾರ್ಕ್ವೀಸರು, ೧೨೦ ಜನ ಅರ್ಲರು, ೨೬ ಜನ ಹ್ವಾಯಕೌಂಟರು, ೨೪ ಜನ ಬಿಶಪ್ಪರು, ೩೦೪ ಜನ ಬ್ಯಾರನ್ನರು ಈ ಮೇರೆಗೆ ಒಟ್ಟು ೫೩೬ ಜನರು ಇಂಗ್ಲಂಡದ ಕಡೆಯಿಂದ, ಉಚ್ಚಪ್ರತಿಯ ೧೬ ಜನರು ಸ್ಕಾಟಲಂಡದ ಕಡೆಯಿಂದ ಮತ್ತು ೨೮ ಶ್ರೇಷ್ಠ ಪ್ರತಿಯ ಜನರು ಐಯರ್ಲಂಡದ ಕಡೆಯಿಂದ ಇರುವರು. ಕಾಮನ್ನರ ಸಭೆಯಲ್ಲಿ ಒಟ್ಟು ೬೭೦ ಜನ ಸಭಾಸದರಿರುವರು. ಇವರಲ್ಲಿ ಇಂಗ್ಲಂಡ

೧. ಮುಖ್ಯ ಧರ್ಮಗುರುಗಳು. ೨. ಧರ್ಮಾಧಿಗಳು.

ಮತ್ತು ವೆಲ್ಸ ಇನ್ನುಗಳ ಕಡೆಯಿಂದ ೪೯೫ ಜನ ಸ್ಕಾಟಲಂಡದ ಕಡೆಯಿಂದ ೭೨ ಜನ ಮತ್ತು ಐರ್ಲಂಡದ ಕಡೆಯಿಂದ ೧೦೩ ಜನ ಪ್ರತಿನಿಧಿಗಳಿರುವರು. ಈ ಅಂಕೆಗಳು ಸ್ಥೂಲವಾದವು.

ಪಾರ್ಲಮೆಂಟ ಸಭೆಯ ಮಹತ್ವವು.

ಈ ಎರಡು ಸಭೆಗಳಲ್ಲಿ, ಲಾರ್ಡರ ಸಭೆಯನ್ನು ಸೇರುವದು ಸಂಪೂರ್ಣವಾಗಿ ಅರಸನ ಇಚ್ಛೆಯನ್ನು ಅವಲಂಬಿಸಿರುವದು. ಆದರೆ ಕಾಮನ್ನರ ಸಭೆಯನ್ನು ಸೇರುವದು ಅರಸನ ಇಚ್ಛೆಯ ಮೇಲಿಲ್ಲದೆ, ಪ್ರತಿಯೊಬ್ಬ ಮನುಷ್ಯನ ಬುದ್ಧಿಯ ಮೇಲೆಯೂ ಅವನ ಕಾರ್ಯದಕ್ಷತೆಯ ಮೇಲೆಯೂ ಅವಲಂಬಿಸಿರುವದು; ಯಾಕೆಂದರೆ ಜನರು ಬುದ್ಧಿವಂತನನ್ನೂ ಕಾರ್ಯದಕ್ಷನನ್ನೂ ಆರಿಸಿಕೊಂಡು, ಅವನನ್ನೇ, ತಮ್ಮ ಪಕ್ಷದಿಂದ ಆ ಸಭೆಗೆ ಕಳುಹಿಸುವರು. ಈ ಪ್ರಕಾರ ಆರಿಸಲ್ಪಡುವದು ಬಹುಮಾನದ್ದೆಂದೆಣಿಸುವ ಸಂಪ್ರದಾಯವು ಆದೇಶದಲ್ಲುಂಟು. ಈ ಮಾನದ ಮುಂದೆ ಹಿಂದುಸ್ಥಾನದ ಒಬ್ಬ ಗವ್ಹರ್ನರನಿಗೆ ಸಿಕ್ಕುವ ಮಾನವು ಏನೂ ಅಲ್ಲೆಂದು ಅವರು ತಿಳಿದುಕೊಳ್ಳುವರು. ಕೆಲವು ವರ್ಷಗಳ ಹಿಂದೆ ಚತುರನೂ ವ್ಯವಹಾರಜ್ಞನೂ ಆದ (Sir Richard Temple.) ಸರ್ ರಿಚರ್ಡ ಟೆಂಪಲ್ಲನೆಂಬ ದೊರೆಯು ನಮ್ಮ ಇಲಾಖೆಯ ಗವ್ಹರ್ನರನಾಗಿದ್ದನಷ್ಟೇ. ಅವನು ತನ್ನ ೫ ವರ್ಷಗಳ ಅಡಳಿತವು ಮುಗಿಯುವ ಪೂರ್ವದಲ್ಲಿಯೇ ಆ ಉದ್ಯೋಗವನ್ನು ಬಿಟ್ಟು, ಪಾರ್ಲಮೆಂಟಿನ ಆಯುವಿಕೆಯಲ್ಲಿ ತಾನು ಬರುವ ಪ್ರಯತ್ನಕ್ಕಾಗಿ ಇಂಗ್ಲಂಡಕ್ಕೆ ತೆರಳಿದನೆಂಬುದು ಬಹು ಜನರಿಗೆ ಗೊತ್ತಿರಬಹುದು. ಈ ಸಂಗತಿಯಿಂದ ಪಾರ್ಲಮೆಂಟ ಸಭೆಯ ಮಹತ್ವವು ವಾಚಕರ ಲಕ್ಷ್ಯದಲ್ಲಿ ಸುಲಭವಾಗಿ ಬರಬಹುದು. ಈ ಸಭೆಯನ್ನು ಸೇರಿದವರಿಗೆ ದೇಶಹಿತದ ಕಾರ್ಯಗಳನ್ನೆಸಗಲು ವಿಶೇಷ ಅನುಕೂಲವುಂಟು. ಅದು ಕಾರಣ ವಿದ್ಯಾಸಂಪನ್ನರಾಗಿ ದೊಡ್ಡ ದೊಡ್ಡ ಪರೀಕ್ಷೆಗಳನ್ನು ಕೊಟ್ಟು, ಪದವಿಗಳನ್ನು ಪಡೆದವರೊಳಗಿನ ಕೀರ್ತಿಪ್ರಿಯರಾದ ತರುಣರು ಕಾಮನ್ನರ ಸಭೆಯನ್ನು ಸೇರಿ, ಅಲ್ಲಿ ತಮ್ಮ ದೀರ್ಘ ಪ್ರಯತ್ನಗಳಿಂದಲೂ ಕರ್ತೃತ್ವ ಶಕ್ತಿಯಿಂದಲೂ ಸಾರ್ವಜನಿಕ ಕಾರ್ಯಗಳನ್ನೆಸಗಿದರೆ, ಮಾತ್ರ ತಾವು ಕೃತಾರ್ಥರಾದೆವೆಂದೆಣಿಸುವರು. ಇದೇ ಮೇರೆಗೆ ಗ್ಲ್ಯಾಡ್‌ಸ್ಟನ್ನನು ಸಹ ಎಣಿಸುವದು ಸಹಜವು. ಈ ಸಂಗತಿಯನ್ನು ನಮ್ಮಲ್ಲಿಯ ಸುಶಿಕ್ಷಿತರು ಲಕ್ಷ್ಯದಲ್ಲಿಡತಕ್ಕದ್ದು.

ಲಿಬರಲ್ ಮತ್ತು ಕಾನ್ಸರ್ವೇಟಿವ್ ಪಕ್ಷ

ಇಂಗ್ಲಂಡದ ರಾಜ್ಯದಾಡಳಿತದಲ್ಲಿ ಬಲು ಕೌತುಕದೊಂದು ಪದ್ಧತಿಯುಂಟು; ಅದೇನೆಂದರೆ:—ಬಹುಕಾಲದಿಂದ ಆ ದೇಶದ ದೊರೆತನದಲ್ಲಿ ಎರಡು ಬಲವಾದ ಪಕ್ಷಗಳಾಗಿರುವವು. ಅವುಗ

ಗಳು.

ಅಲ್ಲಿ ಸನ್ ೧೮೩೪-೩೫ ವರ್ಷದ ತನಕ ಒಂದಕ್ಕೆ (Whig) ವಿಗ್, ಮತ್ತೊಂದಕ್ಕೆ (Tory) ಟೋರಿ ಎಂಬ ಹೆಸರುಗಳಿದ್ದವು. ಆದರೆ ಇತ್ತಿತ್ತಲಾಗಿ ವಿಗ್ ಪಕ್ಷಕ್ಕೆ (Liberal) ಲಿಬರಲ್ ಪಕ್ಷವೆಂತಲೂ ಟೋರಿ ಪಕ್ಷಕ್ಕೆ (Conservative) ಕಾನ್‌ಸರ್ವೇಟೀವ್ ಪಕ್ಷವೆಂತಲೂ ಹೆಸರುಗಳು ಬಂದಿವೆ. ಬಹು ದಿವಸಗಳ ಅನುಭವದಿಂದಲೂ ಕಾಲಕ್ಕನುಸಾರವಾಗಿಯೂ ರಾಜ್ಯದಾಡಳಿತದಲ್ಲಿ ಹಿತಕರವಾದ ತಿದ್ದುಪಡಿ ಮಾಡುವದು ಅವಶ್ಯವೆಂದು ಕಂಡು ಬಂದಲ್ಲಿ, ಅದನ್ನು ಒಮ್ಮೆಲೆ ಮಾಡವಬೇಕೆಂತಲೂ, ಅದಕ್ಕೆ ಯಾರೂ ಅಡ್ಡಿ ಮಾಡ ಕೂಡದೆಂತಲೂ ಲಿಬರಲ್ ಪಕ್ಷದರು ಹೇಳುವರು. ಬಹು ದಿವಸಗಳಿಂದ ನಡೆಯುತ್ತ ಬಂದಿರುವ ಹಳೆ ಪದ್ಧತಿಗಳನ್ನು ಹಾಗೆಯೇ ನಡೆಯಗೊಡಬೇಕೆಂತಲೂ ಅವುಗಳಲ್ಲಿ ಏನೂ ಹೆಚ್ಚು ಕಡಿಮೆ ಮಾಡಕೂಡದೆಂತಲೂ ಕಾನ್‌ಸರ್ವೇಟೀವ್ ಪಕ್ಷದವರು ವಾದಿಸುವರು. ಈ ಎರಡೂ ಪಕ್ಷದವರು ಪಾರ್ಲಮೆಂಟಿನಲ್ಲಿರುವರು. ಈ ಸಭೆಯ ಕಾರ್ಯಗಳೆಲ್ಲ ಬಹು ಮತದಂತೆ ನಿರ್ಣಯಿಸಲ್ಪಡುವ ಕಾರಣ, ಪಾರ್ಲಮೆಂಟಿನಲ್ಲಿ ಹೆಚ್ಚು ಜನರುಳ್ಳ ಪಕ್ಷದವರ ಚಲ್ಲಾಟವೇ ನಡೆಯುವದು; ಅವರ ಶಕ್ತಿಯು ಹೆಚ್ಚುವದು; ರಾಜ್ಯಸೂತ್ರಗಳೆಲ್ಲ ಅವರ ಕೈಸೇರುವವು. ಆ ಪಕ್ಷದವರೇ ಮಂತ್ರಿ ಸಭೆಯ ಅಧಿಕಾರಸ್ಥರಾಗುವರು. ಹೀಗಾಗುವದರಿಂದ ಪ್ರತಿ ಪಕ್ಷದವರಿಗೆ ರಾಜ್ಯದಾಡಳತೆಯಲ್ಲಿ ಆಸ್ಪದವೇ ಇಲ್ಲದಂತಾಗುವದು. ಅರಸನಿಗಂತು ಯಾವ ಪಕ್ಷದ ಅಭಿಮಾನವೂ ಇರುವದಿಲ್ಲ. ಅವನು ಮತಾಧಿಕ್ಯವುಳ್ಳ ಪಕ್ಷದ ಅಭಿಮಾನಿಯಾಗಿರುವನೆಂದು ಹೇಳಿದರೂ ಹೇಳಬಹುದು. ಈ ಉಭಯ ಪಕ್ಷದವರು ಒಬ್ಬರನ್ನೊಬ್ಬರು ಹಿಮ್ಮೆಟ್ಟಿಸುವ ಕಾಂಕ್ಷೆಯಿಂದ ಪಾರ್ಲಮೆಂಟಿನಲ್ಲಿ ತಮ್ಮ ತಮ್ಮ ಪಕ್ಷದ ಜನರನ್ನು ಹೆಚ್ಚಿಸಲು ವಿಶ್ವ ಪ್ರಯತ್ನ ಮಾಡುವರು. ಈ ಗುದ್ದಾಟವು ಎಡೆಬಿಡದೆ ನಡೆದಿರುವದು. ಅಂಗ ಸಾಧನೆಗಳನ್ನು ಮಾಡುವ ಜಟ್ಟಿಗಳ ಶರೀರಗಳು ದೃಢವಾಗುವಂತೆ ಈ ಗುದ್ದಾಟವು ರಾಜ್ಯಕ್ಕೆ ಹಿತಕರವಾದದ್ದೆಂದು ಅಲ್ಲಿಯ ಬುದ್ಧಿವಂತರು ಅಭಿಪ್ರಾಯಪಡುವರು.

ಪಕ್ಷಾಂತರವು.

ಈ ಪಕ್ಷ ಭೇದದ ಸಂಬಂಧವಾಗಿ ಹೇಳತಕ್ಕ ಇನ್ನೊಂದು ಸಂಗತಿ ಏನೆಂದರೆ:—ತಿಳುವಳಿಕೆಯು ಹುಟ್ಟಿದ ಹಾಗೆ ಇಲ್ಲವೆ ಅನುಭವ ಹೆಚ್ಚಾದ ಹಾಗೆ ಒಂದು ಪಕ್ಷದವರು ಮತ್ತೊಂದು ಪಕ್ಷಕ್ಕೆ ಸೇರಿಕೊಳ್ಳುವರು. ಈ ಮಾತಿಗೆ ಕೆಲವು ಉದಾಹರಣೆಗಳನ್ನು ಕೊಡಬಹುದು. ಅವುಗಳಲ್ಲಿ ಗ್ಲ್ಯಾಡ್‌ಸ್ಟನ್ನನ ಉದಾಹರಣೆಯೇ ಒಂದಾಗಿದೆ. ಅವನು ಶಾಲೆಯಲ್ಲಿಯೂ ಕಾಲೇಜದಲ್ಲಿಯೂ ಇದ್ದಾಗಿನಿಂದ ಕಾನ್‌ಸರ್ವೇಟೀವ್ ಪ

ಕ್ಷದ ಪೂರ್ಣಾಭಿಮಾನಿಯಾಗಿದ್ದನು. ಅನೇಕಾನೇಕ ವರ್ಷಗಳಿಂದ ನಡೆದು ಬಂದ ಪದ್ಧತಿಗಳೆಲ್ಲ ಉತ್ತಮವಾದವುಗಳೆಂದು ಅವನು ಎಣಿಸುತ್ತಿದ್ದನು. ರಾಜ್ಯವ್ಯವಸ್ಥೆಯಲ್ಲಿ ತಿದ್ದುಪಡಿ ಮಾಡುವ ಮಾತನ್ನು ಯಾರಾದರೂ ತೆಗೆದರೆ, ಅವನ ಪಿತ್ತವು ತಲೆಗೇರುತ್ತಿತ್ತು. ಈಟನ್ ಮತ್ತು ಆಕ್ಸಫರ್ಡ ಸಭೆಗಳಲ್ಲಿ ಇಂಥ ವಾದವಿವಾದದ ವಿಷಯಗಳು ಮೇಲಿಂದ ಮೇಲೆ ಹೊರಡುತ್ತಿದ್ದವು. ಆ ಪ್ರಸಂಗಗಳಲ್ಲಿ ಅವನು ತನ್ನ ವಾಗ್ಬಲದಿಂದಲೂ ಬುದ್ಧಿ ಚಾತುರ್ಯದಿಂದಲೂ ಲಿಬರಲ್ ಪಕ್ಷದವರ ಮಾತನ್ನು ಕಟ್ಟಿ, ತನ್ನ ಮತವನ್ನು ಸ್ಥಾಪಿಸುತ್ತಿದ್ದನು. ಸನ್ ೧೮೩೧ನೆಯ ಇಸವಿಯಲ್ಲಿ (Reform Bill) ರಿಫಾರ್ಮಬಿಲ್ಲನ್ನು ಅಂದರೆ ಪಾರ್ಲಮೆಂಟಿನ ಸುಧಾರಣೆಯ ಕಾಯದೆಯ ಮಸೂದೆಯನ್ನು ಲಾರ್ಡಗ್ರೇ ದೊರೆಯು ಪಾರ್ಲಮೆಂಟಿನಲ್ಲಿ ತಂದಿದ್ದನು. ಅವನು ಆ ಮಸೂದೆಯಲ್ಲಿ ಪಾರ್ಲಮೆಂಟಿನ ಸಭಾಸದರನ್ನು ಆರಿಸುವ ಸಂಬಂಧದ ಹಳೆ ಪದ್ಧತಿಯನ್ನು ತಿದ್ದುವ ಒಂದು ನಿಯಮವನ್ನು ಸೇರಿಸಿದ್ದನು. ಆ ನಿಯಮವು ಸಮರ್ಪಕವೂ ಅವಶ್ಯಕವೂ ಆಗಿದ್ದರೂ ಅದರಿಂದ ಆ ಹಳೆ ಪದ್ಧತಿಯಲ್ಲೆಲ್ಲಾ ಹೆಚ್ಚು ಕಡಿಮೆ ಮಾಡಬೇಕಾಗುತ್ತಿತ್ತು. ಆದೇ ವಿಷಯವು ಆಕ್ಸಫರ್ಡ ವಿಶ್ವವಿದ್ಯಾಲಯದ ಸಭೆಯಲ್ಲಿ ವಾದವಿವಾದಕ್ಕಾಗಿ ಹೊರಟಾಗ ಗ್ಲ್ಯಾಡಸ್ಟನ್ನನು ಹುಬ್ಬು ಗಂಟಿಕ್ಕಿ ಕಡು ಸಿಟ್ಟಿನಿಂದ "ಈ ನಿಯಮವು ನಮ್ಮ ರಾಜ್ಯ ಪದ್ಧತಿಯನ್ನು ಬುಡಮೇಲು ಮಾಡುವದು. ನಮ್ಮ ಸಮಾಜದ ಕಟ್ಟನ್ನು ಸಡಲಿಸುವದು." ಎಂದು ಹೇಳಿದನು. ಇದು ಅವನು ಕಾನ್‌ಸರ್ವೇಟೀವ್ ಪಕ್ಷದವನಿದ್ದಾಗ ಹೊರಗೆಡವಿದ ಅಭಿಪ್ರಾಯವು. ಮುಂದೆ ಅವನ ಆ ಅಭಿಪ್ರಾಯವು ಕ್ರಮೇಣ ಬದಲಾಗುತ್ತ ಹೋಗಿ ಸನ್ ೧೮೫೫ರಲ್ಲಿ ಅವನು ಸಂಪೂರ್ಣವಾಗಿ ಲಿಬರಲ್ ಪಕ್ಷಾಭಿಮಾನಿಯಾದನು. ಅಂದಿನಿಂದ ಅವನು ಪೂರ್ವದಲ್ಲಿ ತನಗಿದ್ದ ಕಾನ್‌ಸರ್ವೇಟೀವ್ ಮತಾಭಿಮಾನಕ್ಕಾಗಿ ಒಮ್ಮೊಮ್ಮೆ ಪಶ್ಚಾತ್ತಾಪದ ಉದ್ಗಾರಗಳನ್ನು ಸ್ಪಷ್ಟವಾಗಿ ಹೊರಗೆಡವುತ್ತಿದ್ದನು. ಸನ್ ೧೮೩೮ನೆಯ ವರ್ಷ ಅಕ್ಸಫರ್ಡದಲ್ಲಿ ನೆರೆದ ಒಂದು ಸಭೆಯಲ್ಲಿ ಅವನು ಆ ವಿಷಯವನ್ನು ಕುರಿತು ಹೇಳಿದ್ದೇನೆಂದರೆ:—"ಆಕ್ಸಫರ್ಡ ವಿಶ್ವವಿದ್ಯಾಲಯದಲ್ಲಿ ನಾನಿದ್ದಾಗ ಅದರ ಶಿಕ್ಷಣ ಕ್ರಮದಲ್ಲಿ ಒಂದು ದೊಡ್ಡ ದೋಷವಿದ್ದಂತೆ ನನಗೆ ತೋರುತ್ತದೆ. ಒಂದು ವೇಳೆ ಅದು ನನ್ನ ಸ್ವಂತ ದೋಷವಾಗಿದ್ದರೂ ಇರಬಹುದು. ನಾನು ಅಲ್ಲಿ ಕಲಿತುಕೊಳ್ಳಲಿಕ್ಕಾಗದ್ದನ್ನು ಆ ವಿದ್ಯಾಲಯ ಬಿಟ್ಟು ಬಂದ ಬಳಿಕ ಕಲಿತುಕೊಂಡೆನು. ನಾಶರಹಿತವಾದ ಮತ್ತು ಅಮೂಲ್ಯವಾದ ಮನುಷ್ಯ ಸ್ವಾತಂತ್ರ್ಯದ ಮೂಲತತ್ವಗಳ ನಿಜವಾದ ಜ್ಞಾನವನ್ನು ನಾನು ಅಲ್ಲಿ ಪಡೆಕೊಳ್ಳಲಿಲ್ಲ. ಆದರೆ ಈಗ ಅದನ್ನು ಪಡಕೊಂಡಿದ್ದೇನೆ." ಇದೇನು ಅಷ್ಟೊಂದು ಆಶ್ಚರ್ಯಕರವಾದ ಸಂಗತಿ

ಯಿಲ್ಲ. ಯಾಕೆಂದರೆ ಸಂಪೂರ್ಣ ಜ್ಞಾನವು ಮನುಷ್ಯನಿಗೆ ಒಮ್ಮೆಲೇ ದೊರೆಯುವದಿಲ್ಲ. ಜ್ಞಾನವನ್ನೆಲ್ಲ ಒಂದು ಗಂಟು ಕಟ್ಟಿ ಯಾರೂ ಎಲ್ಲಿಯೂ ಇಟ್ಟಿಲ್ಲ. ಅದನ್ನು ಒಮ್ಮೆಲೇ ಯಾರಿಗೂ ಕೊಡಲಿಕ್ಕೂ ತೆಗೆದುಕೊಳ್ಳಲಿಕ್ಕೂ ಬರುವದಿಲ್ಲ. ಕೆಲವು ವಿಷಯಗಳ ಜ್ಞಾನವನ್ನಂತು ಸ್ವಂತ ಅನುಭವದಿಂದಲೇ ಪಡೆದುಕೊಳ್ಳಬೇಕಾಗುತ್ತದೆ. ಅದನ್ನು ಶ್ರವಣದಿಂದಾಗಲಿ ಪಠಣದಿಂದಾಗಲಿ ಪಡೆದುಕೊಳ್ಳುವದು ಅಸಂಭವವು. ಅದುಕಾರಣ ಗ್ಲ್ಯಾಡ್‌ಸ್ಟನ್ನನು ಆ ಜ್ಞಾನವನ್ನೂ ಆ ಅನುಭವವನ್ನೂ ಪಡೆದುಕೊಂಡ ಬಳಿಕ, ತನ್ನ ಮೊದಲಿನ ಮತವನ್ನು ಬಿಟ್ಟು ಬಿಡಲು ಏನೂ ಸಂಶಯ ಪಡಲಿಲ್ಲ ಅಥವಾ ನಾಚಲಿಲ್ಲ. ಇದರಿಂದ ನೀತಿ ಧೈರ್ಯವು ಅವನಲ್ಲಿ ದೃಢತರವಾಗಿತ್ತೆಂದು ಕಂಡು ಬರುತ್ತದೆ.

ಗ್ಲ್ಯಾಡ್‌ಸ್ಟನ್ನನು ದೇಶ ಪರ್ಯಟನಕ್ಕೆ ಹೊರಟದ್ದು, ೧೮೩೨, ಜಾನೇವಾರಿ.

ಹಿಂದಿನ ಅಧ್ಯಾಯದ ಕೊನೆಯಲ್ಲಿ ಹೇಳಿದ ಮೇರೆಗೆ ಗ್ಲ್ಯಾಡ್‌ಸ್ಟನ್ನನು ಸನ್ ೧೮೩೧ ನೆಯ ಇಸವಿಯಲ್ಲಿ ವಿಶ್ವವಿದ್ಯಾಲಯದ ಶಿಕ್ಷಣವನ್ನೆಲ್ಲಾ ತೀರಗಲಿತನು. ಆದರೆ ಈ ಶ್ರವಣ ಪಠಣಗಳಿಂದಾದ ಜ್ಞಾನವು ದೇಶ ಪರ್ಯಟನದ ಹೊರತು ಪೂರ್ಣತ್ವವನ್ನೈದುವದಿಲ್ಲೆಂಬ ಹಿರಿಯರ ವಚನವನ್ನು ಲಕ್ಷ್ಯದಲ್ಲಿ ತಂದು, ಯುರೋಪ ಖಂಡದೊಳಗಿನ ಮುಖ್ಯ ಮುಖ್ಯ ಸ್ಥಳಗಳನ್ನು ನೋಡಲು ಹೊರಟನು. ಅವನನ್ನು (Lord Lincoln) ಲಾರ್ಡ್‌ಲಿಂಕನ್ನನೂ (Lord Hallam) ಲಾರ್ಡ್ ಹ್ಯಾಲಮನೂ ಹಿಂಬಾಲಿಸಿದರು. ಅವರು ಮೊದಲು ಫ್ರಾನ್ಸ ದೇಶಕ್ಕೆ ಹೋದರು. ಆ ದೇಶದೊಳಗೆ ಸನ್ ೧೮೩೦ ರಲ್ಲಿ ಹುಟ್ಟಿದ ರಾಜ್ಯಕ್ರಾಂತಿಯು ಅದೇ ಶಮ್ಯಣಿಯಾಗಿ ಶಾಂತತೆಯ ಕುರುಹುಗಳನ್ನು ಅಲ್ಲಲ್ಲಿ ತೋರಹತ್ತಿದ್ದವು. ಅಲ್ಲಿಯ ಮುಂದಾಳುಗಳು ಲೂಯಿಫಿಲಿಪಿ ಎಂಬವನನ್ನು ಗದ್ದುಗೆಯ ಮೇಲೆ ಕುಳ್ಳಿರಿಸಿ, ಪಾರ್ಲಮೆಂಟ ಸಭೆಯನ್ನು ಕೂಡಿಸುವ ಉದ್ಯೋಗದಲ್ಲಿ ತೊಡಗಿದ್ದರು. ಈ ಸಮಯದಲ್ಲಿ ಲಾರ್ಡ್‌ಗ್ರೆನ್‌ವಿಲ್ಲನೆಂಬ ದೊರೆಯು ಇಂಗ್ಲಂಡದ ರಾಯಭಾರಿಯಾಗಿ ಫ್ರಾನ್ಸ ದೇಶಕ್ಕೆ ಬಂದಿದ್ದನು. ಅವನ ಮನೆಯಲ್ಲಿ ಗ್ಲ್ಯಾಡ್‌ಸ್ಟನ್ನನಿರುವಾಗ, ಅವನಿಗೆ ಥಾಯರ್ಸ, ಗೀಝೋ, ಲಾಫ್‌ಯತ್ ಮುಂತಾದ ಫ್ರೆಂಚ್ ಪ್ರಸಿದ್ಧ ಪುರುಷರ ದರ್ಶನವಾಯಿತು. ಇದರ ಹೊರತು ಅವನು ಅಲ್ಲಿಯ ಒಡ್ಡೋಲಗ, ನ್ಯಾಯಸ್ಥಾನವೇ ಮುಂತಾದ ನೋಡತಕ್ಕ ಸ್ಥಳಗಳನ್ನು ಎಳ್ಳಷ್ಟು ಬಿಡದೆ ನೋಡಿ, ಅವುಗಳ ಸಂಪೂರ್ಣ ಜ್ಞಾನವನ್ನು ಪಡಕೊಂಡನು. ಮುಂದೆ ಅವನು ತನ್ನ ಇಬ್ಬರು ಗೆಳೆಯರನ್ನು ಅಲ್ಲಿಯೇ ಬಿಟ್ಟು, ಒಬ್ಬನೇ ಇಟಲಿ ದೇಶಕ್ಕೆ ತೆರಳಿದನು. ಅಲ್ಲಿಂದ ಅವನು ಸಿಸಿಲಿ ಎಂಬ ನಡುಗಡೆಗೆ ಹೋಗಿ, ಅಲ್ಲಿಯ ಅತ್ಯುನ್ನತವಾದ ಒಂದು ಪ

ರ್ವತದ ಶಿಖರದ ಮೇಲಿನುವ 'ಅಡವಿಯ ಅರಸುಮರ' ಎಂಬ ಹೆಸರಿನ ಪೃಥ್ವಿಯೊಳಗಿನ ಎಲ್ಲಕ್ಕೂ ಹಳೆದಾದ ಮರವನ್ನೂ, (Etna) ಏಟ್ನಾ ಎಂಬ ಪ್ರಸಿದ್ಧ ಜ್ವಾಲಾಮುಖಿ ಪರ್ವತವನ್ನೂ, ಹೊತ್ತಾರೆಯಲ್ಲಿ ಬಿದ್ದ ಪ್ರಚಂಡವಾದ ಒಂದು ಶಂಕ್ವಾಕಾರದ ಅದರ ನೆರಳನ್ನೂ, ಅತಿಶಯ ಮನೋಹರವಾದ ಅಲ್ಲಿಯ ಸೃಷ್ಟಿ ಸೌಂದರ್ಯವನ್ನೂ ನೋಡಿ ಬೆರಗಾದನು. ಸೃಷ್ಟಿಕರ್ತನ ಈ ಅತ್ಯಗಾಧವಾದ ಕೃತಿಗಳೂ ಮಹಿಮೆಯೂ ಏಕಕಾಲಕ್ಕೆ ಅವನ ಧರ್ಮನಿಷ್ಠವಾದ ಹೃದಯವನ್ನು ಪ್ರವೇಶಿಸಿ ಅವನನ್ನು ಪುಳುಕಾಂಕಿತನನ್ನಾಗಿ ಮಾಡಿ ಬಿಟ್ಟವು. ಅವನು ಇವುಗಳನ್ನೆಲ್ಲ ನೋಡಿ, ಒಬ್ಬ ಸಾಮಾನ್ಯ ಪ್ರವಾಸಿಯಂತೆ ಸುಮ್ಮನಾದನೇನು? ಇಲ್ಲ. ಅವನು ಕೆಲವು ದಿವಸಗಳಲ್ಲಿ ಇವುಗಳ ಮೇಲೆ ಎಷ್ಟೋ ಗದ್ಯಪದ್ಯಗಳನ್ನು ರಚಿಸಿ ಪ್ರಸಿದ್ಧಿಸಿದನು. ಇವುಗಳನ್ನು ಓದಿ, ಗ್ಲ್ಯಾಡ್‌ಸ್ಟನ್ನನು ಹುಟ್ಟುಕವಿಯೂ ಆಗಿರುವನೆಂದು ಉದ್ಗ್ರಂಥಕಾರರು ಅವನನ್ನು ಹೊಗಳುವರು. ಬಳಿಕ ಅವನು ಇಟಲಿ ದೇಶಕ್ಕೆ ತಿರುಗಿ ಬಂದನು. ಅವನು ಬಂದ ಕೆಲವು ದಿವಸಗಳಲ್ಲಿಯೇ ಅಲ್ಲಿಯ ರಾಜ್ಯದಾಡಳಿತೆಯಲ್ಲಿ ಬಹಳ ಅವ್ಯವಸ್ಥೆ ಇರುವದೆಂದು ಅರಿತುಕೊಂಡನು. ಆ ಮೇಲೆ ಅವನು ಆ ಆಡಳಿತದ ವಿಷಯದಲ್ಲಿ ಹೆಚ್ಚಿಗೆ ತಿಳಿದುಕೊಳ್ಳುವದರಲ್ಲಿಯೂ ಆ ದೇಶದ ಭಾಷೆಯನ್ನು ಕಲಿತುಕೊಳ್ಳುವದರಲ್ಲಿಯೂ ಕಾಲಕಳೆಯ ಹತ್ತಿದನು.

ಇತ್ತ ಇಂಗ್ಲಂಡದಲ್ಲಿ ಬಹಳ ಗೊಂದಲಗಳೆದ್ದಿದವು. ಆ ಹೊತ್ತಿಗೆ ಎಂದರೆ ಸನ್ ೧೮೩೨ ನೆಯ ಇಸವಿಯ ಪೂರ್ವದಲ್ಲಿಯೂ ತರುವಾಯದಲ್ಲಿಯೂ ಇಂಗ್ಲಂಡದಲ್ಲಿ ಮತ್ತು ಅದರ ನೆರೆಹೊರೆಯ ದೇಶಗಳಲ್ಲಿ ನಡೆದ ಸಂಗತಿಗಳನ್ನು ಸ್ವಲ್ಪ ಹೇಳಿದರೆ, ಆ ಗೊಂದಲಗಳ ಕಾರಣವು ವಾಚಕರ ಲಕ್ಷ್ಯದಲ್ಲಿ ಬೇಗನೆ ಬರಬಹುದು. ಆ ಕಾಲದಲ್ಲಿ ಇಂಗ್ಲಂಡವನ್ನು ೪ ನೆಯ ವಿಲಿಯಮ್ ಎಂಬ ಅರಸು ಆಳುತ್ತಿದ್ದನು. ಫ್ರೆಂಚರು ತಮ್ಮ ೧೦ ನೆಯ ಚಾರ್ಲಸನೆಂಬ ಅರಸನನ್ನು ಸಿಂಹಾಸನದಿಂದ ತಳ್ಳಿ, ಅವನನ್ನು ಗಡಿದಾಟಿಸಿದ್ದರು. ಬೆಲ್ಜಮ್ಮುವು ಹಾಲಂಡದ ಕೂಡ ಬಡಿದಾಡಿ ಬೇರೆಯಾಗಿತ್ತು. ಅವುಗಳನ್ನು ಕಂಡು ಇಂಗ್ಲಂಡದ ಜನರಲ್ಲಿಯೂ ಆವೇಶವು ಹುಟ್ಟಿತ್ತು. ಫ್ರಾನ್ಸ್ ಬೆಲ್ಜಮ್ ಮುಂತಾದ ದೇಶಗಳಲ್ಲಿ ಪ್ರಜಾಸತ್ತಾತ್ಮಕ ರಾಜ್ಯ ಪದ್ಧತಿಯ ಮಹತ್ವವು ಬೆಳೆದಿರುವಂತೆ, ಇಂಗ್ಲಂಡದಲ್ಲಿಯೂ ಬೆಳೆದರೆ, ಲೇಸಾಗುವದೆಂದು ಅಲ್ಲಿಯ ಜನರು ಎಣಿಸುತ್ತಿದ್ದರು. ಇಂಗ್ಲಂಡದ ರಾಜ್ಯವ್ಯವಸ್ಥೆಯಲ್ಲಿ ತಿದ್ದುಪಡಿಯಾಗಬೇಕೆಂತಲೂ ಪಾರ್ಲಮೆಂಟಿನ ಸಭಾಸದರನ್ನು ಆರಿಸುವ ಪದ್ಧತಿಯಲ್ಲಿದ್ದ ಕೊಂಕು-ಕೊರತೆಗಳನ್ನು ತೆಗೆದು ಹಾಕಬೇಕೆಂತಲೂ ಜನರು

ಸನ್ ೧೮೩೨ ನೆಯ ಇಸವಿಯ ಸುಮಾರಿನಲ್ಲಿ ಇಂಗ್ಲಂಡ ದೇಶದಲ್ಲಿ ವರ್ತಿಸಿದ ವಿಶೇಷ ಸಂಗತಿಗಳು ಮತ್ತು ರಿಫಾರ್ಮಬಿಲ್ಲು.

ಗುಲ್ಲನ್ನೆಬ್ಬಿಸಿದ್ದರು. ಆ ಗುಲ್ಲು ದೊರೆತನದವರ ಕಿವಿಗೆ ಸಹ ಬಿದ್ದಿತ್ತು. ಅವರು ತಿಳಿದು ನೋಡಿ, ಇನ್ನು ಮೇಲೆ ಜನರ ಅಭಿಪ್ರಾಯದಂತೆ ಯಾವುದೊಂದು ವ್ಯವಸ್ಥೆ ಮಾಡುವದು ಅವಶ್ಯವೆಂದು ತಿಳಿದುಕೊಂಡಿದ್ದರು. ಮುಂದೆ ಸನ್ ೧೮೩೧ನೆಯ ಇಸವಿಯ ಮಾರ್ಚ ತಿಂಗಳಿನಲ್ಲಿ ಪಾರ್ಲಮೆಂಟ ಸಭೆಯು ಸೇರಿದ ಕೆಲವು ದಿವಸಗಳಲ್ಲಿಯೇ (John Lord Russell) ಜಾನ್‌ಲಾರ್ಡ್‌ರಸೇಲನು ಕಾಮನ್ನರ ಸಭೆಯಲ್ಲಿ ರಿಫಾರ್ಮ ಬಿಲ್ಲನ್ನು (ಪಾರ್ಲಮೆಂಟಿನ ಸುಧಾರಣೆಯ ಸಂಬಂಧದ ಕಾಯಿದೆಯ ಮಸೂದೆಯನ್ನು) ತಂದನು. ಅದು ಸಭೆಯಲ್ಲಿ ಮೊದಲನೆಯ ಸಾರೆ ಓದಲ್ಪಟ್ಟು, ಆದರ ಮೇಲೆ ಸಭಾಸದರ ಮತಗಳು ತೆಗೆದುಕೊಳ್ಳಲ್ಪಟ್ಟವು. ಇದರಲ್ಲಿ ಪ್ರತಿಕೂಲ ಮತಗಳಿಗಿಂತ ಅನುಕೂಲ ಮತಗಳು ಒಂದರಿಂದ ಹೆಚ್ಚಾದವು. ಇದು ಸಾಕಷ್ಟು ಆಧಾರವಾಗಿ ಕಂಡು ಬಾರದ್ದರಿಂದ, ಆ ಮಸೂದೆಯು ನಿರಾಕರಿಸಲ್ಪಟ್ಟಿತು. ಆ ಮಸೂದೆಯು ಹಿತಕರವಾದದ್ದಿದ್ದರೂ, ಕಾನ್ಸರ್ವೇಟೀವ್ ಪಕ್ಷದವರು ಅದರಿಂದ ತಮಗೆ ನಷ್ಟವೂ ಅವಮಾನವೂ ಉಂಟಾಗುವದೆಂದು ಹೇಳತೊಡಗಿದರು. ದೊರೆತನದವರು ಪ್ರಜೆಗಳ ಮನಸ್ಸು ಹೇಗಿರುವದೋ ಪರೀಕ್ಷಿಸಬೇಕೆಂಬ ಇಚ್ಛೆಯಿಂದ, ಆಗಿನ ಪಾರ್ಲಮೆಂಟನ್ನು ಮುರಿದು ಹೊಸದಾಗಿ ಸಭಾಸದರನ್ನು ಆರಿಸಿ, ಪಾರ್ಲಮೆಂಟಿಗೆ ಕಳುಹಿಸಬೇಕೆಂದು ಪ್ರಜೆಗಳಿಗೆ ಆಜ್ಞಾಪಿಸಿದರು. ಅದರಿಂದ ದೇಶದಲ್ಲೆಲ್ಲಾ ದಂಗೆಗಳೆದ್ದವು. ಆ ದಂಗೆಗಾರರು ಕಡುಗೋಪಗೊಂಡು (Nottingham Castle) ನಾಟಿಂಗ್‌ಹ್ಯಾಮ್ ಕಾಸಲ್ ಎಂಬ ಭವ್ಯವಾದ ಕಟ್ಟಡದಕ್ಕೆ ಬೆಂಕಿಯನ್ನಿಕ್ಕಿದರು. ಕೆಲವರು (Bristle) ಬ್ರಿಸ್ಟಲ್ ಪಟ್ಟಣದ ಮೇಲೆ ಬಿದ್ದು, ಅದನ್ನು ಹಿಡಿದುಕೊಂಡು, ಅಲ್ಲಿಯ ಸೆರೆಮನೆಯಲ್ಲಿದ್ದ ಅಪರಾಧಿಗಳನ್ನೆಲ್ಲಾ ಬಂಧಮುಕ್ತರನ್ನಾಗಿ ಮಾಡಿದರು. ಆ ಪುಂಡಾಟಿಕೆಯಲ್ಲಿ ಬಹು ಜನರು ತಮ್ಮ ಜೀವಗಳನ್ನು ಕಳಕೊಂಡರು. ಲಕ್ಷಗಟ್ಟಲೆ ರೂಪಾಯಿಗಳ ನಷ್ಟವುಂಟಾಯಿತು. ಅಷ್ಟು ಅನರ್ಥಗಳನ್ನು ಮಾಡಿದ್ದು ರಿಫಾರ್ಮ ಬಿಲ್ಲಿನ ವಿರೋಧಿಗಳನ್ನು ಹೆದರಿಸುವದಕ್ಕಾಗಿಯೇ ಹೊರತು ಮತ್ತೊಂದರ ಉದ್ದೇಶವಿದ್ದಿಲ್ಲ. ಅಷ್ಟೆಲ್ಲ ಅತ್ತ ನಡೆದಿರಲು, ಇತ್ತ ಹೊಸದಾಗಿ ಆರಿಸಲ್ಪಟ್ಟ ಪ್ರತಿನಿಧಿಗಳು ತಮ್ಮ ಸಭೆಯಲ್ಲಿ ಆ ರಿಫಾರ್ಮ ಬಿಲ್ಲನ್ನು ಮಂಜೂರು ಮಾಡಿಬಿಟ್ಟರು. ಆದರೆ ಲಾರ್ಡರ ಸಭೆಯವರು ಅದನ್ನು ನಿರಾಕರಿಸಿದರು. ಹೀಗಾಗಿ ಆ ಬಿಲ್ಲಿನ ಮಸೂದೆಯು ಅತ್ತೂ ಇಲ್ಲ, ಇತ್ತೂ ಇಲ್ಲ, ನಡುವೆಯೇ ಗಾಳಿಯ ಪಟದಂತೆ ಅಲೆದಾಡುತ್ತ ನಿಂತುಕೊಂಡಿತು.

ಆ ವೇಳೆಯಲ್ಲಿದ್ದ ಇಂಗ್ಲಂಡದ ಸ್ಥಿತಿಯನ್ನು ರಸೆಲ್ಲನೆಂಬ ಪ್ರಸಿದ್ಧ ಗ್ರಂಥಕಾರನು ವರ್ಣಿಸಿರುವದು ಹೇಗೆಂದರೆ:—"ಈ ಹೊಸ ಮಸೂದೆಯು ಮಂಜೂರಾ

ದರೆ, ನೋಡಿದಲ್ಲೆಲ್ಲ ಸ್ವಾತಂತ್ರ್ಯದ ಸುಗ್ಗಿಯೇ ನಡೆಯುವದೆಂದು ಸ್ವಾತಂತ್ರ್ಯ ಪ್ರಿಯರು ತಮ್ಮ ತಮ್ಮೊಳಗೆ ಮಾತನಾಡಿಕೊಳ್ಳುತ್ತಿರುವರು; ದೊರೆತನದವರು ಈಗಿನ ಪ್ರಸಂಗವನ್ನು ನೋಡಿ, ಜಾಣರಾಗಿ, ಜನರು ಬೇಡುತ್ತಿರುವ ಸ್ವಾತಂತ್ರ್ಯವನ್ನು ಅಲ್ಪವಾದರೂ ಕೊಟ್ಟರೆ, ರಾಜ್ಯಕ್ರಾಂತಿಯ ವಿಘ್ನವು ಓರೆಗಾಗುವದೆಂದು ಬುದ್ಧಿಶಾಲಿಗಳು ಹೇಳುತ್ತಿರುವರು; ಇಂಥ ರಾಜಕೀಯ ಹಕ್ಕುಗಳು ಜನರಿಗೆ ದೊರೆದರೆ, ಅವರ ದುಃಖದಾರಿದ್ರ್ಯಗಳು ತಮ್ಮಷ್ಟಕ್ಕೆ ತಾವೇ ದೂರಾಗುವವೆಂದು ಭಾವಿಕ ಜನರು ತಮ್ಮ ಮನಸ್ಸಿನಲ್ಲಿಯೇ ಭಾವಿಸುತ್ತಿರುವರು; ಸಾಲ್ಗೊಂಡು ಬರುತ್ತಲಿರುವ ಈ ಅನರ್ಥಗಳನ್ನು ಕಂಡು, ಅಂಜುಬುರುಕರು ಕೈಕಾಲ್ಗಳು ಬಿಟ್ಟು ಫ್ರಾನ್ಸದಂತೆ ಇಲ್ಲಿಯೂ ರಾಜ್ಯಕ್ರಾಂತಿಯು ಎಲ್ಲಿ ಸಂಭವಿಸುವದೋ ಎಂಬ ಭ್ರಾಂತಿಯಲ್ಲಿ ಬಿದ್ದಿರುವರು; ಐರ್ಲಂಡದಲ್ಲಿ ಬಂಡುಗಳೇಳುವ ಲಕ್ಷಣವು ತೋರುತ್ತಿರುವದು; ತುಂಟರು ಹೆಚ್ಚು ಬರುತ್ತಿರುವದನ್ನು ಕಂಡು, ಐರಿಷ್ ಪ್ರಜೆಗಳು ದೊರೆತನದವರ ಕಟ್ಟಳೆಗಳನ್ನು ಮೀರಿ ನಡೆಯುತ್ತಿರುವರು; ಪೇಟೆಯಲ್ಲಿ ಜನರ ಪತ್ತು ಹಾರಿರುವದು; ತಮ್ಮ ವಸ್ತು-ಒಡವೆಗಳು ಯಾರ ಪಾಲಾಗುವವೋ ಏನೋ ಎಂಬ ಭೀತಿಯಿಂದ ಬೆನ್ನುಬಲವಿಲ್ಲದವರು ಒಕಟಕಾ ಬಾಯಿ ಬಿಡುತ್ತಿರುವರು; ಇನ್ನು ಮೇಲೆ ಯಾವುದೊಂದು ಮಹತ್ಸಂಕಟವು ದೇಶಕ್ಕೆ ನಿಶ್ಚಯವಾಗಿ ಬರುವದೆಂಬ ಅಂಜಿಕೆಯಿಂದ ಎಲ್ಲರ ಮೋರೆಗಳು ಬಾಡಿರುವವು; ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಒಂದು ಬಗೆಯ ಪಿಡುಗೆದ್ದು, ಸಾವಿರಾರು ಜನರನ್ನು ಸ್ವಾಹಾ ಮಾಡಲಾರಂಭಿಸಿರುವದು; ಧರ್ಮಭ್ರಾಂತರಾದ ಜನರಂತು ಪ್ರಳಯ ಕಾಲವೇ ಬಂತೆಂದು ಬಾಹಾರಿರುವರು." ಆಗಿನ ಸ್ಥಿತಿಯ ವಿಷಯವಾಗಿ (Carlyle) ಕಾರ್ಲಾಯಿಲನೆಂಬ ತತ್ವಜ್ಞಾನಿಯು "ನಾವೆಲ್ಲರೂ ದೇವರನ್ನು ಮರೆತು ಬಿಟ್ಟದ್ದೇ ಈ ಅನರ್ಥಗಳಿಗೆ ಕಾರಣವಾಗಿದೆ" ಎಂದು ಬರೆದಿದ್ದಾನೆ.

ರಿಫಾರ್ಮ ಬಿಲ್ಲು ಮಂಜೂರು ಆದದ್ದು.

ಮೇಲೆ ವಿವರಿಸಿದ ಮೇರೆಗೆ ಜನರು ದಿಗಿಲುಗೊಂಡಿರುವದನ್ನು ದೇಶಹಿತೇಚ್ಛುಗಳಾದ ಜನರು ಕಂಡು, ಆ ಬಿಲ್ಲನ್ನು ಮಂಜೂರು ಮಾಡುವದೇ ಸಾವಿರ ಪಾಲಿಗೆ ಲೇಸೆಂದು ಬಹಿರಂಗವಾಗಿ ಸೂಚಿಸತೊಡಗಿದರು. ಅವರ ಈ ಆಗ್ರಹದ ಸೂಚನೆಗಳನ್ನು ಅಲ್ಲಗಳೆಯುವದು ಸರಿಯಲ್ಲೆಂದು ದೊರೆತನದವರು ಎಣಿಸಲಾರಂಭಿಸಿದರು. ಆದರೆ ಹಳೆ ಪಕ್ಷದ ಜನರು ಬಿಲ್ಲಿಗೆ ವಿರೋಧಿಗಳಾಗಿದ್ದುದರಿಂದ, ಲಾರ್ಡರ ಸಭೆಯವರು ಅದನ್ನು ಅಂಗೀಕರಿಸುವಂತಿದ್ದಿಲ್ಲ. ಆದುದರಿಂದ ಆ ಬಿಲ್ಲು ಪ್ರಸಾರವಾಗುವದಿಲ್ಲೆಂದು ಗ್ರಹಿಸಿ, ತಿಳಿಗೇಡಿಗಳು ಭಯಂಕರ ಸ್ವರೂಪವನ್ನು ಧರಿಸಿ, ಎಲ್ಲೆಲ್ಲಿಯೂ ದಂಗೆಗಳನ್ನು ಎಬ್ಬಿಸಿದ್ದರು. ಬೇರೆ ಉಪಾಯಗಳಿಂದ ಅವರು ಹಾದಿ

ಗೆ ಬರುವಂತಿದ್ದಿಲ್ಲ. ಆ ಕಾಲದಲ್ಲಿ ಜಗದ್ವಿಖ್ಯಾತನಾದ ಡ್ಯೂಕ್ ಆಫ್-ವೆಲಿಂಗ್ಟನ್ನನು ಮುಖ್ಯ ಮಂತ್ರಿಯಾಗಿದ್ದನು. ಅವನು 'ವಾಟರ್‌ಲೂ' ಎಂಬ ಇತಿಹಾಸ ಪ್ರಸಿದ್ಧವಾದ ಕಾಳಗದಲ್ಲಿ ದೊಡ್ಡ ಜಯ ಪಡೆದು, ಇಂಗ್ಲಂಡದ ಕೀರ್ತಿಯನ್ನು ಪೃಥ್ವಿಯು ತುಂಬ ಹಬ್ಬಿಸಿ ಬಿಟ್ಟಿದ್ದನು ಸರಿ; ಆದರೆ ಅಂಥ ವೀರಾದಿ ವೀರನೂ ಘನವಂತನೂ ಶ್ರೇಷ್ಠಾಧಿಕಾರಸ್ಥನೂ ಆದ ಆ ಮಹಾ ಪುರುಷನನ್ನು ಲಂಡನ್ ಪಟ್ಟಣದೊಳಗಿನ ಒಬ್ಬ ಸಾಮಾನ್ಯ ಮನುಷ್ಯನು ಕೂಡ ಮನ್ನಿಸಲಿಲ್ಲ! ಅದನ್ನು ಕಂಡು ಆ ದೊಡ್ಡ ಮನುಷ್ಯನು ನಿರುಪಾಯಸ್ಥನಾಗಿ ತನ್ನ ಮುಖ್ಯ ಮಂತ್ರಿಯ ಉದ್ಯೋಗವನ್ನೇ ಬಿಟ್ಟುಕೊಟ್ಟನು. ಅವನ ತರುವಾಯ (Lord Grey) ಲಾರ್ಡ್‌ಗ್ರೇ ದೊರೆಯು ಮುಖ್ಯ-ಮಂತ್ರಿಯಾದನು. ಅವನು ಲಾರ್ಡರು ಆ ಬಿಲ್ಲಿಗೆ ಪ್ರತಿಕೂಲವಾಗಿರುವದನ್ನು ತಿಳಿದುಕೊಂಡು, 'ಹೊಸ ಜನರಿಗೆ ಲಾರ್ಡ ಪದವಿಯನ್ನು ಕೊಟ್ಟು, ಆ ಬಿಲ್ಲಿಗೆ ಲಾರ್ಡರ ಸಭೆಯಲ್ಲಿ ಬಹುಮತವು ದೊರೆಯುವಂತೆ ಮಾಡಬೇಕು' ಎಂದು ಅರಸನಿಗೆ ಸೂಚಿಸಿದನು. ಆದರೆ ಅರಸು ಅದಕ್ಕೆ ಒಪ್ಪಲಿಲ್ಲ. ಕಟ್ಟಕಡೆಗೆ ಅವನು ಹೇಗಾದರೂ ಮಾಡಿ, ಆ ಬಿಲ್ಲನ್ನು ಮಂಜೂರು ಮಾಡಿಸಿದ ಹೊರತು ಗತಿಯೇ ಇಲ್ಲೆಂದೆಣಿಸಿ, ಬಿಲ್ಲಿಗೆ ವಿರೋಧಿಗಳಾದ ಲಾರ್ಡರಲ್ಲಿ ನೂರು ಜನ ಲಾರ್ಡರನ್ನು ಸಭೆಗೆ ಬರದಂತೆ ಮಾಡಿ, ಬಹು ಯುಕ್ತಿಯಿಂದ ಅದನ್ನು ಲಾರ್ಡರ ಸಭೆಯಲ್ಲಿ ಮಂಜೂರು ಮಾಡಿಸಿ, ಕೂಡಲೇ ಅದನ್ನು ಪ್ರಚಾರದಲ್ಲಿ ತಂದನು.

ರಿಫಾರ್ಮ್ ಬಿಲ್ಲಿನಿಂದಾದ ಹೆಚ್ಚು-ಕಡಿಮೆಗಳು.

ಈ ಮೇರೆಗೆ ಭಗೀರಥ ಪ್ರಯತ್ನಗಳಿಂದ ಮಂಜೂರು ಮಾಡಲ್ಪಟ್ಟ ಈ ಕಾಯದೆಯಿಂದ ಪಾರ್ಲಮೆಂಟಿನ ಸಭಾಸದರನ್ನು ಆರಿಸುವ ಪದ್ಧತಿಯಲ್ಲಿ ಉಂಟಾದ ಸುಧಾರಣೆಗಳು ಯಾವವೆಂದರೆ:—(೧) ಸಭಾಸದರನ್ನು ಆರಿಸಿಕೊಳ್ಳುವವರ ಸಂಖ್ಯೆಯು ಕಡಿಮೆಯಾಗಿದ್ದ ಪ್ರಾಂತಕ್ಕಿದ್ದ ಈ ಅಧಿಕಾರವು ತೆಗೆದುಹಾಕಲ್ಪಟ್ಟಿತು. (೨) ಬರ್ಮಿಂಗ್ಹಾಮ್, ಲೀಡ್ಸ್, ಮಾಂಚೆಸ್ಟರ್, ಮುಂತಾದ ಪಟ್ಟಣಗಳ ಮಹತ್ವವೂ ಜನಸಂಖ್ಯೆಯೂ ಹಿಂದಿನ ನೂರು ವರ್ಷಗಳಲ್ಲಿ ಬಹಳವಾಗಿ ಬೆಳೆದಿದ್ದವು. ಈ ಎಲ್ಲ ಪಟ್ಟಣಗಳು ಪ್ರತಿನಿಧಿಗಳನ್ನು ಆರಿಸಿಕೊಂಡು ಅವರನ್ನು ತಮ್ಮ ಪಕ್ಷದಿಂದ ಪಾರ್ಲಮೆಂಟಿಗೆ ಕಳುಹಿಸುವ ಅಧಿಕಾರವನ್ನು ಹೊಸದಾಗಿ ಪಡೆದುಕೊಂಡವು. (೩) ಪ್ರತಿನಿಧಿಗಳನ್ನು ಆರಿಸುವ ಸ್ವಾತಂತ್ರ್ಯವು ಬಹು ಜನರಿಗೆ ದೊರೆಯಿತು. (೪) ದೊಡ್ಡ ದೊಡ್ಡ ಪಟ್ಟಣಗಳಲ್ಲಿ ತಮ್ಮ ಸ್ವಂತ ಮನೆಯಲ್ಲಿರುವವರೂ, ವರ್ಷ ಒಂದಕ್ಕೆ ೧೦ ಪೌಂಡು ಮನೆಯ ಬಾಡಿಗೆಯನ್ನು ಕೊಡುವವರೂ, ಹಳ್ಳಿಪಳ್ಳಿಗಳಲ್ಲಿ ಹತ್ತು ಪೌಂಡು ಬೆಲೆ ಬಾಳುವ ಮನೆಯುಳ್ಳವರೂ ಅಥವಾ ಭೂಮಿಯುಳ್ಳವರೂ ಮತ ಕೊಡುವ ಅಧಿಕಾರವನ್ನು ಪಡೆಕೊಂಡರು. ಇದರಿಂದ ಮೊದಲಿನ ಅವ್ಯವ

ಸ್ಥೆಯು ಕಟ್ಟಾಗಿ, ಕಾಮನ್ಸರ ಸಭೆಯು ಶುದ್ಧಲೋಕನಿಯುಕ್ತಿಕ ಪ್ರತಿನಿಧಿಗಳ ಸಭೆಯಾಯಿತು. ಆ ಮೇಲೆ ರಾಜ್ಯದಾಡಳಿತೆಯ ಕಾರ್ಯಗಳೆಲ್ಲ ಜನರ ಅಭಿಪ್ರಾಯದಂತೆ ನಡೆಯಹತ್ತಿದವು.

ಈ ಸುಧಾರಿಸಿದ ನಿಯಮಗಳಂತೆ ಹೊಸ ಪ್ರತಿನಿಧಿಗಳನ್ನು ಆರಿಸಿಕೊಳ್ಳುವ ಕೆಲಸವು ನಡೆಯಿತು. ಇದೇ ಸಮಯದಲ್ಲಿ ಗ್ಲ್ಯಾಡ್‌ಸ್ಟನ್ನನು ಒಬ್ಬ ಪ್ರತಿನಿಧಿಯಾಗಿ ಆರಿಸಲ್ಪಟ್ಟು, ಪಾರ್ಲಮೆಂಟನ್ನು ಸೇರಿದನು. ಅದರ ವಿವರ ಹೇಗೆಂದರೆ:— (Newark) ನ್ಯೂಆರ್ಕ ಪ್ರಾಂತದಲ್ಲಿ, (Duke of New Castle) ಡ್ಯೂಕ್-ಆಫ್-ನ್ಯೂ-ಕಾಸಲ್ಲನೆಂಬ

ಡ್ಯೂಕ್-ಆಫ್-ನ್ಯೂ-ಕಾಸಲ್ಲನು ಗ್ಲ್ಯಾಡ್‌ಸ್ಟನ್ನನನ್ನು ಇಂಗ್ಲಂಡಕ್ಕೆ ಕರಿಸಿಕೊಂಡದ್ದು.

ಕಾನ್‌ಸರ್ವೇಟೀವ್ ಪಕ್ಷದ ಒಬ್ಬ ದೊಡ್ಡ ಜಮೀನುದಾರನಿದ್ದನು. ಅವನ ವರ್ಚಸ್ಸು ನ್ಯೂಆರ್ಕ ಪ್ರಾಂತದಲ್ಲಿ ಅಧಿಕವಾಗಿದ್ದದರಿಂದ ಅವನು ಬಹು ದಿವಸಗಳಿಂದ ತನ್ನ ಮನಸ್ಸಿಗೆ ಬಂದವರನ್ನು ಪ್ರತಿನಿಧಿಗಳನ್ನಾಗಿ ಆರಿಸಿಕೊಂಡು, ಪಾರ್ಲಮೆಂಟಿಗೆ ಕಳುಹಿಸುತ್ತ ಬಂದಿದ್ದನು. ಇದರಿಂದ ಅವನು ತುಸು ಹೆಮ್ಮೆಗೊಳಗಾಗಿದ್ದನು. ಆದರೆ ಈ ಹೊಸ ನಿಯಮಗಳಂತೆ ಸನ್ ೧೮೩೨ ನೆಯ ವರ್ಷದ ಆಯ್ಕೆಯು ನಡೆಯಲು, ಅದರಲ್ಲಿ ಅವನದೇನೂ ಆಟ ಸಾಗದೆ, ಅವನ ಮನಸ್ಸಿನ ವಿರುದ್ಧವಾಗಿ (Serjeant Wilde) ಸರ್ಜಂಟ್ ವಿಲ್ಡೇ ಮತ್ತು (W. F. Handley) ಡಬ್ಲಿಯು. ಎಫ್. ಹ್ಯಾಂಡ್ಲೇ ಎಂಬ ಇಬ್ಬರು ಲಿಬರಲ್‌ಪಕ್ಷದ ಗೃಹಸ್ಥರು ಉಮೇದವಾರರಾಗಿ ನಿಂತದ್ದಲ್ಲದೆ ಅವರಿಗೆ ಸಾಕಷ್ಟು ಮತಗಳಾದರೂ ಸಿಗುವ ಲಕ್ಷಣವು ಕಂಡುಬಂತು. ಇದನ್ನು ನೋಡಿ ಡ್ಯೂಕ್-ಆಫ್-ನ್ಯೂ-ಕಾಸಲ್ಲನು ಈ ಹೊಸ ಪಾರ್ಲಮೆಂಟಿನಲ್ಲಿ ನ್ಯೂಆರ್ಕದ ಕಡೆಯಿಂದ ಕಾನ್‌ಸರ್ವೇಟೀವ್ ಪಕ್ಷದ ಒಬ್ಬ ಗಟ್ಟಿಗನಾದ ಪ್ರತಿನಿಧಿ ಇರುವದು ಅವಶ್ಯವುಂಟೆಂದೆಣಿಸಿ, ಅಂಥ ಮನುಷ್ಯನನ್ನು ಹುಡುಕಹತ್ತಿದನು. ಈ ಡ್ಯೂಕನ ಮಗನಾದ (Earl of Lincoln) ಅರ್ಲ ಆಫ್ ಲಿಂಕನ್ನನು ಆಕ್ಸಫರ್ಡ ವಿಶ್ವವಿದ್ಯಾಲಯದಲ್ಲಿ ಗ್ಲ್ಯಾಡ್‌ಸ್ಟನ್ನನ ಸಹಾಧ್ಯಾಯಿಯಾಗಿದ್ದನು. ಅವನು ಅಲ್ಲಿಯ ಸಭೆಯಲ್ಲಿ ಗ್ಯಾಡ್‌ಸ್ಟನ್ನನ ವಕ್ತೃತ್ವವನ್ನೂ ಅವನ ವಿಷಯಪ್ರತಿಪಾದನಶಕ್ತಿಯನ್ನೂ ಕೇಳಿ ಮನಗಂಡಿದ್ದನು. ಅವನು ತನ್ನ ತಂದೆಗೆ ಗ್ಲ್ಯಾಡ್‌ಸ್ಟನ್ನನನ್ನು ತಾವು ಕರಿಸಿದರೆ, ತಮ್ಮ ಬಯಕೆಯು ಸಹಜವಾಗಿಯೇ ಈಡೇರುವದೆಂದು ಹೇಳಿದನು. ಮಗನ ಮಾತಿಗೆ ಡ್ಯೂಕನು ಒಡಂಬಟ್ಟು, ಗ್ಲ್ಯಾಡ್‌ಸ್ಟನ್ನನಿಗೆ ಕೂಡಲೇ ಪತ್ರ ಬರೆದು, ಅವನನ್ನು ಇಟಲಿ ದೇಶದಿಂದ ತನ್ನ ಬಳಿಗೆ ಕರಿಸಿಕೊಂಡನು. ಈ ಹೊತ್ತಿಗೆ ಗ್ಲ್ಯಾಡ್‌ಸ್ಟನ್ನನಿಗೆ ಇನ್ನೂ ೨೨ ನೆಯ ವರ್ಷವೆ ತುಂಬಿದ್ದಿಲ್ಲ. ಅವನ ವಕ್ತೃತ್ವಶಕ್ತಿಯು ಅಲ್ಲಿಯ

ಮತಕೊಡುವವರ ಮನಸ್ಸನ್ನು ಒಲಿಸಿಕೊಳ್ಳುವ ಪೂರ್ವದಲ್ಲಿಯೇ, ಅವನ ಗಂಭೀರವಾದ ಮುಖಮುದ್ರೆಯೂ ಅವನ ಕಾಂತಿಯುಳ್ಳ ಕಣ್ಣುಗಳೂ ವಿಶಾಲವಾದ ಹಣೆಯೂ ತಾರುಣ್ಯವೂ ಅವರನ್ನು ಒಲಿಸಿಕೊಂಡು ಬಿಟ್ಟವು. ಅವನು ಅಲ್ಲಿಯ ಮತಕೊಡುವವರ ಸಭೆಯಲ್ಲಿ ಸನ್ ೧೮೩೨ ನೆಯ ಇಸವಿಯ ಅಕ್ಟೋಬರ್ ೯ ನೆಯ ತಾರೀಖಿನ ದಿವಸ ತನ್ನ ಮೊದಲನೆಯ ಭಾಷಣಮಾಡಿದನು. ಅವರು ಅವನಲ್ಲಿದ್ದ ಕುಶಾಗ್ರ ಬುದ್ಧಿಯನ್ನೂ ದೀರ್ಘ ವಿಚಾರಗಳನ್ನೂ ವಾಕ್ಚಾತುರ್ಯವನ್ನೂ ತಮ್ಮ ಪಕ್ಷದವನಾಗಿರುವದನ್ನೂ ನೋಡಿ, ಅವನಿಗೆ ತಮ್ಮ ಮತಕೊಡಲಿಕ್ಕೆ ಒಪ್ಪಿಕೊಂಡರು. ಈ ಸಮಯದಲ್ಲಿ ಅವನು ಮಾಡಿದ ಭಾಷಣವು ಒಂದಿಷ್ಟು ದೊಡ್ಡದಾಗಿದೆ. ಅದು ಕಾರಣ ಆ ಸಮಗ್ರ ಭಾಷಣವನ್ನು ಕೊಡದೆ, ಅದರೊಳಗಿನ ಮಹತ್ವವಾದ ಭಾಗದ ಸಾರಾಂಶತನ್ನಷ್ಟೇ ಇಲ್ಲಿ ಕೊಡುವೆವು. "ಇಂಥ ಮನುಷ್ಯನ ಇಲ್ಲವೆ ಇಂಥ ಪಕ್ಷದ ಅಭಿಮಾನವನ್ನು ವಹಿಸಿ, ನಾನು ಪಾರ್ಲಮೆಂಟಿನಲ್ಲಿ ಅಭಿಪ್ರಾಯ ಕೊಡುವೆನೆಂದು ಹೇಳಿ, ನಿಮ್ಮಲ್ಲಿ ನಂಬಿಗೆಯನ್ನು ಹುಟ್ಟಿಸಿ ನನ್ನನ್ನು ಆರಿಸಿಕೊಳ್ಳಿರೆಂದು ನಾನು ನಿಮ್ಮನ್ನು ಕೇಳಿಕೊಳ್ಳುವದಿಲ್ಲ. ನಾನು ನನ್ನ ಅಭಿಪ್ರಾಯಗಳನ್ನು ಈಗಲೇ ನಿಮಗೆ ಸ್ಪಷ್ಟವಾಗಿ ಹೇಳುತ್ತೇನೆ. ಅವುಗಳನ್ನು ನೀವು ಒಪ್ಪಿಕೊಂಡ ಪಕ್ಷದಲ್ಲಿ, ನನ್ನನ್ನು ನಿಮ್ಮ ಪ್ರತಿನಿಧಿಯಾಗಿ ಆರಿಸಿಕೊಳ್ಳಬೇಕೆಂದು ನಾನು ನಿಮಗೆ ಅರಿಕೆಮಾಡಿಕೊಳ್ಳುತ್ತೇನೆ. ಸೋಸಿ ನೋಡದೆ ರಾಜ್ಯಪದ್ಧತಿಯಲ್ಲಿ ಸುಮ್ಮ ಸುಮ್ಮನೆ ಏನಾದರೊಂದು ಹೆಚ್ಚು ಕಡಿಮೆಮಾಡಲು ಯತ್ನಿಸಿದರೆ, ಅದಕ್ಕೆ ಎಂದೂ ಇಂಬುಗೊಡಬಾರದು. ಒಂದುವೇಳೆ, ಆ ಹೆಚ್ಚುಕಡಿಮೆಯಿಂದ ಅಲ್ಪಸ್ವಲ್ಪ ಹಿತವಾಗುವಂತೆ ತೋರಿದರೂ, ಆ ಹಿತದಲ್ಲಿ ಎಷ್ಟೋ ಅನಹಿತಗಳೂ ಬೆರೆದಿರುವವು. ಆದು ಕಾರಣ ಇಂಥ ಪ್ರಸಂಗಗಳಲ್ಲಿ ಅವುಗಳಿಗೆ ಅಡ್ಡಿಯನ್ನು ತಪ್ಪದೆ ಮಾಡಬೇಕು. ಈ ತರದ ಹೆಚ್ಚು ಕಡಿಮೆಗಳಿಂದ ನಮ್ಮ ಸಮಾಜದೊಳಗಿನ ಕೇಡುಗಳು ಕಡಿಮೆಯಾಗುವ ಬದಲು ಮತ್ತಿಷ್ಟು ಬೆಳೆಯುವವೆಂತಲೂ ದುಡಿದು ಹೊಟ್ಟೆತುಂಬಿಕೊಳ್ಳುವವರ ತಲೆಯಮೇಲಿನ ಕರದ ಭಾರವು ಮತ್ತಿಷ್ಟು ಹೆಚ್ಚುವದೆಂತಲೂ ನಾನು ನಂಬುತ್ತೇನೆ. ಇದಲ್ಲದೆ ಈ ಹೆಚ್ಚು ಕಡಿಮೆಗಳಿಂದ ಸಮಾಜದೊಳಗಿನ ಶಾಂತತೆಯು ನಷ್ಟ ಹೊಂದುವದು; ಜನರೊಳಗಿನ ಪತ್ತುಹಾರಿ ಹೋಗುವದು, ಉತ್ಕರ್ಷವೆಂಬ ವೃಕ್ಷದ ಬೇರುಗಳಿಗೆ ಪೆಟ್ಟು ಹತ್ತುವದು. ಈ ಮಾತಿನ ಅನುಭವವು ಹಿಂದಕ್ಕೆ ನಮಗೆ ಬಂದಿದೆ; ಮುಂದೂ ನಿಶ್ಚಯವಾಗಿ ಬರುವದು. ಬಡವರ ಮೇಲೆ ಯಾವಾಗಲು ಕೃಪಾದೃಷ್ಟಿ ಇರತಕ್ಕದ್ದು. ಅವರ ದುಡಿತಕ್ಕೆ ಸರಿಯಾದ ಕೂಲಿಯು ಅವರ ಕೈಯಲ್ಲಿ ಬೀಳುವಂತೆ ಮಾಡುವದು ಪ್ರತಿಯೊಬ್ಬನ ಕರ್ತವ್ಯವಾಗಿದೆ. ಆದರೆ ಸದ್ಯದ ಸ್ಥಿತಿಯು ಇದಕ್ಕೆ ವಿಪರೀತವಾಗಿರುವದನ್ನು ನೋಡಿ ಖೇದಪಡಬೇಕಾ

ಗಿದೆ. ಈ ಭಾಷಣದಿಂದ ಅವನು ಸಂಪೂರ್ಣವಾಗಿ ಕಾನ್‌ಸರ್ವೇಟೀವ್ ಪಕ್ಷದವನಾಗಿರುವನೆಂದು ವ್ಯಕ್ತವಾಯಿತು.

ಗ್ಲ್ಯಾಡ್‌ಸ್ಟನ್ನನು ನ್ಯೂಅರ್ಕ ಪ್ರಾಂತದ ಪಾರ್ಲಮೆಂಟಿನ ಪ್ರತಿನಿಧಿಯಾಗುವ ಪ್ರಯತ್ನ ನಡಿಸಿದ್ದು.

ಅವನ ಈ ಭಾಷಣವನ್ನು (The Conservative Club) "ದಿ ಕಾನ್‌ಸರ್ವೇಟೀವ್ ಕ್ಲಬ್" ಎಂಬ ಸಂಘದವರು ಕೇಳಿ ಅವನು ತಮ್ಮ ಪಕ್ಷಾಭಿಮಾನಿಯೇ ಆಗಿರುವನೆಂದು ತಿಳಿದುಕೊಂಡು, ತಮ್ಮಲ್ಲಿರುವ ೩೫೦ಕ್ಕಿಂತ ಹೆಚ್ಚು ಮತಗಳನ್ನು ಅವನಿಗೆ ಕೊಡಲು ಮಾತುಕೊಟ್ಟರು. ಇದಲ್ಲದೆ ಸ್ವತಃ ಗ್ಲ್ಯಾಡ್‌ಸ್ಟನ್ನನು ತನ್ನ ಪ್ರಯತ್ನದಿಂದಲೇ ಸುಮಾರು ೨೪೦ ಮತಕೊಡುವ ಜನರನ್ನು ತನ್ನ ಕಡೆಗೆ ಒಲಿಸಿಕೊಂಡನು. ಆಗ ನ್ಯೂಅರ್ಕ ಪ್ರಾಂತದಲ್ಲೆಲ್ಲಾ "ಗ್ಲ್ಯಾಡ್‌ಸ್ಟನ್ನನು ಯಾರು? ಎಲ್ಲಿಯವನು? ಯಾರಮಗನು? ಇವನು ತೀರ ಚಿಕ್ಕವನಾಗಿದ್ದರೂ ಚಾಣಾಕ್ಷನಾಗಿಯೂ ಸಂಪನ್ನನಾಗಿಯೂ ಕಾಣುತ್ತಿರುವನು" ಎಂದು ತಮ್ಮ ತಮ್ಮೊಳಗೆ ಮಾತನಾಡಹತ್ತಿದರು. ವರ್ತಮಾನಪತ್ರಗಳಲ್ಲಿಯೂ ಅವನ ವಿಷಯವಾಗಿ ಚರ್ಚೆಗಳು ನಡೆದವು. (Old England) ಓಲ್ಡ್ ಇಂಗ್ಲಂಡ್ ಎಂಬ ಹೆಸರಿನ ಮಾಸಿಕ ಪುಸ್ತಕವು "ಲಿವರ್‌ಪೂಲ್ ಪಟ್ಟಣದಲ್ಲಿ ಕ್ಯಾನಿಂಗನೆಂಬ ಪ್ರಸಿದ್ಧ ವರ್ತಕನುಂಟಷ್ಟೇ. ಆ ವರ್ತಕನ ಗೆಳೆಯನ ಮಗನೇ ಈ ಗ್ಲ್ಯಾಡ್‌ಸ್ಟನ್ನನು. ಇವನಿಗೆ ೨೩ ವರ್ಷಗಳು ಸಹ ಇನ್ನೂ ತುಂಬಿರುವದಿಲ್ಲ. ಇವನು ಸದ್ಯಕ್ಕೆ ಎಲ್ಲರಿಂದಲೂ ಸದಭಿಪ್ರಾಯಗಳನ್ನು ಪಡೆದಿರುವನು. ಇವನು ಪಾರ್ಲಮೆಂಟಿನ ಸಭಾಸದನಾಗಿ ಆರಿಸಲ್ಪಟ್ಟರೆ ಆ ಸಭೆಗೆ ಇವನು ಒಂದು ನಕ್ಷತ್ರದಂತೆ ಶೋಭಿಸುವನು" ಎಂದು ಪ್ರಕಟಿಸಿ ಎಲ್ಲರ ಸಂಶಯಗಳನ್ನು ಪರಿಹರಿಸಿತು.

ಗ್ಲ್ಯಾಡ್‌ಸ್ಟನ್ನನು ನ್ಯೂಅರ್ಕಪ್ರಾಂತದ ಪ್ರತಿನಿಧಿಯಾಗಿ ಆರಿಸಲ್ಪಟ್ಟದ್ದು.

ಮೊದಲು ನೇಮಕವಾದ ಮೇರೆಗೆ, ಡಿಶಂಬರ ತಿಂಗಳಿನ ೧೧|೧೨|೧೩ ನೇ ತಾರೀಖಿನ ದಿವಸಗಳಲ್ಲಿ ಉಮೇದವಾರರ ಬಗ್ಗೆ ಮತಗಳನ್ನು ತೆಗೆದುಕೊಳ್ಳುವ ಕೆಲಸವು ನಡೆಯಿತು. ಉಳಿದ ಇಬ್ಬರು ಉಮೇದವಾರರು, ತಾವು ಹೆಚ್ಚು ಮತಗಳನ್ನು ಪಡೆಯಬೇಕೆಂಬ ಲವಲವಿಕೆಯಿಂದ ಅಹೋರಾತ್ರಿ ಶ್ರಮಪಟ್ಟು ಇಷ್ಟರಲ್ಲಿಯೇ ಬಹು ಜನರನ್ನು ತಮ್ಮ ಕಡೆಗೆ ತಿರುಗಿಸಿಕೊಂಡಿದ್ದರು. ಇವರಲ್ಲಿ ಸರ್ಜಂಟ್ ವಿಲ್ಡೇ ಎಂಬ ಗೃಹಸ್ಥನು ಬಲ್ಲಿದನೂ ಮೇಲಾದ ವಾಗ್ಮಿಯೂ ಆಗಿದ್ದನು. ಈ ಆಯುವಿಕೆಯಲ್ಲಿ ಗ್ಲ್ಯಾಡ್‌ಸ್ಟನ್ನನಿಗೆ ೮೮೭ ಹ್ಯಾಂಡ್ಲೇನಿಗೆ ೭೯೩ ಮತ್ತು ವಿಲ್ಡೇನಿಗೆ ೭೨೬ ಮತಗಳು ದೊರೆಯಲು, ಗ್ಲ್ಯಾಡ್‌ಸ್ಟನ್ನನೇ ನ್ಯೂಅರ್ಕ ಪ್ರಾಂತದ ಪ್ರತಿನಿಧಿಯಾಗಿ ಆರಿಸಲ್ಪಟ್ಟನು. ಮುಂದೆ ಕೆಲವು

ದಿವಸಗಳಲ್ಲಿಯೇ (Nottingham) ನಾಟಿಂಗ್ಹ್ಯಾಮ್ ಎಂಬ ಪಟ್ಟಣದಲ್ಲಿ ನೆರೆದ ಒಂದು ಸಭೆಯಲ್ಲಿ ಗ್ಲ್ಯಾಡ್‌ಸ್ಟನ್ನನು ಭಾಷಣ ಮಾಡಿದನು. ಆ ಭಾಷಣವನ್ನು ಉದ್ದೇಶಿಸಿ, ವರ್ತಮಾನಪತ್ರದಲ್ಲಿ ಒಂದು ಲೇಖವು ಕೂಡಲೇ ಪ್ರಸಿದ್ಧಿಸಲ್ಪಟ್ಟಿತು. ಅದರ ತಾತ್ಪರ್ಯವೇನೆಂದರೆ:—ಗ್ಲ್ಯಾಡಸ್ಟನ್ನನು ಸುಶೀಲಸ್ವಭಾವದವನೂ ಅಪಾರ ಬುದ್ಧಿಯುಳ್ಳವನೂ ಕುಲೀನನೂ ಆಗಿರುವನು. ಇವನು ಒಂದಿಲ್ಲೊಂದು ದಿನ ಬ್ರಿಟಿಷ್‌ರಾಜ ಸಭೆಯಲ್ಲಿ ಅತ್ಯುತ್ತಮರಾದ ಮಂತ್ರಿಗಳಲ್ಲಿ ಒಬ್ಬನಾಗುವನೆಂದು ಭವಿಷ್ಯ ಹೇಳಲು ನಾವು ತುಸುವಾದರೂ ಹೆದರುವದಿಲ್ಲ. ಇದರಿಂದ ನಾವು ಅತಿಶಯೋಕ್ತಿಯ ದೋಷಕ್ಕೆ ಎಲ್ಲಿ ಪಾತ್ರರಾಗುವೆವೋ ಎಂಬ ಭೀತಿಯು ನಮಗಿಲ್ಲ" ಈ ಭವಿಷ್ಯವು ಮುಂದೆ ಅಕ್ಷರಶಃ ದಿಟವಾಯಿತು. ಗ್ಲ್ಯಾಡಸ್ಟನ್ನನು ನ್ಯೂಆರ್ಕದಲ್ಲಿಯೂ ಒಂದು ಉಪನ್ಯಾಸಮಾಡಿದನು. ಅದರಲ್ಲಿ ಅವನು, ಕುಂದಿಲ್ಲದ ರಾಜ್ಯಪರಿಪಾಲನಾ ಪದ್ಧತಿಯನ್ನೂ, ಶುದ್ಧ ನೀತಿಶಾಸ್ತ್ರದ ತತ್ವಗಳನ್ನೂ, ತನ್ನ ರಸಾಲವಾದ ವಾಣಿಯಿಂದ ವಿವರಿಸಿ, ತನ್ನ ನಿರ್ಮಲವಾದ ಮನೋವೃತ್ತಿಗಳನ್ನೂ ಶೀಲಸ್ವಭಾವವನ್ನೂ ಬುದ್ಧಿ ಸಾಮರ್ಥ್ಯವನ್ನೂ ವ್ಯಕ್ತಪಡಿಸಿ, ಸಭೀಕರನ್ನು ತಲೆದೂಗಿಸಿದನು. ಈ ಮೇರೆಗೆ ಗ್ಲ್ಯಾಡ್‌ಸ್ಟನ್ನನು ಸನ್ ೧೮೩೨ನೆಯ ಇಸವಿಯ ಆಯ್ಕೆಯಲ್ಲಿ ಜಯಪಡೆದು, ಬಹು ದಿವಸಗಳಿಂದ ಕಣ್ಣಿಟ್ಟಿದ್ದ ಬ್ರಿಟಿಷ್ ಪಾರ್ಲಮೆಂಟಿನ ಭವ್ಯವಾದ ಮಹಾದ್ವಾರಕ್ಕಿರುವ ಗಂಭೀರವಾದ ಹೊಸ್ತಿಲವನ್ನು ದಾಟಿ, ಆ ಸಭಾ-ಮಂದಿರವನ್ನು ಪ್ರವೇಶಿಸಿದನು. ಈ ಪ್ರವೇಶಕ್ಕೆ ಅವನು ವಿಶ್ವವಿದ್ಯಾಲಯದಲ್ಲಿ ಪ್ರಕಟಿಸಿದ ವಕ್ತೃತ್ವ ಶಕ್ತಿಯೂ ಅವನ ಬುದ್ಧಿ ವೈಭವಗಳೂ ವಿಶೇಷ ಕಾರಣವಾದವೆಂಬ ಸಂಗತಿಯು ಲಕ್ಷ್ಯದಲ್ಲಿಡಲು ತಕ್ಕದ್ದಾಗಿದೆ. ಮಗನ ಈ ಹೆಚ್ಚಳವನ್ನು ನೋಡಿ ಅವನ ತಾಯಿ-ತಂದೆಗಳಿಗೆ ಎಷ್ಟು ಸಂತೋಷವಾಗಿರಬಹುದೆಂಬದನ್ನು ವಾಚಕರೇ ಊಹಿಸತಕ್ಕದ್ದು. ಅವನು ಪಾರ್ಲಮೆಂಟನ್ನು ಸೇರಿದಾಗ ಅವನ ಮತಗಳು ಹೇಗಿದ್ದವೆಂಬದನ್ನು ಒಬ್ಬ ಗ್ರಂಥಕಾರನು ಸಾಧಾರಣವಾಗಿ ವರ್ಣಿಸಿರುವದು ಹೇಗೆಂದರೆ:—"ಅವನು ಒಬ್ಬರ ಮಾತನ್ನು ನಂಬಿ ನಡೆಯುವವನಾಗಲಿ, ಒಬ್ಬರನ್ನು ಹಿಂಬಾಲಿಸುವವನಾಗಲಿ ಇದ್ದಿಲ್ಲ; ಆದರೆ ಸ್ವಮತಾನುಸಾರವಾಗಿ ನಡೆಯುವವನಾಗಿದ್ದನು. ರಾಜ್ಯಕಾರಭಾರದಲ್ಲಿ ಮೇಲಿಂದಮೇಲೆ ಹೆಚ್ಚು ಕಡಿಮೆಗಳನ್ನು ಮಾಡುವ ಉತ್ಕಟೇಚ್ಛೆಯು ಪ್ರಜೆಗಳಲ್ಲಿ ಹೆಚ್ಚುತ್ತಿರುವದನ್ನು ಪ್ರತಿಬಂಧಿಸುವದು ತನ್ನ ಕರ್ತವ್ಯವಾಗಿದೆಂದು ಅವನು ಅರಿತುಕೊಂಡಿದ್ದನು. ಈ ಹೆಚ್ಚು ಕಡಿಮೆಗಳಿಂದ ಲಾಭಕ್ಕಿಂತ ಹಾನಿಯೇ ಹೆಚ್ಚಾಗುವದೆಂತಲೂ, ರಾಜ್ಯಪರಿಪಾಲಕರು ಧರ್ಮನೀತಿಗಳನ್ನನುಸರಿಸಿ, ತಮ್ಮ ಕರ್ತವ್ಯಗಳನ್ನು ಮಾಡುವದೂ, ಕಾಯದೆ ಕಟ್ಟಳೆಗಳಲ್ಲಿ ಧರ್ಮಬಂಧನಗಳನ್ನು ಚೆನ್ನಾಗಿ ಕಾದಿಡುವದೂ, ಬಡಬಗ್ಗರ ಸ್ಥಿತಿಯನ್ನು ಸುಧಾರಿಸಲು ಸಂಪೂರ್ಣವಾಗಿ ಲಕ್ಷ್ಯಗೊಡುವದೂ ಕೂಲಿಕುಂಬಳಿ ಮಾಡುವವರಿಗೆ ಯೋಗ್ಯಕೂ

ಲಿಯು ತಪ್ಪದೆ ಸಿಗುವಂತೆ ಮಾಡುವದೂ, ಗುಲಾಮತನವು ಧರ್ಮಶಾಸ್ತ್ರ ಸಮ್ಮತವಾಗಿದ್ದರೂ ಗುಲಾಮರನ್ನು ಕೈಲಾದಮಟ್ಟಿಗೆ ಬಂಧಮುಕ್ತರನ್ನಾಗಿ ಮಾಡುವದೂ, ಅವರ ಮಕ್ಕಳಿಗೆ ವಿದ್ಯಾಬುದ್ಧಿಗಳನ್ನು ಕಲಿಸಿ, ಅವರ ಸ್ಥಿತಿಯನ್ನು ಸುಧಾರಿಸುವದೂ, ರಾಷ್ಟ್ರೋನ್ನತಿಗೆ ಕಾರಣವಾಗಿವೆ."

ಗ್ಲ್ಯಾಡ್‌ಸ್ಟನ್ನನು ಪಾರ್ಲಮೆಂಟ ಸಭೆಯನ್ನು ಪ್ರವೇಶಿಸಿದ್ದು, ೧೮೩೩, ಜಾನೇವಾರಿ ೨೯. ಆ ಮೇಲೆ ಅವನಿಗುಂಟಾದ ಮೇಲುಗಳು.

ಪಾರ್ಲಮೆಂಟಿನ ಸಭಾಸದರನ್ನು ಆರಿಸುವ ಹೊಸ ಕಾಯದೆಯಂತೆ ನಿಯಮಿಸಲ್ಪಟ್ಟ ಪ್ರತಿನಿಧಿಗಳ ಮೊದಲನೆಯ ಸಭೆಯು ಸನ್ ೧೮೩೩ನೇ ಇಸವಿಯ ಜಾನೇವಾರಿ ತಿಂಗಳಿನ ೨೯ನೆಯ ತಾರೀಖಿನ ದಿವಸ ನೆರೆಯಿತು. ಅದೇ ದಿವಸ ಗ್ಲ್ಯಾಡ್‌ಸ್ಟನ್ನನು ಪಾರ್ಲಮೆಂಟಿನ ಸಭಾಮಂದಿರವನ್ನು ಪ್ರವೇಶಿಸಿದನು. ಆ ದಿನವು ಅವನಿಗೆ ಎಲ್ಲ ಬಗೆಗಳಿಂದಲೂ ಸುದಿನವಾಗಿತ್ತೆಂದು ಹೇಳಲು ಏನೂ ಸಂದೇಹವಿಲ್ಲ. ಯಾಕೆಂದರೆ ಅವನು ಆ ದಿವಸದ ಮೊದಲೆಗೊಂಡು ಎಡೆಬಿಡದೆ ಅರುವತ್ತೊಂದು ವರ್ಷಗಳ ವರೆಗೆ ಅಂದರೆ ಸನ್ ೧೮೯೪ನೇ ಇಸವಿಯ ತನಕ, ಆ ಸಭೆಯ ಸಭಾಸದನಾಗಿದ್ದನು. ಅವನನ್ನು ಯಾವಾಗಲೂ ಒಂದೇ ಪ್ರಾಂತದವರು ತಮ್ಮ ಪ್ರತಿನಿಧಿಯಾಗಿ ಆರಿಸಿಕೊಳ್ಳಲಿಲ್ಲ; ಆದರೆ ಅವನನ್ನು ಬೇರೆ ಬೇರೆ ಪ್ರಾಂತದವರೂ ಬೇರೆ ಬೇರೆ ಸಂಸ್ಥೆಯವರೂ ಬೇರೆ ಬೇರೆ ವರ್ಷಗಳಲ್ಲಿ ತಮ್ಮ ತಮ್ಮ ಪಕ್ಷದಿಂದ ಆರಿಸಿಕೊಂಡರು. ಒಂದು ಸಾರೆ ಅವನು ತನಗೆ ವಿದ್ಯವನಿತ್ತ ಆಕ್ಸಫರ್ಡ ವಿಶ್ವವಿದ್ಯಾಲಯದ ಪಕ್ಷದಿಂದ ಸಭಾಸದನಾಗಿದ್ದನು. ಇದು ಅವನಿಗೆ ವಿಶೇಷ ಭೂಷಣವಾದದ್ದೆಂಬಲ್ಲಿ ಸಂದೇಹವಿಲ್ಲ. ಈ ಅವಧಿಯಲ್ಲಿ ಅವನು ಉಚ್ಚ ಪ್ರತಿಯ ದೊಡ್ಡ ದೊಡ್ಡ ಉದ್ಯೋಗಗಳನ್ನು ಸ್ವೀಕರಿಸಿ, ಅವುಗಳನ್ನು ಸಮರ್ಪಕ ರೀತಿಯಿಂದ ಜರಗಿಸಿದನು. ಅವನು (Chancellor of the Exchequer) ಜಮಾಬಂದಿಯ ಖಾತೆಯ ಮಂತ್ರಿಯಾಗಿದ್ದಾಗ್ಗೆ, ಆಯವ್ಯಯದ ಕೆಲಸವನ್ನು ಅತಿ ಉತ್ತಮ ರೀತಿಯಿಂದ ಮಾಡಿ, ದೇಶದ ಆದಾಯವನ್ನು ಹೆಚ್ಚಿಸಿದನು. ಪ್ರಜೆಗಳ ಮೇಲಿನ ಕರದ ಭಾರವನ್ನು ಕಡಿಮೆ ಮಾಡಿದನು. ದೊರೆತನದೊಳಗಿನ ಎರಡು ಬಲಾಢ್ಯ ಪಕ್ಷಗಳ ಗುದುಮುರಿಗೆಯಲ್ಲಿಯೇ ಮೊದಲನೆಯ ಸಾರೆ ಸನ್ ೧೮೬೮ ರಿಂದ ೧೮೭೪ ರವರೆಗೆ, ಎರಡನೆಯ ಸಾರೆ ೧೮೮೦ ರಿಂದ ೧೮೮೫ ರವರೆಗೆ, ಮೂರನೆಯ ಸಾರೆ ೧೮೮೬ ರಲ್ಲಿ ಕೆಲವು ತಿಂಗಳುಗಳ ವರೆಗೆ ಮತ್ತು ನಾಲ್ಕನೆಯ ಸಾರೆ ೧೮೯೨ ರಿಂದ ೧೮೯೪ ರವರೆಗೆ ವಿಕ್ಟೋರಿಯಾ ಮಹಾರಾಣೀ ಸಾಹೇಬರ ದರಬಾರಿನಲ್ಲಿ ಮುಖ್ಯ ಮಂತ್ರಿಯಾಗಿದ್ದನು.

ಅವನು ಈ ಅರುವತ್ತೊಂದು ವರ್ಷಗಳಲ್ಲಿ, ತನ್ನ ಬುದ್ಧಿ ಸಾಮರ್ಥ್ಯದಿಂದ ಬಹುಕಾಲದವರೆಗೆ ಕಾಮನ್ಸರ ಸಭೆಯ ಸೂತ್ರಗಳನ್ನೆಲ್ಲಾ ತನ್ನ ಕೈಯಲ್ಲಿಯೇ

ಇಟ್ಟುಕೊಂಡಿದ್ದನು. ಅವನು ತನ್ನ ಬುದ್ಧಿಸಾಮರ್ಥ್ಯದಿಂದ ಸ್ವದೇಶದ ಹಿತವನ್ನೆಸಗಿಡನು ಮಾತ್ರವಲ್ಲ; ಆದರೆ ಪರದೇಶಗಳ ಮಹತ್ಕೃತ್ಯಗಳನ್ನೆಷ್ಟೋ ಮಾಡಿದನು. ಈ ಸಭೆಯನ್ನು ಪ್ರವೇಶಿಸುವ ಮೊದಲು, ಪ್ರತಿ ಒಬ್ಬ ಪ್ರತಿನಿಧಿಯು "ನಾನು ಎಲ್ಲ ಕಾರ್ಯಗಳನ್ನು ಪ್ರಾಮಾಣಿಕತನದಿಂದ ಮಾಡುವೆನು, ಸಿಂಹಾಸನಾರೂಢನಿಗೂ, ಅವನ ವಂಶಸ್ಥರಿಗೂ, ಅವನ ಪಶ್ಚಾತ್ ಸಿಂಹಾಸನವನ್ನೇರುವವನಿಗೂ ಪ್ರಜಾಧರ್ಮದಿಂದ ನಡೆದುಕೊಳ್ಳುವೆನು ಎಂದು ಪರಮೇಶ್ವರನನ್ನು ಸ್ಮರಿಸಿ ಹೇಳುತ್ತೇನೆ; ಈ ಕೆಲಸದಲ್ಲಿ ಅವನು ನನಗೆ ಸಹಾಯ ಮಾಡಲಿ" ಎಂದು ಪ್ರಮಾಣ ಮಾಡುವ ಪದ್ಧತಿಯುಂಟು. ಇದಕ್ಕೆ ಸರಿಯಾಗಿ ಗ್ಲ್ಯಾಡ್‌ಸ್ಟನ್ನನು ಅನ್ಯರೊಂದಿಗೆ ಪ್ರಮಾಣಮಾಡಿ, ಇದರಂತೆಯೇ ಕಡೆಯತನಕ ವರ್ತಿಸಿದನು ಮಾತ್ರವಲ್ಲ, ಆದರೆ ಇದಕ್ಕಿಂತಲೂ ಹೆಚ್ಚು ಒಳ್ಳೆ ರೀತಿಯಿಂದ ವರ್ತಿಸಿದನೆಂದು ಜನರಿಂದ ಹೊಗಳಿಸಿಕೊಂಡನು. ಪ್ರಮಾಣದ ನಿಜವಾದ ಸಾಫಲ್ಯವು ಇದೇ ಸರಿ.

ಈ ಸಭೆಯು ಒಮ್ಮೆ ನೆರೆಯಲಿಕ್ಕೆ ಹತ್ತಿದರಾಯಿತು, ಇದು ಎಷ್ಟೋ ದಿವಸಗಳವರೆಗೆ ದಿನಂಪ್ರತಿ ನೆರೆಯುವದು. ಸಭೆಯ ಮುಂದಿರುವ ಕೆಲಸಗಳೆಲ್ಲ ಮುಗಿದ ಮೇಲೆ ಅದು ನಿಂತುಬಿಡುವದು. ಹೊಸ ಕಾಯದೆ-ಕಟ್ಟಳೆಗಳನ್ನು ರಚಿಸುವದೂ ದೇಶದೊಳಗಿನ ವ್ಯವಹಾರಗಳಲ್ಲಿ ಯೋಗ್ಯವೆಂದು ತೋರಿದ ಹೆಚ್ಚುಕಡಿಮೆಗಳನ್ನು ಮಾಡುವದೂ ಪ್ರತ್ಯಕ್ಷವಾಗಿ ಅಥವಾ ಪರಂಪರೆಯಾಗಿ ಜನರ ಹಿತಗಳಿಗೆ ಸಂಬಂಧಪಟ್ಟ ಹೊಸ ನಿಯಮಗಳನ್ನು ಹುಟ್ಟಿಸುವದೂ ನ್ಯಾಯಾನ್ಯಾಯದ ಸಂಗತಿಗಳನ್ನು ವಿಚಾರಿಸುವದೂ ಇವೇ ಮುಂತಾದ ಮಹತ್ವದ ಸಂಗತಿಗಳು ಸಭೆಯಲ್ಲಿ ವರ್ತಿಸುವವು. ಈ ಸಮಯಗಳಲ್ಲಿ ಬಹು ಜನರು ತಮ್ಮ ತಮ್ಮ ಪಕ್ಷದಿಂದ ಅವುಗಳ ಮೇಲೆ ಅನುಕೂಲ ಅಥವಾ ಪ್ರತಿಕೂಲ ಭಾಷಣಗಳನ್ನು ಮಾಡಿ, ತಮ್ಮ ಪಕ್ಷವನ್ನು ಗೆಲಿಸುವದಕ್ಕಾಗಿ ಬಹು ಮತಗಳನ್ನು ಪಡೆಯಲು ಯತ್ನಿಸುವರು. ಈ ವಾಗ್ಯುದ್ಧವು ಕೇಳಲಿಕ್ಕೂ ನೋಡಲಿಕ್ಕೂ ತಕ್ಕದ್ದಾಗಿರುವದು. ಇದರಲ್ಲಿ ಜಯ ಪಡೆದವರು ಮಹತ್ಕೀರ್ತಿಯನ್ನು ಹೊಂದುವರು. ಅದುಕಾರಣ ದೊಡ್ಡ ದೊಡ್ಡ ವಾಗ್ಮಿಗಳು ತಮ್ಮಿಂದಾದಷ್ಟು ಉತ್ಕೃಷ್ಟವಾದ ಭಾಷಣ ಮಾಡಲು ಹವಣಿಸುವರು. ಈವೊತ್ತಿನ ವರೆಗೆ ಇಂಗ್ಲಂಡದ ರಾಜ್ಯಕಾರಭಾರದಲ್ಲಿ ಅಗ್ರೇಸರರೆಂಬ ಕೀರ್ತಿಯನ್ನು ಪಡೆದವರೆಲ್ಲರೂ ಮೊದಲು ಪಾರ್ಲಮೆಂಟಿನಲ್ಲಿ ತಮ್ಮ ಕುಶಾಗ್ರಬುದ್ಧಿಯ ಬೆಳಕನ್ನು ಕೆಡವಿ, ಮುಂದೆ ಕ್ರಮೇಣ ಉಚ್ಚಪದವಿಗಳಿಗೆ ಏರುವರು. ಗ್ಲ್ಯಾಡ್‌ಸ್ಟನ್ನನು ಸಹ ಇವರೊಳಗಿನವನೊಬ್ಬನಾಗಿರುವನು. ಅವನು ಪಾರ್ಲ

ಮೆಂಟಿನ ಸಭೆಯನ್ನು ಪ್ರವೇಶಿಸಿದಾಗ, (Sir Robert Peel) ಸರ್ ರಾಬರ್ಟ ಪೀಲನೂ ಐರ್ಲಂಡದ ಪೂರ್ಣಾಭಿಮಾನಿಯಾದ (Oconale) ಓಕೋನೇಲನೂ ಈ ಸಭೆಯಲ್ಲಿ ಅತಿ ಪ್ರಬಲರಾಗಿದ್ದರು. ಗ್ಲ್ಯಾಡ್‌ಸ್ಟನ್ನನು ಸರ್ ರಾಬರ್ಟ ಪೀಲನ ಬಲವಿನಂತೆ ನಡೆಯುತ್ತ ನಡೆಯುತ್ತ ಹೋಗಿ ಕೆಲವು ದಿವಸಗಳಲ್ಲಿಯೇ ಅವನ ಪರಮ ಶಿಷ್ಯನಾದನು. ಈ ಕಾಲದಲ್ಲಿ ಪಾರ್ಲಮೆಂಟಿನ ಸಭೆಯವರು ವಿಚಾರ ಮಾಡತಕ್ಕ ಎಷ್ಟೋ ಮಹತ್ವದ ವಿಷಯಗಳಿದ್ದವು. ಅವುಗಳಲ್ಲಿ "ಐರ್ಲಂಡದ ಸಾಮಾಜಿಕ ಸ್ಥಿತಿಯು" "ಐರ್ಲಂಡದ ಧರ್ಮಶಾಲೆಯು," "ಇಂಗ್ಲಂಡದೊಳಗಿನ ಬಡ ಜನರ ಗುಸುಮುಸಿಯು," ಬ್ರಿಟಿಷ್ ವಸಾಹತುಗಳಲ್ಲಿರುವ ಗುಲಾತುರ ಸ್ಥಿತಿಯು" ಈ ನಾಲ್ಕು ವಿಷಯಗಳು ಮುಖ್ಯವಾದವುಗಳು. ಇವುಗಳ ಮೇಲೆ ದೊಡ್ಡ ದೊಡ್ಡ ವಾಗೀಶರ ಭಾಷಣಗಳೂ ನೀರಸ ವಾಗ್ವಾದಗಳೂ ಆದವು. ಈ ಎಲ್ಲ ವಿಷಯಗಳ ಮೇಲೆಯೂ ಬೇರೆ ಎಷ್ಟೋ ವಿಷಯಗಳ ಮೇಲೆಯೂ ಗ್ಲ್ಯಾಡ್‌ಸ್ಟನ್ನನು ಭಾಷಣಮಾಡಿದನು. ಈ ಭಾಷಣಗಳನ್ನು ಕೇಳಿ ಪ್ರಸಿದ್ಧ ಮುತ್ಸದ್ದಿಗಳು ಸಹ ತಲೆದೂಗಿದರು. ಅವನು ಸುಮ್ಮಸುಮ್ಮನೆ ತನ್ನ ವಾಕ್ಪಾಂಡಿತ್ಯವನ್ನು ತೋರಿಸುವ ಭರಕ್ಕೆ ಬೀಳುವದಿಲ್ಲೆಂತಲೂ ಅನ್ಯರ ಭಾಷಣಗಳಲ್ಲಿ ಬಾರದಿರುವ ಮತ್ತು ಸಭಾಸದರು ಕೇಳಲು ತಕ್ಕವುಗಳಾಗಿರುವ ಸಂಗತಿಗಳನ್ನಷ್ಟೇ ಮಾತನಾಡುವನೆಂತಲೂ ಸಭಿಕರೆಲ್ಲರ ಲಕ್ಷ್ಯದಲ್ಲಿ ಬಂತು. ಇದರಿಂದ ಅವನು ಮಾತನಾಡುವದಕ್ಕೆ ಸಭೆಯಲ್ಲಿ ನಿಂತಕೂಡಲೇ ಎಲ್ಲರೂ ಅವನ ಮಾತುಗಳನ್ನು ಲಕ್ಷ್ಯಗೊಟ್ಟು ಆಲಿಸಲಾರಂಭಿಸಿದರು. ಅವನ ಚಿತ್ತವೇಧಕ ಭಾಷಣಗಳನ್ನು ಕೇಳಿ, ಬಹು ಜನರು 'ಇವನು ಸಾಮಾನ್ಯನಾಗಿ ಕಾಣುವದಿಲ್ಲ. ಒಂದಿಲ್ಲೊಂದು ದಿನ ಪಾರ್ಲಮೆಂಟಿನ ಸಭಾಸದರನ್ನೆಲ್ಲಾ ಗೆದ್ದು, ಮುಖ್ಯ ಮಂತ್ರಿಯಾಗುವದೇ ನಿಶ್ಚಯವು' ಎಂಬ ಉದ್ಗಾರಗಳನ್ನು ಹೊರಗೆಡವಿದರು. ಈ ಉದ್ಗಾರಗಳು ಸಟಿಯಾಗಲಿಲ್ಲ. ಅವನು ಒಂದುಸಾರೆ ಅಲ್ಲ, ಎರಡುಸಾರೆ ಅಲ್ಲ, ಮೂರುಸಾರೆ ಅಲ್ಲ ಆದರೆ ನಾಲ್ಕುಸಾರೆ ಇಂಗ್ಲಂಡದ ಮುಖ್ಯ ಮಂತ್ರಿಯಾದನು. ಅವನು ಯಾವ ಯಾವ ವರ್ಷಗಳಲ್ಲಿ ಮುಖ್ಯ ಮಂತ್ರಿಯಾದನು ಮತ್ತು ಸನ್ ೧೮೬೮ನೆಯ ಇಸವಿಯಿಂದ ಸನ್ ೧೮೯೪ನೆಯ ಇಸವಿಯ ವರೆಗೆ ಮತ್ತ್ಯಾರಾರು ಯಾರು ಮುಖ್ಯಮಂತ್ರಿಗಳಾದರು ಎಂಬ ವಿವರವು ಕೆಳಗೆ ಕೊಡಲ್ಪಟ್ಟಿದೆ:—

| | | | | |
|---|---|---|---|---|
| ೧೮೩೫ ರಿಂದ | ... | ೧೮೪೧ ರ ವರೆಗೆ | ... | ಲಾರ್ಡ್ ಮೆಲ್‌ಬೋರ್ನ್. |
| ೧೮೪೧ ರಿಂದ | ... | ೧೮೪೬ ರ ವರೆಗೆ | ... | ಸರ್ ರಾಬರ್ಟ ಪೀಲ್. |
| ೧೮೪೬ ರಿಂದ | ... | ೧೮೫೨ ರ ವರೆಗೆ | ... | ಲಾರ್ಡ್ ರಸೆಲ್. |
| ೧೮೫೨ ರಿಂದ | ... | ೧೮೫೫ ರ ವರೆಗೆ | ... | ಲಾರ್ಡ್ ಅಬರ್ಡೀನ್. |
| ೧೮೫೫ ರಿಂದ | ... | ೧೮೫೮ ರ ವರೆಗೆ | ... | ಲಾರ್ಡ್ ಪಾಮರಸ್ಟನ್. |
| ೧೮೫೮ ರಿಂದ | ... | ೧೮೫೯ ರ ವರೆಗೆ | ... | ಲಾರ್ಡ್ ಡರ್ಬೀ. |
| ೧೮೫೯ ರಿಂದ | ... | ೧೮೬೫ ರ ವರೆಗೆ | ... | ಲಾರ್ಡ್ ಪಾಮರಸ್ಟನ್. |
| ೧೮೬೫ ರಿಂದ | ... | ೧೮೬೬ ರ ವರೆಗೆ | ... | ಲಾರ್ಡ್ ರಸೆಲ್. |
| ೧೮೬೬ ರಿಂದ | ... | ೧೮೬೮ ರ ವರೆಗೆ | ... | ಲಾರ್ಡ್ ಡರ್ಬೀ. |
| ೧೮೬೮ ರಲ್ಲಿ | ಕೆಲವು ದಿವಸಗಳ ವರೆಗೆ | | ... | ಲಾರ್ಡ್-ಬೀಕನ್ಸಫೀಲ್ಡ. |
| ೧೮೬೮ ರಿಂದ | ... | ೧೮೭೪ ರ ವರೆಗೆ | ... | ಮಿಸ್ಟರ್ ಗ್ಲ್ಯಾಡ್‌ಸ್ಟನ್. |
| ೧೮೭೪ ರಿಂದ | ... | ೧೮೮೦ ರ ವರೆಗೆ | ... | ಲಾರ್ಡ್ ಬೀಕನ್ಸ ಫೀಲ್ಡ. |
| ೧೮೮೦ ರಿಂದ | ... | ೧೮೮೫ ರ ವರೆಗೆ | ... | ಮಿಸ್ಟರ್ ಗ್ಲ್ಯಾಡ್‌ಸ್ಟನ್. |
| ೧೮೮೫ ರಿಂದ | ... | ೧೮೮೬ ರ ವರೆಗೆ | ... | ಲಾರ್ಡ್ ಸಾಲಿಸ್‌ಬರಿ. |
| ೧೮೮೬ ರಲ್ಲಿ | ಕೆಲವು ತಿಂಗಳುಗಳ ವರೆಗೆ | | ... | ಮಿಸ್ಟರ್ ಗ್ಲ್ಯಾಡ್‌ಸ್ಟನ್. |
| ೧೮೮೬ ರಿಂದ | ... | ೧೮೯೨ ರ ವರೆಗೆ | ... | ಲಾರ್ಡ್ ಸಾಲಿಸ್‌ಬರಿ. |
| ೧೮೯೨ ರಿಂದ | ... | ೧೮೯೪ ರ ವರೆಗೆ | ... | ಮಿಸ್ಟರ ಗ್ಲ್ಯಾಡ್‌ಸ್ಟನ್. |

ಮೇಲಿನ ಪಟ್ಟಿಯಿಂದ ಗ್ಲ್ಯಾಡ್‌ಸ್ಟನ್ನನು ಇಪ್ಪತ್ತಾರು ವರ್ಷಗಳಲ್ಲಿ ನಾಲ್ಕು ಸಾರೆ ವಿಕ್ಟೋರಿಯ ಮಹಾರಾಣೀ ಸಾಹೇಬರ ಮುಖ್ಯ ಮಂತ್ರಿಯಾಗಿ, ಒಟ್ಟು ಹದಿನಾಲ್ಕು ವರ್ಷಗಳವರೆಗೆ ಬ್ರಿಟಿಷ್ ರಾಜ್ಯದಾಡಳಿತವನ್ನು ಸಾಗಿಸಿದನೆಂದು ತಿಳಿಯುವದು. ಇಲ್ಲಿ ಹೇಳತಕ್ಕ ಒಂದು ವಿಶೇಷ ಸಂಗತಿ ಏನೆಂದರೆ:—ಇಂಗ್ಲಂಡದ ಮುಖ್ಯ ಮಂತ್ರಿಯ ಉದ್ಯೋಗವು ಬಯಸಿದರೆ ಬರತಕ್ಕದ್ದಲ್ಲ; ಅನ್ಯರ ಸಹಾಯದಿಂದ ದೊರೆಯತಕ್ಕದ್ದಲ್ಲ; ಬೇರೆ ಯಾವ ಉಪಾಯಗಳಿಂದಲೂ ಲಭಿಸತಕ್ಕದ್ದಲ್ಲ; ಅದು ಇಷ್ಟ ದುರ್ಲಭವಾಗಿದ್ದರೂ ಅದನ್ನು ಪಡೆಯಲು ತಾವಾಗಿಯೇ ಯಾರೂ ಮುಂದರಿಸುವದಿಲ್ಲ. ಆದರೆ ರಾಜ್ಯಸೂತ್ರಗಳನ್ನು ಅಂಗೀಕರಿಸಿ ದೊರೆತನವನ್ನು ಸಾಗಿಸುತ್ತಿರುವ ಒಂದು ಪಕ್ಷದ ಮುಖ್ಯ ಮಂತ್ರಿಯೂ ಅವನ ಮಂತ್ರಿ ಸಭೆಯಲ್ಲಿರುವ ಮಂತ್ರಿಗಳೂ ಯಾವುದೊಂದು ಕಾರಣದಿಂದ ಜನರ ಅಪ್ರೀತಿಗೊಳಗಾದರೆ, ಅವರ ಆಟವೇ ನಿಂತು, ಹೋಗುವದು. ಹೀಗಾಯಿತೆಂದರೆ, ಅವರು ರಾಜ್ಯಕಾರಭಾರದ ಕೆಲಸಗಳನ್ನು ತಾವಾಗಿಯೇ ಬಿಟ್ಟು ಬಿಡುವರು. ಆ ಮೇಲೆ ಅರಸನು

ಎರಡನೆಯ ಪಕ್ಷದ ಮುಂದಾಳನ್ನು ತನ್ನ ಬಳಿಗೆ ಕರೆಯಿಸಿಕೊಂಡು, ಅವನಿಗೆ ಮು
ಖ್ಯ ಮಂತ್ರಿಯ ಉಡುಗರೆಗಳನ್ನು ಕೊಡಬೇಕಾಗುವದು. ಈ ಸಂಗತಿಯಿಂದ
ಮುಖ್ಯ ಮಂತ್ರಿಯ ಉದ್ಯೋಗವು ತಾನಾಗಿಯೇ ಇದ್ದಲ್ಲಿಗೆ ಬಂದು, ಕೊರಳಿಗೆ ಬೀ
ಳುತ್ತದೆಂದು ಹೇಳಬಹುದು. ಭಾಗ್ಯಲಕ್ಷ್ಮಿಯು ಒಮ್ಮೊಮ್ಮೆ ತಾನೇ ಬಂದು, ಮ
ನೆ ಹೊಗುವಳೆಂದು ಹಿರಿಯರು ಹೇಳುವ ಮಾತಿಗೆ ಇದೊಂದು ತಕ್ಕ ದೃಷ್ಟಾಂತವಾ
ಗಿದೆ. ಈ ಮೇರೆಗೆ ಮುಖ್ಯ ಮಂತ್ರಿಯ ಉದ್ಯೋಗವೆಂಬ ಭಾಗ್ಯಲಕ್ಷ್ಮಿಯು
ಗ್ಲ್ಯಾಡ್‌ಸ್ಟನ್ನನ ಮನೆಯನ್ನು ಹುಡುಕುತ್ತ ನಾಲ್ಕು ಸಾರೆ ಬಂದದ್ದು ಅವನ ಸು
ಕೃತದ ಫಲವೇ ಸರಿ.

ಮುಖ್ಯ ಮಂತ್ರಿಯ ಉದ್ಯೋಗವನ್ನು ಹೊಸದಾಗಿ ಪಡೆದವನು ಅರಸನ ದ
ರ್ಶನಕ್ಕೆ ಹೋಗಿ, ಅವನ ಕರವನ್ನು ಚುಂಬಿಸುವದೊಂದು ಸಂಪ್ರದಾಯವು ಆ ದೇ
ಶದಲ್ಲುಂಟು. ಈ ಸಂಪ್ರದಾಯವು ಹೇಗೆ ಬಿತ್ತೆಂಬದು ಮಾತ್ರ ತಿಳಿಯುವದಿಲ್ಲ. ಈ
ಚುಂಬನ ವಿಧಿಯೇ ಆ ಮುಖ್ಯ ಮಂತ್ರಿಯ ಉದ್ಯೋಗವನ್ನು ಸ್ವೀಕರಿಸಿದ ಕುರು
ಹೆಂದು ಎಣಿಸಲ್ಪಡುವದು. ಈ ಚುಂಬನವಿಧಿಯು ಬಹು ಭೂಷಣವಾದದ್ದೆಂದು
ಅಲ್ಲಿಯವರು ನೆನಸುವರು. ಈ ವಿಧಿಯು ಗ್ಲ್ಯಾಡ್‌ಸ್ಟನ್ನನಿಗೆ ನಾಲ್ಕು ಸಾರೆ
ಆಯಿತು.

---

## ೩ನೆಯ ಅಧ್ಯಾಯ.

---

### ಗ್ಲ್ಯಾಡ್‌ಸ್ಟನ್ನನು ಪಾರ್ಲಮೆಂಟನ್ನು ಸೇರಿದ ಬಳಿಕ ಎಸಗಿದ ಕೃತ್ಯಗಳು.

---

ಕಿಂ ಜನ್ಮನಾಚ ಮಹತಾ ಪಿತೃಪೌರುಷೇಣ |
ಶಕ್ತ್ಯಾಹಿ ಯಾತಿ ನಿಜಯಾ ಪುರುಷಃ ಪ್ರತಿಷ್ಠಾಂ ||
ಕುಂಭೋಹಿ ಕೂಪಮಪಿ ಶೋಷಯಿತುಂ ನಶಕ್ತಃ |
ಕುಂಭೋದ್ಭವೇನ ಮುನಿನಾಂಬುಧಿರೇವ ಪೀತಃ ||೧||

ದೊಡ್ಡ ಕುಲದಲ್ಲಿ ಹುಟ್ಟಿದ ಮಾತ್ರಕ್ಕೆ ಪ್ರಯೋಜನವೇನು? ತಂದೆಯ ಪರಾ
ಕ್ರಮದಿಂದ ಮಗನಿಗೇನು ಬರುವದು? ಪ್ರತಿಷ್ಠೆಯನ್ನು ಹೊಂದುವವನು ತನ್ನ ಸಾ

ಮರ್ಥ್ಯದಿಂದಲೇ ಹೊಂದುತ್ತಾನೆ. ನೋಡಿರಿ ಮಣ್ಣಿನ ಕೊಡದಿಂದ ಬಾವಿಯೊಳಗಿನ ನೀರನ್ನೆಲ್ಲ ತೋಡು, ಅದನ್ನು ತೀರ ಬರಿದಾಗಿ ಮಾಡುವದು ಅಸಾಧ್ಯವಾಗುತ್ತದೆ; ಆದರೆ ಅದೇ ಕೊಡದಲ್ಲಿ ಹುಟ್ಟಿದ ಮುನಿಯು (ಕುಂಭಜ=ಅಗಸ್ತ್ಯನು) ಸಮುದ್ರವನ್ನೇ ಕುಡಿದು ಬಿಟ್ಟನು. ಆದದರಿಂದ ಈ ಪ್ರಪಂಚದಲ್ಲಿ ಅನ್ಯರ ಮೇಲೆ ಕೈಯನ್ನೊಡ್ಡದೆ ತಾನೇತಾನಾಗಿ ಉದ್ಯೋಗ ಮಾಡುವವನು ಪ್ರಸಿದ್ಧಿ ಹೊಂದುವನು.

---

ದುಡ್ಡು ಗಳಿಸುವದು ಒಂದು ವೇಳೆ ಸುಲಭವೆಂದು ಹೇಳಬಹುದು. ಆದರೆ ಗಳಿಸಿದ ದುಡ್ಡನ್ನು ತನಗೂ ಪರರಿಗೂ ಹಿತವಾಗುವಂತೆ ವೆಚ್ಚ ಮಾಡುವದು ಮಾತ್ರ ಸುಲಭವೆಂದು ಹೇಳಲಾಗದು. ಅದರಂತೆ ಯಾವುದೊಂದು ದೊಡ್ಡ ಉದ್ಯೋಗವನ್ನು ಪಡೆಯುವದು ಸಹ ಒಮ್ಮೊಮ್ಮೆ ಸುಲಭವಾಗಬಹುದು; ಆದರೆ ಆ ಉದ್ಯೋಗವನ್ನು ಪಡೆದ ಮೇಲೆ, ಅದರ ಕರ್ತವ್ಯಗಳನ್ನೆಲ್ಲ ಅಚ್ಚುಕಟ್ಟಾಗಿ ಮಾಡಿ, ನಾಲ್ಕು ಜನರಿಂದ ಹೌದೆನ್ನಿಸಿಕೊಳ್ಳುವದು ಬಲು ಬಿಕ್ಕಟ್ಟಿನ ಕೆಲಸವಾಗಿದೆ. ಇದೇ ಪ್ರಸಂಗವು ಗ್ಲ್ಯಾಡ್‌ಸ್ಟನ್ನನ ಮೇಲೆ ಬಂತು. ಹಿಂದಿನ ಅಧ್ಯಾಯದ ಕೊನೆಯಲ್ಲಿ ಹೇಳಿದ ಮೇರೆಗೆ ಅವನು ನ್ಯೂಆರ್ಕ ಪ್ರಾಂತದ ಪ್ರತಿನಿಧಿಯಾಗಿ ಪಾರ್ಲಮೆಂಟನ್ನು ಸುಲಭವಾಗಿ ಸೇರಿದನು; ಆದರೆ ಅವನು, ಆ ಮಹಾ ಸಭೆಯಲ್ಲಿ ಹೊರಟ ವಿಷಯಗಳನ್ನು ಕುರಿತು ತಾನು ಕೊಡುವ ಅಭಿಪ್ರಾಯಗಳು ಸಯುಕ್ತಿಕವಾದವುಗಳೆಂದು ವಾಗ್ಬಲದಿಂದಲೂ ವಾದವಿವಾದಗಳಿಂದಲೂ ಸ್ಥಾಪಿಸಿ, ತಾನು ಅಂಗೀಕರಿಸಿರುವ ಸ್ಥಳಕ್ಕೆ ಯೋಗ್ಯನಾಗಿರುವೆನೆಂದು ಈಗ ಎಲ್ಲರಿಗೂ ತೋರಿಸಿಕೊಡಬೇಕಾಯಿತು.

ಗ್ಲ್ಯಾಡ್‌ಸ್ಟನ್ನನು ಪಾರ್ಲಮೆಂಟಿನಲ್ಲಿ ಗುಲಾಮತನದ ಬೆನ್ನು ಕಟ್ಟಿ ಭಾಷಣ ಮಾಡಿದ್ದು.

ಅವನು ಪಾರ್ಲಮೆಂಟನ್ನು ಪ್ರವೇಶಿಸಿದಾಗ, ಅಲ್ಲಿ ಗುಲಾಮತನದ ವಿಷಯವಾಗಿ ಚರ್ಚೆ ನಡೆದಿತ್ತು. ಆ ಹೊತ್ತಿಗೆ ಇಂಗ್ಲಂಡದ ವಸಾಹತುಗಳಲ್ಲಿದ್ದ ಭೂಮಿಗಳ ಒಡೆಯರು ಸಾವಿರಾರು ಗುಲಾಮರನ್ನಿಟ್ಟುಕೊಂಡು, ಅವರನ್ನು ತಮ್ಮ ಹೊಲಗಳಲ್ಲಿಯೂ ತೋಟಗಳಲ್ಲಿಯೂ ದನಗಳಂತೆ ದುಡಿಸಿಕೊಳ್ಳುತ್ತಿದ್ದರು. ಈ ಪದ್ಧತಿಯು ಇಂಗ್ಲಂಡದ ನೀತಿಮತ್ತೆಗೆ ಕುಂದಿಡುವದೆಂತಲೂ ಇದನ್ನು ಒಮ್ಮೆಲೆ ಮುರಿದು, ತಮ್ಮ ರಾಷ್ಟ್ರಕ್ಕೆ ಹತ್ತಿರುವ ಈ ಕಲಂಕವನ್ನು ಹೋಗಲಾಡಿಸಬೇಕೆಂತಲೂ ಒಂದು ಪಕ್ಷದ ಜನರು ಹೇಳುತ್ತಿದ್ದರು. ಎರಡನೆಯ ಪಕ್ಷದವರು, ಗುಲಾಮತನವು ಬಲು ಕೆಟ್ಟದ್ದೂ ಮನುಷ್ಯತ್ವಕ್ಕೆ ಲಜ್ಜಾಸ್ಪದವೂ ಆಗಿದ್ದರೂ ಕೂಡ, ಅದು ಬಹು ಕಾಲದಿಂದ ಎಡರಿಲ್ಲದೆ ನಡೆಯುತ್ತ ಬಂದಿದೆ. ಅದರಿಂದ ದೇಶಕ್ಕೆ ಬಹು ಆದಾಯವಾಗಿದೆ, ಈಗೂ ಆ

ದಾಯವಾಗುತ್ತಲಿದೆ, ಮುಂದೂ ಆದಾಯವಾಗಬಹುದು; ಹೀಗಿರುವಲ್ಲಿ ಅದನ್ನು ಒಮ್ಮೆಲೆ ನಿಲ್ಲಿಸಿಬಿಟ್ಟರೆ, ಲಕ್ಷಾವಧಿ ಜನರು ಕೋಟಿಗಟ್ಟಲೆ ರೂಪಾಯಿಗಳ ನಷ್ಟಕ್ಕೀಡಾಗುವದರಿಂದಲೂ ಅದಕ್ಕೆ ಧರ್ಮಶಾಸ್ತ್ರವು (ಬಾಯಿಬಲ್ಲವು) ಕೂಡ ಸಮ್ಮತಿಸುವದರಿಂದಲೂ ಹಾಗೆ ಮಾಡದೆ, ಗುಲಾಮರ ಒಡೆಯರಿಗೆ ನಷ್ಟ ಸಂಭವಿಸದಂತೆ ಮೆಲ್ಲಮೆಲ್ಲನೆ ಅದನ್ನು ಪ್ರತಿಬಂಧಿಸುವ ಪ್ರಯತ್ನ ಮಾಡಬೇಕೆಂದು ಅಭಿಪ್ರಾಯ ಪಡುತ್ತಿದ್ದರು. ಗ್ಲ್ಯಾಡ್‌ಸ್ಟನ್ನನು ಎರಡನೆಯ ಪಕ್ಷದವನಾಗಿದ್ದನು. ಇಲ್ಲಿ ಹೇಳಬೇಕಾದ ಇನ್ನೊಂದು ಸಂಗತಿ ಏನೆಂದರೆ:—(West Indies) ವೆಸ್ಟ ಇಂಡೀಜ್ ಎಂಬ ನಡುಗಡ್ಡೆಗಳಲ್ಲಿ (Demerara) ಡೆಮಿರಾರಾ ಎಂಬ ಹೆಸರಿನದೊಂದು ನಡುಗಡ್ಡೆ ಇರುತ್ತದೆ. ಅಲ್ಲಿ ಗ್ಲ್ಯಾಡ್‌ಸ್ಟನ್ನನ ತಂದೆಯ ಹೊಲಗಳೂ ತೋಟಪಟ್ಟಿ ಮುಂತಾದವುಗಳೂ ಹೇರಳವಾಗಿದ್ದವು. ಅವುಗಳಲ್ಲಿ ಬಹು ಜನ ಗುಲಾಮರು ದುಡಿಯುತ್ತಿದ್ದರು. ಇತ್ತಿತ್ತಲಾಗಿ ಅವರೊಳಗಿನ ಬಹು ಜನರು ತಮ್ಮ ಒಡೆಯನ ಕ್ರೂರತನಕ್ಕೊಳಪಟ್ಟು, ಪ್ರಾಣಬಿಡಹತ್ತಿರುವರೆಂಬ ಬೊಬ್ಬಾಟವು ಹುಟ್ಟಿ, ಅದು ದೊರೆತನದವರ ಕಿವಿಗೆ ಸಹ ಮುಟ್ಟಿತ್ತು. ಆದುಕಾರಣ ಗ್ಲ್ಯಾಡ್‌ಸ್ಟನ್ನನು ತನ್ನ ತಂದೆಯ ಪಕ್ಷ ವಹಿಸಿ, ಪಾರ್ಲಮೆಂಟಿನಲ್ಲಿ ಗುಲಾಮತನದ ಬೆನ್ನುಕಟ್ಟಿ ಮಾತನಾಡುತ್ತಿರುವನೆಂದು ಬಹು ಜನರು ಗ್ರಹಿಸಿದರು. ಆದರೆ ಅವರ ಗ್ರಹಿಕೆಯು ನಿಜವಾದದ್ದಲ್ಲ. ಯಾಕೆಂದರೆ ಗ್ಲ್ಯಾಡ್‌ಸ್ಟನ್ನನ ಮನಃಪೂರ್ವಕವಾದ ಅಭಿಪ್ರಾಯವೇ ಹಾಗಿತ್ತು. ಇದಲ್ಲದೆ ಗುಲಾಮತನಕ್ಕೆ ಕ್ರಿಸ್ತೀಧರ್ಮ ಶಾಸ್ತ್ರದ ಆಧಾರವಿರುವದರಿಂದ, ಅವನ ಭಾಷಣಗಳು ಮತ್ತಿಷ್ಟು ಬಲಗೊಂಡವು. ಈ ವಿಷಯದ ಮೇಲೆ ಅವನು ಮೂರು ನಾಲ್ಕು ಸಾರೆ ಪಾರ್ಲಮೆಂಟಿನಲ್ಲಿ ಮಾತನಾಡಿದನು. ಮೊದಲನೆಯ ಸಾರೆ ಅವನು ಸನ್ ೧೮೩೩ ನೆಯ ಇಸವಿಯ ಮೇ ತಿಂಗಳಿನ ೧೭ನೆಯ ತಾರೀಖಿನ ದಿವಸ ಭಾಷಣ ಮಾಡಿದನು. ಈ ಭಾಷಣದಲ್ಲಿ ಅವನು ತನ್ನ ತಂದೆಯ ಮೇಲೆ ಬಂದಿದ್ದ ಅಪವಾದದ ವಿರುದ್ಧವಾಗಿ ಮಾತನಾಡಿ, ಆ ಅಪವಾದವು ನಿರಾಧಾರವಾದದ್ದೆಂದು ಸಭಾಸದರ ನಿದರ್ಶನಕ್ಕೆ ತಂದುಕೊಟ್ಟನು. ಈ ಮಾತಿನ ಪುಷ್ಟೀಕರಣಾರ್ಥವಾಗಿ ಅವನು ಆ ನಡುಗಡ್ಡೆಯಲ್ಲಿದ್ದ ತನ್ನ ತಂದೆಯ ಪಾರುಪತ್ಯಗಾರನು ಬರೆದ ಎರಡು ಪತ್ರಗಳನ್ನು ಸಭೆಯಲ್ಲಿ ಓದಿ ಹೇಳಿದನು. ಅವುಗಳಿಂದ ಅಲ್ಲಿಯ ಗುಲಾಮರನ್ನು ಒಳ್ಳೆ ರೀತಿಯಿಂದ ನಡೆಯಿಸಿಕೊಳ್ಳುತ್ತಿದ್ದರೆಂತಲೂ ಅವರ ಆರೋಗ್ಯಕ್ಕೂ ಸುಖಕ್ಕೂ ತಕ್ಕಷ್ಟು ಲಕ್ಷ್ಯಗೊಡುತ್ತಿದ್ದರೆಂತಲೂ ದೇಹದಂಡದ ಶಿಕ್ಷೆಯನ್ನು ಅಪ್ಪಿತಪ್ಪಿ ಕೊಡುತ್ತಿದ್ದರೆಂತಲೂ ಕಂಡುಬಂತು. ಇದಲ್ಲದೆ ಅವುಗಳೊಳಗಿನ ಒಂದು ಪತ್ರದಲ್ಲಿ ಆ ಪಾರುಪತ್ಯಗಾರನು ಒಳ್ಳೆಯ ನಡತೆಯ ಕೆಲವು ಜನ ಗುಲಾಮರನ್ನು ಹೊಗಳಿ, ಅವರಿಗೆ ಈ, ಈ, ಅನುಕೂಲತೆಗಳನ್ನು ಅವಶ್ಯವಾಗಿ ಮಾಡಿಕೊಡಬೇಕೆಂದು

ತನ್ನ ಒಡೆಯನಿಗೆ ಸೂಚಿಸುತ್ತಿದ್ದನು. ಕೆಲವು ದಿವಸಗಳ ತರುವಾಯ ಅಂದರೆ ಜೂನ ತಿಂಗಳಿನ ೩ನೆಯ ತಾರೀಖಿನ ದಿವಸ ಇದೇ ವಿಷಯದ ಮೇಲೆ ಗ್ಲ್ಯಾಡ್‌ಸ್ಟನ್ನನು ಎರಡನೆಯ ಸಾರೆ ಮಾತನಾಡಿದನು. ಈ ಹೊತ್ತಿಗೆ ಅವನು ಕೆಲವು ವಸಾಹತುಗಳಲ್ಲಿ ಗುಲಾಮರನ್ನು ನಿರ್ದಯದಿಂದ ನಡೆಯಿಸಿಕೊಳ್ಳುವದು ನಿಜವೆಂದು ಒಪ್ಪಿಕೊಂಡು. ಅದಕ್ಕಾಗಿ ತನ್ನ ದುಃಖೋದ್ಗಾರಗಳನ್ನು ಹೊರಗೆಡವಿ ಕಡೆಗೆ ಹೇಳಿದ್ದೇನೆಂದರೆ:— "ಈ ಪದ್ಧತಿಯಲ್ಲಿರುವ ಕ್ರೂರತನವನ್ನು ತೀರ ಇಲ್ಲದಂತೆ ಮಾಡುವದು ಅಸಾಧ್ಯವು. ಈ ಸಂಗತಿಯನ್ನು ಲಕ್ಷ್ಯದಲ್ಲಿ ತಂದು, ಬ್ರಿಟಿಷ್ ನ್ಯಾಯವಿಧಾಯಕ ಸಭೆಯವರೂ ದೇಶದೊಳಗಿನ ಉದಾರಾಂತಃಕರಣದ ಸದ್ಗೃಹಸ್ಥರೂ ಈ ಸಂಸ್ಥೆಯನ್ನು ಸಂಪೂರ್ಣವಾಗಿ ಮುರಿದು ಬಿಡುವ ಘನವಾದ ಕಾರ್ಯಕ್ಕೆ ಕೈ ಹಾಕಿರುವರು. ಇದು ಅವರಿಗೆ ಶ್ರೇಯಸ್ಕರವಾದದ್ದು. ಆದರೆ ಗುಲಾಮರ ಸಲುವಾಗಿ ಅವರ ಒಡೆಯರು ವೆಚ್ಚ ಮಾಡಿರುವ ಅಪರಿಮಿತ ದ್ರವ್ಯಕ್ಕೆ ಸರಿಯಾದ ಧನವನ್ನು ಆ ಒಡೆಯರಿಗೆ ಕೊಟ್ಟು, ಗುಲಾಮರನ್ನು ಬಂಧವಿಮೋಚನೆ ಮಾಡುವದು ಮಾತ್ರವಲ್ಲ, ಆದರೆ ಆ ವಿಮುಕ್ತರಾದ ಗುಲಾಮರು ಮುಂದೆ ಉದ್ಯೋಗಶೀಲರೂ ಕಾರ್ಯದಕ್ಷರೂ ಆಗುವಂತೆ ತಕ್ಕ ಏರ್ಪಾಡನ್ನು ಮಾಡುವದು ಪಾರ್ಲಮೆಂಟಿನವರ ಕರ್ತವ್ಯವಾಗಿದೆ. ಒಂದುವೇಳೆ ಅವರು ಇದನ್ನು ಮಾಡದಿದ್ದರೆ ಮತ್ತು ಅವರಿಗೆ ನೀತಿಶಿಕ್ಷಣವನ್ನು ಕೊಡದಿದ್ದರೆ, ಈ ಸ್ವಾತಂತ್ರ್ಯವು ಗುಲಾಮರಿಗೆ ಆಶೀರ್ವಾದದ ಬದಲು ಉಗ್ರಶಾಪವೇ ಆಗುವದು. ಇದಲ್ಲದೆ ಗುಲಾಮರನ್ನು ಬಿಡುಗಡೆ ಮಾಡುವ ಕೃತ್ಯಕ್ಕೆ ಪಾರ್ಲಮೆಂಟಿನವರು ವಸಾಹತುಗಳಲ್ಲಿರುವ ನ್ಯಾಯವಿಧಾಯಕ ಸಭೆಯವರ ಒಪ್ಪಿಗೆಯನ್ನು ಅವಶ್ಯವಾಗಿ ಪಡೆಯತಕ್ಕದ್ದು. ಇಲ್ಲದಿದ್ದರೆ ಅವರ ಪ್ರಯತ್ನವು ಸಫಲವಾಗಲಿಕ್ಕಿಲ್ಲ ಯಾಕೆಂದರೆ ಒಂದುವೇಳೆ ಅವರು ಈ ಕಾರ್ಯವನ್ನು ತಮ್ಮ ಮುಂಗೈ ಕಸುವಿನಿಂದಲೇ ಮಾಡಲು ಯತ್ನಿಸಿದರೆ ಅವರಿಗೆ ಪ್ರತಿಕಕ್ಷಿಗಳುಂಟಾಗುವ ಭಯವುಂಟು. ಇಂಗ್ಲಂಡದ ಶಕ್ತಿಯು ಅದರ ಶರೀರ ಸಾಮರ್ಥ್ಯದಲ್ಲಿಲ್ಲ; ಆದರೆ ಅದರ ನೀತಿಯಲ್ಲಿಯೂ ಅದರ ಉದಾರಬುದ್ಧಿಯಲ್ಲಿಯೂ ಅದರ ಸದ್ಗುಣಗಳಲ್ಲಿಯೂ ಇರುತ್ತದೆ. ಇದನ್ನು ಮರೆದು, ಅವರು ತಮ್ಮ ಶರೀರಸಾಮರ್ಥ್ಯವನ್ನೇ ನಂಬಿ ನಡೆದರೆ, ಅದು ವಸಾಹತುಗಳ ನಾಶನಕ್ಕೂ ಬ್ರಿಟಿಷ್ ಸಾಮ್ರಾಜ್ಯದ ಅಪಕರ್ಷಕ್ಕೂ ಕಾರಣವಾಗುವದು." ಅವನು ತನ್ನ ಮತ್ತೊಂದು ಭಾಷಣದ ಅಂತ್ಯದಲ್ಲಿ ವಿರುದ್ಧ ಪಕ್ಷದವರನ್ನು ಉದ್ದೇಶಿಸಿ ಹೇಳಿದ್ದೇನೆಂದರೆ:— "ಸದ್ಗೃಹಸ್ಥರೇ, ವೆಸ್ಟ ಇಂಡೀಜ್ ದ್ವೀಪಗಳೊಳಗಿನ ಗುಲಾಮರ ಸಂಖ್ಯೆಯು ಒಂದೆರಡು ವರ್ಷಗಳಲ್ಲಿ ತನ್ನಷ್ಟಕ್ಕೆ ತಾನೇ ಕಡಿಮೆಯಾಗುವ ಲಕ್ಷಣವು ತೋರುತ್ತಿದೆ. ಇಷ್ಟು ಅಲ್ಪಕಾಲದವರೆಗೆ ತಡೆಯುವದು ನಿಮ್ಮಿಂದಾಗವೊಲ್ಲದು. ಒಳ್ಳೆ

ಯದು. ಈಗ ನೀವು ನಿಮ್ಮ ಲಕ್ಷವನ್ನು ಅಮೇರಿಕೆಯ ಕಡೆಗೆ ತುಸು ತಿರುಗಿಸಿ ಮತ್ತು ಆ ದೇಶದ ಹತ್ತಿಯ ಬೆಳೆಗೆ ಉತ್ತೇಜನ ಕೊಡುವ ಭಾರವು ನಿಮ್ಮೆಲ್ಲಿಯ ಪ್ರತಿ ಒಬ್ಬರ ಮೇಲೆ ಎಷ್ಟಿರುತ್ತದೆಂಬ ಸಂಗತಿಯನ್ನು ಕುರಿತು ಶಾಂತಚಿತ್ತದಿಂದ ವಿಚಾರವಮಾಡಿರಿ. ಆ ದೇಶದಲ್ಲಿ ಗುಲಾಮರನ್ನಿಟ್ಟುಕೊಳ್ಳುವ ಸಂಪ್ರದಾಯವು ಬಹು ವರ್ಷಗಳಿಂದ ನಡೆಯುತ್ತ ಬಂದಿರುವದರಿಂದ ಈ ಹೊತ್ತಿಗೆ ಅಲ್ಲಿ ೩೦ ಲಕ್ಷ ಗುಲಾಮರು ಕೃಷಿಕರ್ಮದಲ್ಲಿ ತೊಡಗಿರುವರು. ಆದರೆ ಅಲ್ಲಿಯ ಜನರು ಈ ಸಂಪ್ರದಾಯವನ್ನು ನಿಲ್ಲಿಸಿ ಬಿಡಿರಿ, ಇಲ್ಲವೆ ಇದನ್ನು ಅಲ್ಪಸ್ವಲ್ಪಾದರೂ ಕಡಿಮೆ ಮಾಡಿರಿ ಎಂದು ಗುಲ್ಲನ್ನೆಬ್ಬಿಸಿದ ಸುದ್ದಿಯನ್ನು ನೀವು ಎಂದಾದರು ಕೇಳಿರುವಿರೋ? ಎಂದೂ ಇಲ್ಲ. ಈ ಗುಲ್ಲನ್ನು ಮೊದಲು ಎಬ್ಬಿಸಿದವರೂ ಇದನ್ನು ಈ ಸ್ಥಿತಿಗೆ ತಂದವರೂ ಇಲ್ಲಿಯವರೇ. ಇದು ಹಾಗಿರಲಿ. ನಮ್ಮ ಹಿರಿಯರು ಗುಲಾಮತನವು ಒಂದು ಸ್ವತಂತ್ರ, ಸಂಸ್ಥೆ ಇರುತ್ತದೆಂತಲೂ ಅದು ಯುಗದಿಂದ ಯುಗಕ್ಕೂ ತಲತಲಾಂತರಗಳಿಗೂ ನಡೆಯುತಕ್ಕದ್ದೆಂತಲೂ ಭವಿಷ್ಯಹೇಳುತ್ತ ಬಂದಿರುವರು. ಈ ಭವಿಷ್ಯಕ್ಕೆ ಆ ಹಿರಿಯರಿಗಿಂತ ನಾವೇ ಹೆಚ್ಚು ಹೊಣೆಯಾಗಿರುತ್ತೇವೆ. ಯಾಕೆಂದರೆ ಗುಲಾಮತನವು ನಮ್ಮ ಕಾಲದಲ್ಲಿ ಮೇರೆದಪ್ಪಿ ಬೆಳೆದದೆ. ಈ ಬೆಳವಣಿಗೆಯು ಅದರ ಚಿರಸ್ಥಾಯಿತ್ವದ ಕುರುಹೆಂದು ಹೇಳಬಹುದು. ಇದಲ್ಲದೆ, ನಾವು ಒಂದು ವರ್ಷದಲ್ಲಿ ಸುಮಾರು ೩೬ ಕೋಟಿ ೩೦ ಲಕ್ಷ ಪೌಂಡು ಹತ್ತಿಯನ್ನು ನೂರಿಸುತ್ತೇವೆ. ಈ ಹತ್ತಿಯಲ್ಲಿ ೪ ಕೋಟಿ, ೫೦ ಲಕ್ಷ ಪೌಂಡು ಹತ್ತಿಯನ್ನು ಮಾತ್ರ ಸ್ವತಂತ್ರ ಕೂಲೀ ಆಳುಗಳು ಬೆಳೆಯಿಸುತ್ತವೆ. ಉಳಿದ ೩೧ ಕೋಟಿ, ೮೦ ಲಕ್ಷ ಪೌಂಡು ಹತ್ತಿಯನ್ನು ಗುಲಾಮರು ಹೊಲಗಳಲ್ಲಿ ದುಡಿದು ಬೆಳೆಯಿಸುತ್ತಾರೆ. ಒಂದು ವೇಳೆ ಹಿಂದುಸ್ಥಾನದ ಮನಸಿಗೆ ಬಂದರೆ, ಅದು ಇಷ್ಟು ಹತ್ತಿಯನ್ನು ತುಸು ಬಂಡವಲದಿಂದ ಬೆಳೆದು, ಅದನ್ನು ಅಮೇರಿಕೆಯ ಹತ್ತಿಗಿಂತ ಅಗ್ಗವಾಗಿ ನಮಗೆ ಮಾರಬಹುದು. ಇಂತಹ ಸ್ಥಿತಿಯಲ್ಲಿ ನಾವು ಈ ಸಂಸ್ಥೆಯನ್ನು ಮುರಿಯುವದು ಉಚಿತವೋ ಅನುಚಿತವೋ ಚೆನ್ನಾಗಿ ವಿಚಾರ ಮಾಡಿರಿ.” ಆದರೆ ಅವನ ಈ ಅಭಿಪ್ರಾಯವು ಕೆಲವು ವರ್ಷಗಳಲ್ಲಿಯೇ ಬದಲಾಯಿತು. ಸನ್ ೧೮೪೩ ನೆಯ ಇಸವಿಯಲ್ಲಿ ‘ಪರದೇಶದ ಸಕ್ಕರೆಯ ಮೇಲಿನ ಸುಂಕ’ ಎಂಬ ವಿಷಯದ ಬಗ್ಗೆ ಪಾರ್ಲಮೆಂಟಿನಲ್ಲಿ ವಾದವಿವಾದಗಳು ನಡೆದವು, ಆ ಹೊತ್ತಿಗೆ ಅವನು ‘ಈ ಸುಂಕವನ್ನು ಕೊಡ್ರಿಸುವದು ಸರಿಯಲ್ಲ, ಯಾಕೆಂದರೆ ಇದರಿಂದ ಗುಲಾಮರ ವ್ಯಾಪಾರಕ್ಕೆ ಉತ್ತೇಜನ ಕೊಟ್ಟಂತಾಗುವದು’ ಎಂದು ಹೇಳಿದನು.

ಮರುವರ್ಷ ಅಂದರೆ ಸನ್ ೧೮೩೪ನೆಯ ಇಸವಿಯಲ್ಲಿ (Lord Melbourne)

ಗ್ಲ್ಯಾಡ್‌ಸ್ಟನ್ನನು ಜೂನಿಯರ್-ಲಾರ್ಡ್-ಆಫ್-ದಿ-ಟ್ರೆಝುರಿ ಎಂಬ ಉದ್ಯೋಗವನ್ನು ಪಡೆದದ್ದು, ೧೮೩೪.

ಲಾರ್ಡ್ ಮೇಲ್‌ಬೋರ್ನನು ತನ್ನ ಮುಖ್ಯಮಂತ್ರಿಯ ಉದ್ಯೋಗವನ್ನು ಬಿಟ್ಟುಕೊಟ್ಟನು. ಆ ಮೇಲೆ ವಿಲಿಯಮ್ ಅರಸನು (Sir Robert Peel) ಸರ್ ರಾಬರ್ಟ್ ಪೀಲನನ್ನು ಮುಖ್ಯಮಂತ್ರಿಯನ್ನಾಗಿ ನಿಯಮಿಸಿದನು. ಆ ಚಾಣಾಕ್ಷನಾದ ಮುಖ್ಯಮಂತ್ರಿಯು ಗ್ಲ್ಯಾಡ್‌ಸ್ಟನ್ನನ ಯೋಗ್ಯತೆಯನ್ನು ಕಂಡುಹಿಡಿದವನಾಗಿದ್ದದರಿಂದ, ಅವನಿಗೆ (Junior Lord of the Treasury) ಜೂನಿಯರ್-ಲಾರ್ಡ್-ಆಫ್-ದಿ-ಟ್ರೆಝುರಿ ಎಂಬ ಉದ್ಯೋಗವನ್ನು ಕೊಟ್ಟನು. ಇಪ್ಪತ್ತೈದು ವರ್ಷದ ತರುಣನು ಪಾರ್ಲಮೆಂಟನ್ನು ಸೇರಿದ ಸ್ವಲ್ಪ ಕಾಲದಲ್ಲಿಯೇ ಇಷ್ಟು ದೊಡ್ಡ ಸ್ಥಳವನ್ನು ಪಡೆದದ್ದು ಸಾಮಾನ್ಯಸಂಗತಿಯಲ್ಲ. ಇದೇ ಸಮಯದಲ್ಲಿ ಪಾರ್ಲಮೆಂಟಿನ ಪ್ರತಿನಿಧಿಗಳನ್ನು ಆರಿಸಿಕೊಳ್ಳುವ ಕೆಲಸವು ಸಾಗಿತು. ಈ ಆಯಿಕೆಯಲ್ಲಿ ನ್ಯೂಆರ್ಕ ಪ್ರಾಂತದವರು ಗ್ಲ್ಯಾಡ್‌ಸ್ಟನ್ನನನ್ನು ಬಹು ಸಂತೋಷದಿಂದ ತಮ್ಮ ಪ್ರತಿನಿಧಿಯನ್ನಾಗಿ ತಿರುಗಿ ಆರಿಸಿಕೊಂಡು, ಅವನನ್ನು ಪಾರ್ಲಮೆಂಟಿಗೆ ಕಳುಹಿಸಿದರು.

ಇಂಗ್ಲಂಡದೊಳಗಿನ ಸತ್ಪುರುಷರು ಗ್ಲ್ಯಾಡ್‌ಸ್ಟನ್ನನ ವಿಷಯವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳು.

ಇಷ್ಟರಲ್ಲಿಯೇ ಗ್ಲ್ಯಾಡ್‌ಸ್ಟನ್ನನ ನಿಜವಾದ ಯೋಗ್ಯತೆಯು ಇಂಗ್ಲಂಡದೊಳಗಿನ ಚತುರಪುರುಷರ ಲಕ್ಷ್ಯವನ್ನು ತನ್ನ ಕಡೆಗೆ ಎಳೆದುಕೊಳ್ಳದೆ ಬಿಡಲಿಲ್ಲ. ಅವರು ಅವನಲ್ಲಿದ್ದ ಕುಶಾಗ್ರಬುದ್ಧಿಯ ವಿಷಯವಾಗಿಯೂ ಸದ್ಗುಣಗಳ ವಿಷಯವಾಗಿಯೂ ತಮ್ಮತಮ್ಮೊಳಗೆ ಮಾತನಾಡಹತ್ತಿದರು. ಅವರಲ್ಲಿ (Reverend Samuel Wilberforce) ರಿವಿರೆಂಡ್ ಸಾಮ್ಯುಯಲ್ ವಿಲ್ಬರ್‌ಫೋರ್ಸನೆಂಬ ಪ್ರಸಿದ್ಧ ಪುರುಷನು ಗ್ಲ್ಯಾಡ್‌ಸ್ಟನ್ನನಿಗೆ ಒಂದು ಪತ್ರವನ್ನು ಬರೆದನು. ಅದರ ತಾತ್ಪರ್ಯವೇನೆಂದರೆ:—"ಆತ್ಮಸ್ತುತಿಯು ತಮಗೆ ರವಷ್ಟಾದರೂ ಸೇರುವದಿಲ್ಲೆಂದು ನನಗೆ ತಿಳಿದಿದೆ. ಇದು ಸಜ್ಜನರ ಲಕ್ಷಣವು. ಈಗ ಪ್ರತಿನಿಧಿಗಳ ಸಭೆಯಲ್ಲಿ ತಮಗಿರುವಷ್ಟು ಗೌರವವೂ ವರ್ಚಸ್ಸೂ ಮತ್ತಾವ ತರುಣರಿಗೂ ಇರುವದಿಲ್ಲ; ತಮ್ಮ ಕೀರ್ತಿಯು ಮೆಲ್ಲಮೆಲ್ಲನೆ ಸುತ್ತಲು ಹಬ್ಬುತ್ತ ನಡೆದಿದೆ; ಜನರ ಲಕ್ಷ್ಯವು ತಮ್ಮ ಕಡೆಗೆ ಒತ್ತರದಿಂದ ತಿರುಗಹತ್ತಿದೆ; ಈ ನಿಜವಾದ ಸಂಗತಿಗಳನ್ನು ತಮಗೆ ತಿಳಿಸುವದು ಮುಖಸ್ತುತಿಯೆಂಬ ದೋಷಕ್ಕೀಡಾಗದೆಂದು ನಾನು ಎಣಿಸುತ್ತೇನೆ. ಇನ್ನು ಮೇಲೆ ತಾವು ಬಲು ಎಚ್ಚರದಿಂದ ಹೆಜ್ಜೆಯನ್ನಿಡಬೇಕು. ತಾವು ಮುಂದೆ ಎಸಗ

ಬೇಕೆಂದೆಣಿಸಿರುವ ಕೃತ್ಯಗಳನ್ನು ಯಾವಾಗಲು ಲಕ್ಷದಲ್ಲಿಟ್ಟುಕೊಂಡು, ಅವುಗಳಿಗೆ ಸಹಾಯವಾಗುವಂತೆ ಈಗಿನಿಂದ ವರ್ತಿಸುವ ಕ್ರಮವನ್ನಿಡಬೇಕು. ಯಾಕೆಂದರೆ ನಮ್ಮ ಪ್ರಭುವಿನ ಒಡ್ಡೋಲಗದೊಳಗಿನ ಅತ್ಯುಚ್ಚ ಸ್ಥಳವು ಸಹ ತಮ್ಮ ಕೈಗೆ ನಿಲುಕದೇ ಇರಲಾರದು. ಒಂದಿಲ್ಲೊಂದು ದಿನ ತಾವು ಈ ಬ್ರಿಟಿಷ್ ಸಾಮ್ರಾಜ್ಯದ ಚಾಲಕರಾಗುವ ಸುಚಿಹ್ನಗಳು ತೋರುತ್ತಿವೆ. ಒಂದು ವೇಳೆ ದೇವರ ಸಂಕೇತವೇ ಹಾಗಿದ್ದ ಪಕ್ಷದಲ್ಲಿ, ತಾವು ಆ ಘನವಾದ ಸ್ಥಳವನ್ನು ಅಲಂಕರಿಸಿದ ಬಳಿಕ, ಮಾಡಬೇಕಾಗುವ ಕೃತ್ಯಗಳನ್ನು ತಮ್ಮ ಈಗಿನ ಕೃತ್ಯಗಳು ಅನುಸರಿಸಬೇಕೆಂಬ ಮಾತು ಸ್ಪಷ್ಟವೇ. ತಾವು ಯಾರ ಭಿಡೆಯನ್ನೂ ಕಾಯದೆ, ತಮ್ಮ ಪುನಃ ಪೂರ್ವಕವಾದ ಮತಗಳನ್ನೇ ಹಿಂಬಾಲಿಸುವದು ಯೋಗ್ಯವು. ಇದರಲ್ಲಿ ಅಲ್ಪವೂ ತಪ್ಪಕೂಡದು. ಈ ತರದ ವರ್ತನವನ್ನಿಟ್ಟರೆ, ತಮ್ಮ ಮೇಲೆ ವ್ರತಭಂಗದ ಆರೋಪವು ಎಂದಿಗೂ ಬರಲಾರದು. ನಾನು ಈ ಸೂಚನೆಯನ್ನು ಮಾಡಲು, ಒಂದು ವಿಶೇಷ ಕಾರಣವುಂಟು. ಅದೇನೆಂದರೆ, ನಮ್ಮಲ್ಲಿಯು ಬಹು ಜನ ಮುತ್ಸದ್ದಿಗಳು ಬಿಸಿಲು ಬಂದತ್ತ ಕೊಡೆಹಿಡಿಯುತ್ತ ಬಂದಿರುವರು. ಇಂತಹ ಜನರ ಜೊತೆಯಲ್ಲಿ ಯಾವಾಗಲು ಇರುವವರು ಅವರ ಸಹವಾಸವೆಂಬ ನಂಜಿಗೊಳಗಾಗಿ, ತಮ್ಮ ಸ್ವಂತ ಮತಗಳನ್ನು ಬದಿಗಿಟ್ಟು, ಅವರ ಮತಗಳನ್ನೇ ಅನುಸರಿಸುವ ಸಂಭವವುಂಟು. ಆದರೆ ಆ ಸಂಜಿಗೆ ತಾವು ಮಾತ್ರ ಇನ್ನು ಒಳಗಾಗಿರುವದಿಲ್ಲೆಂದು ಮನಗಂಡು, ತಕ್ಕಕಾಲದಲ್ಲಿಯೇ ತಮ್ಮನ್ನು ಎಚ್ಚರಿಸಿದ್ದೇನೆ." ಈ ಪತ್ರವು ಬಹು ಮಹತ್ವವುಳ್ಳದ್ದಾಗಿದೆ. ಇದರಲ್ಲಿಯ ಎಚ್ಚರಿಕೆಯ ಮಾತುಗಳು ಗ್ಲ್ಯಾಡ್‌ಸ್ಟನ್ನನಿಗೆ ಮಾತ್ರವಲ್ಲ, ಆದರೆ ಸಾರ್ವಜನಿಕ ಕೃತ್ಯಗಳಲ್ಲಿ ಸೇರಲಿಚ್ಛಿಸುವ ಪ್ರತಿ ಒಬ್ಬ ತರುಣನಿಗೆ ಸಹ ತಕ್ಕವುಗಳಾಗಿವೆ. ಪ್ರಪಂಚದಲ್ಲಿ ಸೇರುವವನು ತನ್ನ ಪೂರ್ವ ವರ್ತನಕ್ಕಾಗಿ ಮುಂದೆ ತನಗೆ ಪಶ್ಚಾತ್ತಾಪವುಂಟಾಗದಂತೆ ವರ್ತಿಸಬೇಕು ಮತ್ತು ಪೂರ್ವ ವರ್ತನವು ಮುಂದಿನ ವರ್ತನಕ್ಕೆ ಸಹಾಯಕಾರಿಯಾಗುವಂತೆ ನಡೆಯಬೇಕು ಎಂಬದು ಈ ಪತ್ರದ ತಾತ್ಪರ್ಯವು.

ಗ್ಲ್ಯಾಡ್‌ಸ್ಟನ್ನನು ಬಡಜನರ ಮಕ್ಕಳ ಶಿಕ್ಷಣದ ಬಗ್ಗೆ ಭಾಷಣ ಮಾಡಿದ್ದು.

ಸನ್ ೧೮೩೯ನೆಯ ಇಸವಿಯ ಜೂನ ತಿಂಗಳಿನ ೧೪ನೆಯ ತಾರೀಖಿನ ದಿವಸ ಮಂತ್ರಿಮಂಡಲದವರು 'ರಾಷ್ಟ್ರೀಯ ಶಿಕ್ಷಣವು' ಎಂಬ ವಿಷಯವನ್ನು ಪಾರ್ಲಮೆಂಟ್ ಸಭೆಯಲ್ಲಿ ವಿಚಾರಕ್ಕಾಗಿ ತಂದರು. 'ಎಲ್ಲ ಪ್ರಜೆಗಳ ಮಕ್ಕಳಿಗೆ ಶಿಕ್ಷಣವನ್ನೀಯುವದು ಸರಕಾರದವರ ಕರ್ತವ್ಯವೋ ಹೇಗೆ' ಎಂಬದೊಂದು ಅದರೊಳಗಿನ ಪ್ರಶ್ನವಿತ್ತು. ಇದರ ಬಗ್ಗೆ ಪಾರ್ಲಮೆಂಟಿನೊಳಗಿನ ಪ್ರಸಿದ್ಧ ಪುರುಷರು ಅನೇಕ ಭಾಷಣಗಳನ್ನು ಮಾ

ಪಿದರು. ಅವರಲ್ಲಿ ಕೆಲವರು, ಯಹೂದೀ ಜನರು ಸಮಗ್ರ ಧರ್ಮಗ್ರಂಥವನ್ನು ಮನ್ನಿಸದೆ ಅದರೊಳಗಿನದೊಂದು ಭಾಗವನ್ನಷ್ಟೇ ಮನ್ನಿಸುವದರಿಂದ ಅವರು ಶುದ್ಧ ಕ್ರೈಸ್ತರಲ್ಲೆಂತಲೂ ಅದುಕಾರಣ ಅವರ ಮಕ್ಕಳ ಶಿಕ್ಷಣದ ಹೊರೆಯನ್ನು ಸರಕಾರದವರು ಹೊರುವದು ತಕ್ಕದ್ದಲ್ಲೆಂತಲೂ ಮಾತನಾಡಿದರು. ಈ ವಿಷಯದ ಮೇಲೆ ಗ್ಲ್ಯಾಡ್‌ಸ್ಟನ್ನನು ಹೀಗೆ ಭಾಷಣಮಾಡಿದನು:—'ಸರಕಾರವೆಂದರೆ ಪ್ರಜೆಗಳ ಇಚ್ಛೆಯು' ಎಂದು ಗ್ರಹಿಸಿದರೆ, ಯಹೂದೀ ಜನರ ಮಕ್ಕಳಿಗೆ ಶಿಕ್ಷಣಕೊಡುವದು ಸರಕಾರದವರ ಕರ್ತವ್ಯವಾಗಿದೆ. ಒಂದು ವೇಳೆ ಸರಕಾರವೆಂದರೆ ವಿಚಾರವುಳ್ಳ, ಬುದ್ಧಿಯುಳ್ಳ ಮತ್ತು ಮನಸ್ಸಾಕ್ಷಿಯುಳ್ಳ ಒಂದು ಸಂಸ್ಥೆಯಾಗಿದೆಂದು ಗ್ರಹಿಸಿದರೆ ಮತ್ತು ಅದು ತನ್ನ ಮನಸ್ಸಾಕ್ಷಿಯ ವಿರುದ್ಧವಾಗಿ ವರ್ತಿಸುವದು ಅನುಚಿತವೆಂದು ಭಾವಿಸಿದರೆ, ಯಹೂದೀ ಜನರ ಮಕ್ಕಳಿಗೆ ಶಿಕ್ಷಣಕೊಡುವದು ಸರಕಾರದವರ ಕರ್ತವ್ಯವಾಗಿದೆಂದು ಹೇಳಲಾಗದು. ಈ ಮೇರೆಗೆ ಅವನು ಈ ವಿಷಯದ ಮೇಲೆ ಇಬ್ಬಗೆಯಾಗಿ ಭಾಷಣ ಮಾಡಿದನು. ಅವನ ಈ ಅಭಿಪ್ರಾಯಗಳನ್ನು ಕುರಿತು ಸೂಕ್ಷ್ಮ ರೀತಿಯಿಂದ ವಿಚಾರಮಾಡಿದರೆ, ಅವನ ಮನಸ್ಸು ಪೂರ್ವಸಂಪ್ರದಾಯಾಭಿಮಾನಿಗಳ (ಕಾನ್‌ಸರ್ವೇಟಿವ್) ಪಕ್ಷದಿಂದ ಸುಧಾರಣಾವಾದಿಗಳ (ಲಿಬರಲ್) ಪಕ್ಷದ ಕಡೆಗೆ ಮೆಲ್ಲಮೆಲ್ಲನೆ ಒಲೆಯಲಾರಂಭಿಸಿತ್ತೆಂದು ತಿಳಿಯುವದು.

ಗ್ಲ್ಯಾಡ್‌ಸ್ಟನ್ನನ ಮದುವೆಯು, ೧೮೩೯.

ಈ ಚರಿತ್ರೆಯಲ್ಲಿ ಸನ್ ೧೮೩೯ನೆಯ ವರ್ಷವು ಎರಡನೆಯದೊಂದು ವಿಶೇಷ ಸಂಗತಿಯಗೋಸ್ಕರ ಬಹು ಮಹತ್ವವುಳ್ಳದ್ದಾಗಿದೆ. ಅದು ರಾಜಕೀಯ ಸಂಬಂಧದ್ದಲ್ಲ; ಆದರೆ ಗ್ಲ್ಯಾಡ್‌ಸ್ಟನ್ನನ ಮನೆತನದ ಸಂಬಂಧದ್ದು. ಇದೇ ವರ್ಷದಲ್ಲಿ ಅವನು (Catherine Glynne) ಕ್ಯಾಥರಾಯಿನ್ ಗ್ಲೈನಿ ಎಂಬವಳನ್ನು ಮದುವೆಯಾದನು. ಅವಳು ವೇಲ್ಸಪ್ರಾಂತಕ್ಕೆ ಸೇರಿದ (Flintshire) ಫ್ಲಿಂಟ್‌ಷಾಯರದೊಳಗಿನ (Hawarden Castle) ಹವಾರ್ಡೀನ್ ಕಾಸಲ್ಲದ ಒಡೆಯನಾದ (Sir Stephen Richard Glynne) ಸರ್ ಸ್ಟೀಫನ್ ರಿಚರ್ಡ ಗ್ಲೈನಿ ಎಂಬ ಜಮೀನುದಾರನ ಮಗಳು. ಗ್ಲ್ಯಾಡ್‌ಸ್ಟನ್ನನು ಸಾರ್ವಜನಿಕ ಕೃತ್ಯಗಳಲ್ಲಿ ದಕ್ಷನಾಗಿದ್ದಂತೆ ಅವಳು ಪರೋಪಕಾರದಲ್ಲಿ ದಕ್ಷಳಾಗಿದ್ದಳು. ಅವಳು ಪತಿಭಕ್ತಿಪರಾಯಣಳೂ ವಿನಯಗುಣಸಂಪನ್ನಳೂ ಕುಲೀನಳೂ ಸುಂದರಳೂ ಧರ್ಮಿಷ್ಠಳೂ ಸುಶಿಕ್ಷಿತಳೂ ವ್ಯವಹಾರ ಚತುರಳೂ ಆಗಿದ್ದಳು. ಸಾರಾಂಶ ಅವಳು ಗ್ಲ್ಯಾಡ್‌ಸ್ಟನ್ನನಿಗೆ ಒಪ್ಪುವ ಅರ್ಧಾಂಗಿನಿಯೇ ಆಗಿದ್ದಳು. ಕೆಳಗಿನ ಪದ್ಯದಲ್ಲಿ ಒಬ್ಬ ಕವಿಯು ಹೇಳುವ ಮೇ

ರೆಗೆ ತಕ್ಕ ಹೆಂಡತಿ ಸಿಗುವುದು ಪೂರ್ವ ಪುಣ್ಯದ ಫಲವಾಗಿದೆಂಬಲ್ಲಿ ಅಣುಮಾತ್ರವು ಸಂಶಯವಿಲ್ಲ.

ಕಂದ ॥ ಪತಿಭಕ್ತಿ ವಿನಯಶೀಲಂ ।
ಚಿತೆ ಕರುಣಾಕೋಶೆ ಪರಹಿತೋತ್ಸುಕೆ ವಿಮಲ ॥
ಸ್ಮಿತೆ ಸುಕರಕಾರ್ಯಚತುರೆ ಸು ।
ದತಿ ಹೆಂಡತಿ ದೊರೆವಳಾತ್ಮ ಸುಕೃತದ ಫಲದಿಂ ॥ ೧ ॥

ಮುಂದೆ ಅವಳ ತಂದೆಯು ತೀರಿಕೊಳ್ಳಲು, ಅವನ ಎಲ್ಲ ಆಸ್ತಿಯು ಅವಳ ಪಾಲಾಯಿತು, ಅವಳಿಂದ ಅದು ಗ್ಲ್ಯಾಡ್‌ಸ್ಟನ್ನನ ವಶವಾಯಿತು. ಆ ಮೇಲೆ ಅವನು ಹವಾರ್ಡಿನ್ ಕಾಸಲ್ಲದಲ್ಲಿಯೇ ಕುಟುಂಬ ಸಹಿತವಾಗಿ ಇರಹತ್ತಿದನು.

ಗ್ಲ್ಯಾಡ್‌ಸ್ಟನ್ನನು ಪಾರ್ಲಮೆಂಟಿನಲ್ಲಿ ಹೆಸರು ಪಡೆದದ್ದು.

ಈ ಸಮಯದಲ್ಲಿ ಗ್ಲ್ಯಾಡ್‌ಸ್ಟನ್ನನ ಶುಭ ಗ್ರಹಗಳೆಲ್ಲ ಕೂಡಿ ಬಂದವೆಂದು ಹೇಳಲು ಅಡ್ಡಿ ಇಲ್ಲ. ಯಾಕೆಂದರೆ, ಅವನು ತನ್ನ ಬೆಳಕನ್ನು ಪಾರ್ಲಮೆಂಟ್ ಸಭೆಯಲ್ಲಿ ಒಳಿತಾಗಿಯೇ ಕೆಡವಿದನು. ದೊಡ್ಡ ದೊಡ್ಡ ವಿದ್ವಾನ್ ಜನರ ಬಾಯಿಯಿಂದ ಅವನ ಹೆಸರು ಮೇಲಿಂದ ಮೇಲೆ ಹೊರಡಹತ್ತಿತು. ಅವನು ಒಂದಿಲ್ಲೊಂದು ದಿನ ಉಚ್ಚಸ್ಥಳಕ್ಕೆ ಏರತಕ್ಕವನೇ ಎಂದು ಪ್ರತಿಯೊಬ್ಬರು ಹೇಳತೊಡಗಿದರು. ಅವನು ಪಾರ್ಲಮೆಂಟ್ ಸಭೆಯಲ್ಲಿ ಮಾತನಾಡಲಿಕ್ಕೆ ಎದ್ದುನಿಂತ ಕೂಡಲೆ ಸಭಾಸದರಲ್ಲಿ ಅವನ ಭಾಷಣವನ್ನು ಕೇಳುವ ಅವಲವಿಕೆಯು ಹುಟ್ಟಿ, ಅವರು ಅದನ್ನು ಚಿತ್ತಗೊಟ್ಟು ಆಲಿಸಹತ್ತಿದರು. ಅವನ ಭಾಷಣವನ್ನು ಕಿವಿಮುಟ್ಟ ಕೇಳಿದ ಒಬ್ಬ ಗ್ರಂಥಕರ್ತನು ಅದನ್ನು ಬಣ್ಣಿಸಿರುವದು ಹೇಗೆಂದರೆ :—“ಗ್ಲ್ಯಾಡ್‌ಸ್ಟನ್ನನು ಬಲು ಚಲುವನು. ಅವನ ಮುಖಮುದ್ರೆಯು ಮೋಹಕವೂ ವಿಶಾಲಬುದ್ಧಿಯ ಲಕ್ಷಣಗಳುಳ್ಳದ್ದೂ ಆಗಿದೆ. ಅವನ ಹಾಳತವಾದ ನಿಲುವು, ಅಂದವಾದ ಮೈಕಟ್ಟು, ತೇಜಃಪುಂಜವಾದ ಕಣ್ಣುಗಳು, ಅಂಬರದ ಮಿಂಚಿನ ಪರಿ ಸುತ್ತಲೂ ಪರಿದಾಡುವ ಚಂಚಲ ದೃಷ್ಟಿಯು, ಸಮಯೋಚಿತವಾಗಿ ಬದಲಾಗುವ ಮುಖಚರ್ಯೆಗಳು, ತಕ್ಕ ಅಂಗವಿಕ್ಷೇಪಗಳು ಅವನಿಗೆ ವಿಶೇಷ ಸಹಾಯಕಾರಿಗಳಾಗಿರುವವು. ಅವನು ವಾಕ್ಕೋವಿದನಾಗಿರುವನು. ಅವನ ಭಾಷಣವು ಒಂದು ದೊಡ್ಡ ಪ್ರವಾಹದಂತೆ ಒಂದೇಸಮನೆ ಸಾಗುವದು. ಪಾರ್ಲಮೆಂಟಿನ ಸಭಾಸದರೆಲ್ಲರು ಅದನ್ನು ಲಕ್ಷಗೊಟ್ಟು ಕೇಳುವರು. ಅವನಿಗೆ ಯೋಗ್ಯ ಸನ್ಮಾನಗಳನ್ನೀಯುವರು. ಅವನು ದೀರ್ಘೋದ್ಯೋಗಿಯಾಗಿರುವನು. ಅವನು ತನ್ನ ಕೆಲಸಗಳನ್ನೆಲ್ಲ ಹೊತ್ತುಹೊತ್ತಿಗೂ ಚೆನ್ನಾಗಿಯೂ ಮಾಡುವನು” ಈ ವರ್ಣನೆಯು ಅಕ್ಷರಶಃ ದಿಟವಾಗಿರುತ್ತದೆ. ಇವೆಲ್ಲ ಕಾರಣಗಳಿಂದ ಅವನು ತನ

ಚಿಕ್ಕ ಹರಿಯದಲ್ಲಿಯೇ ಕೆಲವು ಹೊಟ್ಟೆಕಿಚ್ಚಿನ ಜನರ ಕಣ್ಣೊಳಗೆ ಒತ್ತಲಾರಂಭಿಸಿದನು. (Disraeli) ಡಿಝುರಾಯಲೀ ಎಂಬ ರಾಜ್ಯಕಾರ್ಯ ಧುರಂಧರನಲ್ಲಿ (ಮುಂದೆ Lord Beaconsfield ಲಾರ್ಡ ಬೀಕನ್ಸ್‌ಫೀಲ್ಡನೆಂಬ ಪದವಿಯನ್ನು ಪಡೆದವನಲ್ಲಿ) ಸಹ ಅವನ ವಿಷಯವಾಗಿ ಮತ್ಸರಬುದ್ಧಿಯು ಹುಟ್ಟಿತು. ಅವನು ಇದೇ ಸಮಯದಲ್ಲಿ ತನ್ನ ತಂಗಿಗೆ ಬರೆದದ್ದೊಂದು ಪತ್ರದಲ್ಲಿ "ಈ ತರುಣನಿಂದ ಮುಂದೆ ಯಾವುದೊಂದು ವಿಶೇಷ ಕಾರ್ಯಭಾಗವಾಗಲಾರದು" ಎಂದು ಕಾಣಿಸಿರುವನು. ಆದರೆ ಕೆಲವು ವರ್ಷಗಳಲ್ಲಿಯೇ ಗ್ಲ್ಯಾಡ್‌ಸ್ಟನ್ನನು ಅದೇ ಡಿಝುರಾಯಲೀಯ ಎಲುಬನ್ನು ರಾಜಪ್ರಕರಣಗಳಲ್ಲಿ ಚೆನ್ನಾಗಿ ಸಡಲಿಸಿದನು.

ಚೀನದೇಶದ ಕೂಡ ಎಸಗಿದ ಯುದ್ಧವನ್ನು ಕುರಿತು ಗ್ಲ್ಯಾಡ್‌ಸ್ಟನ್ನನು ಭಾಷಣ ಮಾಡಿದ್ದು, ೧೮೪೦, ಎಪ್ರಿಲ ೮.

ಇಂಗ್ಲಂಡದ ಸರಕಾರದವರು ಈಸ್ಟ-ಇಂಡಿಯಾ-ಕಂಪನಿಯವರಿಗೆ ಕೊಟ್ಟಿದ್ದ ಸನದಿನ ಮುದ್ದತು ಸನ್ ೧೮೩೪ನೆಯ ಇಸವಿಯಲ್ಲಿ ತೀರಲು, ಅವರಿಗೆ ವ್ಯಾಪಾರದ ಹೊಸ ಸನದನ್ನು ಕೊಟ್ಟರು. ಈ ಸನದಿನಿಂದ ಇಂಗ್ಲಂಡಕ್ಕೂ ಪೂರ್ವ ದಿಕ್ಕಿನಲ್ಲಿರುವ ದೇಶಗಳಿಗೂ ನಡೆಯುತ್ತಿದ್ದ ವ್ಯಾಪಾರದ ಮೇಲಿದ್ದ ಪ್ರತಿಬಂಧಗಳೆಲ್ಲ ತೆಗೆದು ಹಾಕಲ್ಪಟ್ಟದ್ದರಿಂದ, ಆ ದೇಶಗಳ ಕೂಡ ಬೇಕಾದವರು ವ್ಯಾಪಾರ ನಡೆಯಿಸಲು ಮಾರ್ಗವಾಯಿತು. ಇದರಿಂದ ಅಫೀಮಿನ ವ್ಯಾಪಾರವು ಹಿಂದುಸ್ಥಾನಕ್ಕೂ ಚೀನ ದೇಶಕ್ಕೂ ಭರದಿಂದ ಸಾಗಹತ್ತಿತು. ಹಿಂದುಸ್ಥಾನದಲ್ಲಿ ಹೇರಳವಾಗಿ ಹುಟ್ಟುತ್ತಿರುವ ಅಫೀಮನ್ನು ಇಂಗ್ಲಿಷ ವ್ಯಾಪಾರಸ್ಥರು ಚೀನ ದೇಶಕ್ಕೆ ಒಯ್ದು ಮಾರಾಟ ಮಾಡಿ, ಅದರಿಂದ ವಿಶೇಷ ಲಾಭವನ್ನು ಪಡೆಯಲಾರಂಭಿಸಿದರು. ಈ ಮಾದಕ ಪದಾರ್ಥದಿಂದ ತಮ್ಮ ದೇಶದ ದುಡ್ಡು ಹಾಳಾಗಿ, ದೊಡ್ಡ ದೊಡ್ಡ ಕುಟುಂಬದವರು ಸಹ ದರಿದ್ರರಾಗುತ್ತ ನಡೆದಿರುವದನ್ನೂ ದುರ್ವ್ಯಸನಗಳೂ ಪಾಪದ ಕೃತ್ಯಗಳೂ ಜನರಲ್ಲಿ ಕ್ರಮೇಣ ಬೆಳೆಯುತ್ತಿರುವದನ್ನೂ ಅಲ್ಲಿಯ ಪ್ರಮುಖ ಜನರೂ ಸರಕಾರದವರೂ ಕಂಡು, ಈ ವ್ಯಾಪಾರವನ್ನು ನಿಲ್ಲಿಸಿ ಬಿಡುವ ಉದ್ಯೋಗಕ್ಕೆ ಹತ್ತಿದರು. ಇದರಿಂದ ಇಂಗ್ಲಿಷ್ ವರ್ತಕರಿಗೂ ಚೀನ ದೇಶದವರಿಗೂ ಮನಸ್ತಾಪವುಂಟಾಗಿ ಕೈಗೆಕೈ ಹತ್ತುವ ಪ್ರಸಂಗವು ಒದಗಿತು. ಈ ಸಮಯದಲ್ಲಿ ಇಂಗ್ಲಂಡದ ದೊರೆತನದವರು ಇಂಗ್ಲಿಷ್ ವ್ಯಾಪಾರಸ್ಥರ ಪಕ್ಷವನ್ನು ಹಿಡಿದರು. ಈ ಪ್ರಕರಣವು ಬೆಳೆಯುತ್ತ ಬೆಳೆಯುತ್ತ ಹೋಗಿ, ಕಟ್ಟಕಡೆಗೆ ಇಂಗ್ಲಿಷ್ ಮತ್ತು ಚೀನ ಸರಕಾರಗಳ ನಡುವೆ ಯುದ್ಧವನ್ನೇ ಹೂಡಿತು. ಈ ಹೊತ್ತಿಗೆ ಪಾರ್ಲಮೆಂಟಿನಲ್ಲಿ, ಈ ಪ್ರಕರಣವನ್ನು ಕುರಿತು ಬಹು ಜನ ಪ್ರಸಿದ್ಧ ಗೃಹಸ್ಥರು ಭಾಷಣಗಳನ್ನು ಮಾಡಿದರು. ಅವರಲ್ಲಿಯ ಒಬ್ಬನು ಎಂದರೆ ಪ್ರಸಿದ್ಧ ಇತಿಹಾಸಕಾರ

ನಾದ (Lord Macaulay) ಲಾರ್ಡ್ ಮೆಕಾಲೆಯು ಒಳ್ಳೆ ಆವೇಶಯುಕ್ತ ಭಾಷಣ ಮಾಡಿ, ಈ ಯುದ್ಧವನ್ನು ನಡೆಸುವದೇ ಇಂಗ್ಲಂಡಕ್ಕೆ ಶ್ರೇಯಸ್ಕರವಾದದ್ದೆಂದು ಹೇಳಿದನು. ಅವನ ಭಾಷಣವಾದ ಮರುದಿನವೇ (ಅಂದರೆ ಸನ್ ೧೮೪೦ ನೆಯ ಇಸವಿಯ ಏಪ್ರಿಲ ತಿಂಗಳಿನ ೮ ನೆಯ ತಾರೀಖಿನ ದಿವಸ) ಗ್ಲ್ಯಾಡ್‌ಸ್ಟನ್ನನು ಪಾರ್ಲಮೆಂಟಿನಲ್ಲಿ ಭಾಷಣ ಮಾಡಿದನು. ಆ ಭಾಷಣದ ತಾತ್ಪರ್ಯವೇನೆಂದರೆ:— "ಲಾರ್ಡ್ ಮೆಕಾಲೆ ದೊರೆಗಳು ನಿನ್ನಿನ ದಿವಸ ತಮ್ಮ ಭಾಷಣದಲ್ಲಿ (Canton) 'ಕಾಂತಾನ್ ಬಂದರದ ದಂಡೆಯ ಮೇಲೆ ನಮ್ಮ ಬ್ರಿಟಿಷ್ ನಿಶಾನೆಯು ವೈಭವದಿಂದ ಹಾರಾಡುವದೂ ಅದನ್ನು ನೋಡಿ ನಮ್ಮ ನಾವಿಗರ ಭುಜಗಳು ಸ್ಫುರಣಗೊಳ್ಳುವದೂ ಆ ಪತಾಕೆಯ ಶ್ರೇಷ್ಠತ್ವವು ಪೃಥ್ವಿಯೊಳಗಿನ ಪ್ರತಿಒಂದು ದೇಶದಲ್ಲಿ ಉಂಟೆಂದು ಅವರಿಗೆ ತಿಳಿಯುವದೂ ಅತ್ಯಾನಂದದ ಸಂಗತಿಗಳಾಗಿವೆ' ಎಂದು ಹೇಳಿದರು. ಈ ಮಾತು ದಿಟವಾದದ್ದು; ಇದರ ಬಗ್ಗೆ ವಾದವಿಲ್ಲ. ಆದರೆ, ಆ ನಮ್ಮ ಪತಾಕೆಯು ನ್ಯಾಯಪಕ್ಷಪಾತದ ಕೃತ್ಯಗಳಿಗಾಗಿ, ಛಲನಿವಾರಣೆಯ ಸತ್ಕಾರ್ಯಗಳಿಗಾಗಿ, ಸರ್ವಸಾಮಾನ್ಯವಾದ ಹಕ್ಕುಗಳನ್ನು ಸಂರಕ್ಷಿಸುವದಕ್ಕಾಗಿ ಮಾನಾರ್ಹವಾದ ವ್ಯಾಪಾರ ಉದ್ದಿಮೆಗಳನ್ನು ಪ್ರೋತ್ಸಾಹಗೊಳಿಸುವದಕ್ಕಾಗಿ ತನ್ನ ತಲೆಯನ್ನೆತ್ತಿದ ಪ್ರಸಂಗದಲ್ಲಿ, ನಮ್ಮ ಇಂಗ್ಲಿಷ್ ಜನರ ಬಾಹುಗಳಲ್ಲಿ ಯುದ್ಧಸ್ಫುರಣವು ಹುಟ್ಟಿದರೆ, ಅವರ ಮನಸ್ಸಿನಲ್ಲಿ ಸಂತೋಷವು ಜನಿಸಿ, ಅದು ಉಕ್ಕೇರಿಬಂದರೆ, ಅವು ಮಾತ್ರ ಆನಂದದಾಯಕ ಸಂಗತಿಗಳೆಂದು ನಾವು ತಿಳಿದುಕೊಳ್ಳಬೇಕು. ಆದರೆ ಈಗ ಆ ನಮ್ಮ ಧ್ವಜವು ಅಪಕೀರ್ತಿಗೆ ಗುರಿಯಾದ ಒಂದು ಕಳ್ಳ ವ್ಯಾಪಾರದ ಬೆನ್ನುಕಟ್ಟಿ, ಕಾಂತಾನ್ ಬಂದರದ ದಂಡೆಯ ಮೇಲೆ ತನ್ನ ತಲೆಯನ್ನು ಎತ್ತಿರುತ್ತದೆ. ಈಗ ಅದು ಅಹಂಕಾರದಿಂದಲೂ ಅಟ್ಟಹಾಸದಿಂದಲೂ ಸುಳಿಗಾಳಿಯಲ್ಲಿ ಅತ್ತಿತ್ತ ಹಾರಾಡಹತ್ತಿದೆ. ಅದನ್ನು ನೋಡಿ, ನಮ್ಮ ಸೇನಿಕರು ಆವೇಶಯುಕ್ತರಾಗುವ ಬದಲು ಮೈಮುಳ್ಳಿಟ್ಟು ಗದಗಡನೆ ನಡುಗಿ ನೆಲಹಿಡಿಯುವದೇ ಲೇಸು; ಅವರು ಈ ಹೊತ್ತಿಗೆ ಅದರ ಕಡೆಗೆ ಕಣ್ಣೆತ್ತಿ ಸಹ ನೋಡದೆ, ತಮ್ಮ ದೃಷ್ಟಿಯನ್ನು ಮತ್ತೊಂದೆಡೆಗೆ ತಿರುಗಿಸಬೇಕು." ಈ ಭಾಷಣದಿಂದ ಇಂಗ್ಲಂಡದ ಪವಿತ್ರವಾದ ಕೀರ್ತಿಯನ್ನು ಕಾಪಾಡಿಕೊಳ್ಳುವಲ್ಲಿ ಗ್ಲ್ಯಾಡ್‌ಸ್ಟನ್ನನು ಎಷ್ಟು ಉತ್ಕಟೇಚ್ಛೆಯುಳ್ಳವನಾಗಿದ್ದನೆಂಬದು ಸರಸಾಗಿ ತಿಳಿಯುವದು.

ಗ್ಲ್ಯಾಡ್‌ಸ್ಟನ್ನನು "ಅರಸನು ಮತ್ತು ಧರ್ಮವು"

ಸನ್ ೧೮೩೮ ನೆಯ ಇಸವಿಯಲ್ಲಿ ಗ್ಲ್ಯಾಡ್‌ಸ್ಟನ್ನನು "ಅರಸನು ಮತ್ತು ಧರ್ಮವು" ಎಂಬ ಹೆಸರಿನ ಪುಸ್ತಕವನ್ನು ಬರೆದು ಪ್ರಕಟಿಸಿದನು. ಅದರಲ್ಲಿ ಅವನು, ಅರಸನು ಧರ್ಮವನ್ನು ಕಾಪಾಡಬೇಕು; ಇಲ್ಲದಿದ್ದರೆ ಅವನು ಕೇಡಿಗೊ

"ಧರ್ಮ ತತ್ವಗಳೂ ಅವುಗಳಿಂದಾಗತಕ್ಕ ಫಲಗಳೂ" ಎಂಬ ಪುಸ್ತಕಗಳನ್ನು ಪ್ರಕಟಿಸಿದ್ದು.

ಳಗಾಗುವನು ಎಂದು ಪ್ರತಿಪಾದಿಸಿರುವನು. ಈ ಪುಸ್ತಕವು ಜನರಿಗೆ ಬಹು ಪ್ರಿಯವಾದದ್ದರಿಂದ, ಅವನು ಮೂರು ವರ್ಷಗಳಲ್ಲಿಯೇ ಅದನ್ನು ನಾಲ್ಕು ಸಾರೆ ಮುದ್ರಿಸಿ ಪ್ರತಿ ಒಂದು ಸರ್ತಿಗೆ ಲಕ್ಷಗಟ್ಟಲೆ ಪ್ರತಿಗಳನ್ನು ತೆಗೆಯಿಸಬೇಕಾಯಿತು. ಅದು ದೊಡ್ಡ ದೊಡ್ಡ ವಿದ್ವಾಂಸರ ದೃಷ್ಟಿಯನ್ನು ತನ್ನ ಕಡೆಗೆ ತಿರುಗಿಸಿಕೊಂಡಿತು. ಅವರು ಅದರೊಳಗಿನ ಸಿದ್ಧಾಂತಗಳನ್ನೂ ಅವುಗಳನ್ನು ಸಿದ್ಧಮಾಡುವಲ್ಲಿ ಅವನು ತೋರಿಸಿದ್ದ ಜಾಣ್ಮೆಯನ್ನೂ ವಿಷಯ ಪ್ರತಿಪಾದನದ ಚಾತುರ್ಯವನ್ನೂ ಐರ್ಲಂಡದೊಳಗಿನ ಧರ್ಮಖಾತೆಯ ವಿಷಯವಾಗಿ ಕೆಲವೆಡೆಗಳಲ್ಲಿ ಹೊರಗೆಡವಿದ್ದ ವಿಚಾರಗಳನ್ನೂ ಅಲ್ಲಲ್ಲಿ ವ್ಯಕ್ತಪಡಿಸಿದ್ದ ಧರ್ಮನಿಷ್ಠೆಯನ್ನೂ ಸತ್ಪಕ್ಷಪಾತವನ್ನೂ ನೋಡಿ ಆನಂದಾಶ್ಚರ್ಯಗಳಲ್ಲಿ ಮುಳುಗಿದರು. ಅವನ ಈ ಗ್ರಂಥದ ಮೇಲೆ ಪ್ರಸಿದ್ಧ ಲೇಖಕನಾದ ಲಾರ್ಡ್ ಮೆಕಾಲೆಯು ಟೀಕಾರೂಪವಾಗಿ ದೊಡ್ಡದೊಂದು ನಿಬಂಧವನ್ನು ಬರೆದನು. ಗ್ಲ್ಯಾಡ್‌ಸ್ಟನ್ನನ ಈ ಉದ್ಯೋಗಕ್ಕೆ ಅವನ ಸಂಪೂರ್ಣ ಆಶ್ರಯದಾತನೂ ಇಂಗ್ಲಂಡದ ದರಬಾರಿನೊಳಗಿನ ಪ್ರಮುಖ ಪುರುಷರಲ್ಲಿ ಒಬ್ಬನೂ ಆದ ಸರ್ ರಾಬರ್ಟ್ ಪೀಲನು ಸಹ ಮೆಚ್ಚಲಿಲ್ಲ. ಅವನು ಒಂದು ಸಾರೆ "ರಾಜ್ಯದಾಡಳಿತದ ಕೃತ್ಯಗಳಲ್ಲಿ ಏರತಕ್ಕಷ್ಟು ಸಾಮರ್ಥ್ಯವೂ ತೇಜಸ್ಸೂ ತನ್ನಲ್ಲಿ ಪರಿಪೂರ್ಣವಾಗಿರುತ್ತಿರಲು, ಇಂತಹ ಪುಸ್ತಕವನ್ನು ಗ್ಲ್ಯಾಡ್‌ಸ್ಟನ್ನನು ಯಾಕೆ ಬರೆದನೋ ತಿಳಿಯದು" ಎಂದು ನುಡಿದನೆಂದು ಹೇಳುತ್ತಾರೆ. ಗ್ಲ್ಯಾಡ್‌ಸ್ಟನ್ನನು ಇಷ್ಟಕ್ಕೇ ಬಿಡದೆ, ಸನ್ ೧೮೪೦ ನೆಯ ಇಸವಿಯಲ್ಲಿ "ಧರ್ಮ ತತ್ವಗಳೂ ಅವುಗಳಿಂದಾಗತಕ್ಕ ಫಲಗಳೂ" ಎಂಬ ಮತ್ತೊಂದು ಪುಸ್ತಕವನ್ನು ಬರೆದು ಪ್ರಸಿದ್ಧಿಸಿದನು. ಈ ಗ್ರಂಥಗಳಿಂದ ಅವನ ಮನಸ್ಸಿನ ಒಲವು ಧರ್ಮದ ಕಡೆಗೆ ಎಷ್ಟಿತ್ತೆಂಬದು ವಾಚಕರ ಲಕ್ಷದಲ್ಲಿ ಸುಲಭವಾಗಿಯೇ ಬರಬಹುದು.

ಸನ್ ೧೮೪೧ ನೆಯ ಇಸವಿಯಲ್ಲಿ ಅಧಿಕಾರದಲ್ಲಿದ್ದ ಲಿಬರಲ್ ಪಕ್ಷದವರು ಜನರ ವಿಶ್ವಾಸವನ್ನು ಕಳಕೊಂಡಿದ್ದರಿಂದ, ಪಾರ್ಲಮೆಂಟಿನ ಪ್ರತಿನಿಧಿಗಳು ಹೊಸದಾಗಿ ಆರಿಸಲ್ಪಟ್ಟರು. ಈ ಸಮಯದಲ್ಲಿ ಗ್ಲ್ಯಾಡ್‌ಸ್ಟನ್ನನು ಎಂದಿನಂತೆ ನ್ಯೂಆರ್ಕದ ಪಕ್ಷದಿಂದ ಪಾರ್ಲಮೆಂಟನ್ನು ಸೇರಿದನು. ಈ ಆಯ್ಕೆಯಲ್ಲಿ ಕಾನ್‌ಸರ್ವೇಟಿವ್ ಪಕ್ಷದ ಬಹು ಜನ ಪ್ರತಿನಿಧಿಗಳು ಬರಲು, ಸರ್ ರಾಬರ್ಟ್ ಪೀಲನು ಮುಖ್ಯ ಮಂತ್ರಿಯಾದನು. ಅವನು ಲಾರ್ಡ್ ಮೆಕಾಲೆಯ ಮಾತಿಗೆ ಕಿವಿಗೊಡದೆ, ತನ್ನ ಶಿಷ್ಯ

ಗ್ಲ್ಯಾಡ್‌ಸ್ಟನ್ನನು ವ್ಯಾಯ

ಸ್-ಪ್ರೆಸಿಡೆಂಟ್-ಆಫ್-ದಿ ಬೋರ್ಡ್-ಆಫ್-ಟ್ರೇಡ್ ಮತ್ತು ಮಾಸ್ಟರ್-ಆಫ್-ದಿ-ಮಿಂಟ್ ಎಂಬೆರಡು ಉದ್ಯೋಗಗಳನ್ನು ಪಡೆದದ್ದು, ೧೮೪೧; ಪರನಾಡುಗಳಿಗೆ ಹೋಗುವ ಯಂತ್ರಗಳ ಮೇಲಿನ ಸುಂಕವನ್ನು ತೆಗೆದುಹಾಕಿದ್ದು, ೧೮೪೩; ಉಗೆಬಂಡಿಯ ಕಾಯಿದೆಯನ್ನು ರಚಿಸಿ, ಆದನ್ನು ಪ್ರಚಾರದಲ್ಲಿತಂದದ್ದು, ೧೮೪೪.

ನೂ ಗೆಳೆಯನೂ, ನಿಷ್ಕಲಂಕ ಗುಣದವನೂ ಆದ ತರುಣ ಗ್ಲ್ಯಾಡ್‌ಸ್ಟನ್ನನಿಗೆ (Vice President of the Board of Trade) ವಾಯಿಸ್ ಪ್ರೆಸಿಡೆಂಟ್-ಆಫ್-ದಿ-ಬೋರ್ಡ್-ಆಫ್-ಟ್ರೇಡ್ ಮತ್ತು (Master of the Mint) ಮಾಸ್ಟರ್-ಆಫ್ ದಿ-ಮಿಂಟ್ ಎಂಬ ಉದ್ಯೋಗಗಳನ್ನು ಕೊಟ್ಟನು. ಈ ಮೇರೆಗೆ ಎರಡು ಉದ್ಯೋಗಗಳನ್ನು ಒಮ್ಮೆಲೆ ಅವನಿಗೆ ಕೊಟ್ಟದ್ದನ್ನು ಉದ್ದೇಶಿಸಿ (Miss Williams Wynn) ಮಿಸ್ ವಿಲಿಯಮ್ಸ ವಿನ್ ಎಂಬವಳು ಬರೆದಿರುವದೇನೆಂದರೆ:— "ಗ್ಲ್ಯಾಡ್‌ಸ್ಟನ್ನನ ವಿಚಾರಗಳನ್ನು ಸರ್ವದಾ ವ್ಯವಹಾರಿಕ ವಿಷಯಗಳಲ್ಲಿಯೇ ತೊಡಗಿಸುವದಕ್ಕೂ ಅವನಿಗೆ ಮೈನುರಿ ಕೆಲಸಕೊಟ್ಟು, ಅವನ ಜ್ಞಾನ ತಂತುಗಳು ಧರ್ಮ ವಿಚಾರಗಳಲ್ಲಿ ತೊಡಗಿ ತೊಂದರೆ ಪಡದಂತೆ ಮಾಡುವದಕ್ಕೂ ಅವನಿಗೆ ಈ ಎರಡು ಉದ್ಯೋಗಗಳನ್ನು ಕೊಟ್ಟರುವರಂತೆ; ಆದರೆ ಇದರಿಂದ ಅವರ ಬಯಕೆಯು ಅಲ್ಪವೂ ಈಡೇರದು. ಯಾಕೆಂದರೆ ಅತ್ಯಗಾಧ ಕಲ್ಪನಾಶಕ್ತಿಯುಳ್ಳ ಗ್ಲ್ಯಾಡ್‌ಸ್ಟನ್ನನ ಮನಸ್ಸು ವ್ಯವಹಾರಿಕ ವಿಷಯುಗಳಿಗಿಂತ ಧರ್ಮ ವಿಷಯಕ್ಕೆ ಹೆಚ್ಚು ಒಲೆಯುವದು ಸ್ವಭಾವಿಕವು." ಈ ಗುಣ ಪರೀಕ್ಷೆಯ ಲೇಖವನ್ನು ಬರೆದವಳು ಇನ್ನೂ ಆಯುಷ್ಯ ವರ್ಷ ಹೆಚ್ಚಿಗೆ ಬಾಳಿದ್ದರೆ, ಅವಳು ತನ್ನ ಬರವಣಿಗೆಗೆ ಅನುಗುಣವಾಗಿ ಗ್ಲ್ಯಾಡ್‌ಸ್ಟನ್ನನು ವರ್ತಿಸಿದ್ದನ್ನು ನೋಡಿ ಪರಮಾನಂದಬಡುತ್ತಿದ್ದಳು. ಸರ್ ರಾಬರ್ಟ ಪೀಲನು ಅವನಿಗೆ ಈ ಎರಡು ಉದ್ಯೋಗಗಳನ್ನು ಕೊಟ್ಟದ್ದರ ನಿಜವಾದ ಕಾರಣವೇನೆಂದರೆ:-ಆಗಿನ ರಾಷ್ಟ್ರೀಯ ಆಯುವ್ಯಯದ ಪತ್ರಿಕೆಯ ಶಿಲುಕಿಗೆ ಬಹಳೇ ಕೊರತೆಬಿದ್ದಿತ್ತು; ಅದನ್ನು ಹೊಸ ಕರಗಳನ್ನು ಕಟ್ಟಿ ಬಾಯಿಗೂಡಿಸಬೇಕಾಗಿತ್ತು. ಇಂತಹ ತೊಡಕಿನ ಕೆಲಸಕ್ಕೆ ಆಯುವ್ಯಯುದ ಮರ್ಮವನ್ನು ಚೆನ್ನಾಗಿ ಬಲ್ಲವನು ಬೇಕಾಗಿದ್ದನು. ಇದಲ್ಲದೆ ಟಂಕಶಾಲೆಯ ಮೇಲಧಿಕಾರದ ಕೆಲಸವನ್ನು, ಪ್ರಮಾಣಿಕನೂ ಚಾಣಾಕ್ಷನೂ ಆದ ಗೃಹಸ್ಥನನ್ನು ಹುಡುಕಿ, ಅವನಿಗೆ ಕೊಡಬೇಕಾಗಿತ್ತು. ಈ ಮಹತ್ವದ ಎರಡೂ ಕೆಲಸಗಳನ್ನು ನಿಸ್ತರಿಸುವ ಸಾಮರ್ಥ್ಯವು ಗ್ಲ್ಯಾಡ್‌ಸ್ಟನ್ನನಲ್ಲುಂಟೆಂದು ತಿಳಿದುಕೊಂಡು, ಸರ್ ರಾಬರ್ಟ ಪೀಲನು ಅವುಗಳನ್ನು ಅವನಿಗೆ ಕೊಟ್ಟದ್ದನು. ಗ್ಲ್ಯಾಡ್‌ಸ್ಟನ್ನನು ಇವೆರಡೂ ಬಿಕ್ಕಟ್ಟಿನ ಕೆಲಸಗಳನ್ನು ಸ್ವೀಕರಿಸಿಕೊಂಡು, ತನ್ನ ಮೇಲಾದ ಬುದ್ಧಿ ಸಾಮರ್ಥ್ಯದಿಂದಲೂ ಹಿಂಜರಿಯದ ಧೈರ್ಯದಿಂದಲೂ ಯುಕ್ತಿಪ್ರಯುಕ್ತಿಗಳಿಂದಲೂ ಮುಖ್ಯ ಮಂತ್ರಿಯ ಬಯಕೆಯನ್ನು ತೃಪ್ತಿಗೊಳಿಸಿದ

ನು. ಅವನು ಅಶ್ರಾಂತ ಶ್ರಮಪಟ್ಟು ರಾಷ್ಟ್ರೀಯ ಆಯುವ್ಯಯ ಪತ್ರಿಕೆಯನ್ನು ಸಿದ್ಧಮಾಡಿ, ಅದನ್ನು ಪಾರ್ಲಮೆಂಟ್ ಸಭೆಯಲ್ಲಿ ತಂದು, ಅದರ ಬೆನ್ನುಕಟ್ಟಿ ಸಭಿಕರೊಂದಿಗೆ ನಿಕರದ ವಾದವಿವಾದಗಳನ್ನು ಮಾಡಿ, ಅದನ್ನು ಮಂಜೂರು ಮಾಡಿಸಿದನು. ಆ ಪತ್ರಿಕೆಯ ಆಧಾರದಿಂದ ಅವನು ಆದಾಯದ ಮೇಲಿನ ಕರವನ್ನು ಹೆಚ್ಚಿಸಿದನು. ಅಂದಿನವರೆಗೆ ಸುಂಕವನ್ನು ಕೊಡಬೇಕಾಗುತ್ತಿದ್ದ ೧೨೦೦ ಸರಕುಗಳೊಳಗಿನ ೭೫೦ ಸರಕುಗಳ ಮೇಲಿನ ಸುಂಕವನ್ನು ಕಡಿಮೆ ಮಾಡಿದನು; ಕೆಲವುಗಳ ಮೇಲಿನ ಸುಂಕವನ್ನು ಸಂಪೂರ್ಣವಾಗಿ ತೆಗೆದು ಹಾಕಿದನು. ಆ ಪತ್ರಿಕೆಯ ವಿಷಯವಾಗಿ ಪಾರ್ಲಮೆಂಟಿನಲ್ಲಿ ವಾದವಿವಾದಗಳು ನಡೆದಾಗ್ಗೆ, ಅವನು ೧೨೯ ಸಾರೆ ಭಾಷಣ ಮಾಡಿದನೆಂದು ಹೇಳುತ್ತಾರೆ! ಮುಂದೆ ಎರಡು ವರ್ಷಗಳಲ್ಲಿಯೇ ಅವನು (Board of Trade) ಬೋರ್ಡ್-ಆಫ್-ಟ್ರೇಡಿನ ಅಧ್ಯಕ್ಷನಾದನು. ಈ ಉದ್ಯೋಗದಲ್ಲಿರುವಾಗ, ಅವನು ಪರನಾಡುಗಳಿಗೆ ಹೋಗುವ ಯಂತ್ರಗಳ ಮೇಲಿನ ಸುಂಕವನ್ನು ಸಂಪೂರ್ಣವಾಗಿ ತೆಗೆದುಹಾಕಿದನು. ಮುಂದೆ ಸನ್ ೧೮೪೪ ರಲ್ಲಿ ಉಗಿ ಬಂಡಿಯ ಸಂಬಂಧದ ಕಾಯದೆಯ ಮಸೂದೆಯನ್ನು ಮಾಡಿ, ಅದಕ್ಕೆ ಪಾರ್ಲಮೆಂಟಿನ ಒಪ್ಪಿಗೆಯನ್ನು ಪಡೆದನು. ಈ ಕಾಯದೆಯಿಂದ, ೩ ನೆಯ ತರಗತಿಯ ಪ್ರಯಾಣಸ್ಥರಿಂದ ಪ್ರತಿ ಒಂದು ಮೈಲಿಗೆ ಒಂದು ಪೇನಿಯಂತೆ ಹಣ ತೆಗೆದುಕೊಳ್ಳಬೇಕೆಂತಲೂ ಪ್ರತಿ ಒಬ್ಬನಿಗೆ ೫೬ ಪೌಂಡು ಭಾರವನ್ನು ಹಾಗೆಯೇ ಬಿಟ್ಟುಬಿಡಬೇಕೆಂತಲೂ ಮೂರು ವರ್ಷದೊಳಗಿನ ಮಕ್ಕಳಿಗಾಗಿ ಹಣ ತೆಗೆದುಕೊಳ್ಳಬಾರದೆಂತಲೂ ಹನ್ನೆರಡನೇ ವರ್ಷವು ತುಂಬದ ಹುಡುಗರ ಕಡೆಯಿಂದ ಅರ್ಧ ಹಣ ತೆಗೆದುಕೊಳ್ಳಬೇಕೆಂತಲೂ ಗೊತ್ತಾಯಿತು. ಈ ವ್ಯವಸ್ಥೆಯಿಂದ ಬಡವರಿಗೆ ಬಹು ಪ್ರಯೋಜನವಾಯಿತು. ಇದನ್ನು ಕಂಡು ಅವರು ಗ್ಲ್ಯಾಡ್‌ಸ್ಟನ್ನನನ್ನು ಹಾಡಿಹರಿಸಿದ್ದು ಆಶ್ಚರ್ಯವಲ್ಲ.

ಯಹೂದೀ ಜನರು ಪಾರ್ಲಮೆಂಟನ್ನು ಸೇರಬಹುದೆಂದು ಗ್ಲ್ಯಾಡ್‌ಸ್ಟನ್ನನು ಭಾಷಣ ಮಾಡಿದ್ದು.

ಸನ್ ೧೮೪೫ ನೆಯ ಇಸವಿಯಲ್ಲಿ ಸರ್-ರಾಬರ್ಟ-ಪೀಲನು ಧಾನ್ಯದ ಮತ್ತು ಉಳಿದ ಸರಕುಗಳ ಮೇಲಿನ ಸುಂಕಗಳನ್ನು ಕಡಿಮೆ ಮಾಡುವದಕ್ಕೆ ತನ್ನಿಂದಾದಷ್ಟು ಪ್ರಯತ್ನಿಸಿದನು. ಇದೇ ವರ್ಷ ಐರ್ಲಂಡದವರ ಆಹಾರದ ಮುಖ್ಯ ಪದಾರ್ಥವಾದ ಆಲುಗಡ್ಡೆಯ ಪೈರಿಗೆ ರೋಗ ಹಾಯ್ದು ಕೆಟ್ಟು ಹೋಗಲು, ಜನರು ಭಯಪಟ್ಟು, ಪರದೇಶದ ಧಾನ್ಯ ಮುಂತಾದ ಸರಕುಗಳ ಮೇಲಿನ ನಿರ್ಬಂಧಗಳನ್ನೆಲ್ಲ ತೆಗೆದುಹಾಕಿ, ಅವುಗಳನ್ನು ನಿರಾತಂಕವಾಗಿ ದೇಶದೊಳಗೆ ಬರಗೊಡಬೇಕೆಂದು ಕೂಗಲಾರಂಭಿಸಿದರು. ಇದನ್ನು ಕೇಳಿ ಪೀಲನು ಧಾನ್ಯದ ಮೇಲಿನ ಜಕಾತಿಯನ್ನು ತೆಗೆದುಹಾಕಬೇಕೆಂಬ

ಅಭಿಪ್ರಾಯದ ಒಂದು ಕಾಯದೆಯ ಮಸೂದೆಯನ್ನು ಮಾಡಿ, ಅದನ್ನು ಪಾರ್ಲಮೆಂಟಿನಲ್ಲಿ ತರಬೇಕೆಂದು ಮಂತ್ರಿಮಂಡಲದವರಿಗೆ ಹೇಳಿದನು. ಆದರೆ ಅವರು ಅದಕ್ಕೆ ಒಪ್ಪಲಿಲ್ಲ. ಆದದ್ದರಿಂದ ಅವನು ಮುಖ್ಯಮಂತ್ರಿಯ ಉದ್ಯೋಗಕ್ಕೆ ರಾಜೀನಾಮೆಯನ್ನು ಕೊಟ್ಟು, ಲಾರ್ಡ್ ಜಾನ್ ರಸೆಲ್ಲನಿಗೆ ಆ ಉದ್ಯೋಗವನ್ನು ಕೊಡಬೇಕೆಂದು ರಾಣೀಸಾಹೇಬರಿಗೆ ಸೂಚಿಸಿದನು. ಅವನ ಸೂಚನೆಯನ್ನು ರಾಣೀಸಾಹೇಬರು ಮನ್ನಿಸಿ, ಲಾರ್ಡ್ ಜಾನ್ ರಸೆಲ್ಲನಿಗೆ ಮುಖ್ಯ ಮಂತ್ರಿಯ ಕೆಲಸವನ್ನು ಕೊಟ್ಟರು. ಈ ವರ್ಷದ ಆಯುವಿಕೆಯಲ್ಲಿ ಆಕ್ಸಫರ್ಡ್ ವಿಶ್ವವಿದ್ಯಾಲಯದವರು ಗ್ಲ್ಯಾಡ್‌ಸ್ಟನ್ನನನ್ನು ತಮ್ಮ ಪ್ರತಿನಿಧಿಯಾಗಿ ಆರಿಸಿಕೊಂಡು, ಅವನನ್ನು ಪಾರ್ಲಮೆಂಟ್ ಸಭೆಗೆ ಕಳುಹಿಸಿದ್ದರು. ಈ ಸಮಯದಲ್ಲಿ ಮುಖ್ಯ ಮಂತ್ರಿಯಾದ ಲಾರ್ಡ್ ಜಾನ್ ರಸೆಲ್ಲನು 'ಯಹೂದೀ ಜನರು ಪಾರ್ಲಮೆಂಟಿನ ಸಭಾಸದರಾಗಲು ಅಡ್ಡಿ ಇಲ್ಲ' ಎಂಬ ತಾತ್ಪರ್ಯದ ಒಂದು ಕಾಯದೆಯ ಮಸೂದೆಯನ್ನು ಮಾಡಿ, ಅದನ್ನು ಪಾರ್ಲಮೆಂಟಿನ ಮಂಜೂರಿಗಾಗಿ ತಂದನು. ಗ್ಲ್ಯಾಡ್‌ಸ್ಟನ್ನನು ತಾನೊಬ್ಬ ಕಾನ್ಸರ್ವೇಟಿವ್ ಪಕ್ಷದವನಾಗಿದ್ದರೂ ಒಂದು ಉತ್ತಮ ಭಾಷಣಮಾಡಿ, ಆ ಮಸೂದೆಗೆ ತನ್ನ ಒಪ್ಪಿಗೆಯನ್ನು ಕೊಟ್ಟನು. ಈ ಹೊತ್ತಿಗೆ ಮಾತ್ರ ಅವನು ಲಿಬರಲ್ ಪಕ್ಷಾಭಿಮಾನಿಯಾಗುವನೆಂಬ ಸಂಗತಿಯು ಎಲ್ಲರಿಗೂ ಸ್ಪಷ್ಟವಾಗಿ ತಿಳಿಯಿತು. ಆ ಬಿಲ್ಲಿನ ಮೇಲೆ ವಾದವಿವಾದಗಳು ನಡೆದಾಗ್ಗೆ, ಒಬ್ಬ ಸಭಾಸದನು 'ಯಹೂದೀ ಜನರ ವಿಷಯವಾಗಿ ಗ್ಲ್ಯಾಡ್‌ಸ್ಟನ್ ದೊರೆಗಳ ಅಭಿಪ್ರಾಯವು ಹೀಗಿರುವದೆಂದು ಆಕ್ಸಫರ್ಡ್ ವಿಶ್ವವಿದ್ಯಾಲಯದವರಿಗೆ ಮೊದಲೇ ತಿಳಿದಿದ್ದರೆ, ಅವರು ಈ ದೊರೆಗಳನ್ನು ತಮ್ಮ ಪ್ರತಿನಿಧಿಯಾಗಿ ಆರಿಸಿಕೊಂಡು ಪಾರ್ಲಮೆಂಟಿಗೆ ಎಂದೂ ಕಳುಹಿಸುತ್ತಿದ್ದಿಲ್ಲ' ಎಂದು ಹೇಳಿದನು. ಅದಕ್ಕೆ ಗ್ಲ್ಯಾಡ್‌ಸ್ಟನ್ನನು ಪ್ರತ್ಯುತ್ತರವಾಗಿ 'ನನ್ನ ಮನೋದೇವತೆಯು ನನಗೆ ಸೂಚಿಸಿದ್ದನ್ನು ಬಿಟ್ಟು, ನನ್ನನ್ನು ಆರಿಸಿಕೊಂಡವರ ಅಭಿಪ್ರಾಯದಂತೆ ಮಾತುಗಳನ್ನಾಡಿದ್ದರೆ, ನಾನು ನನ್ನ ಕರ್ತವ್ಯಕ್ಕೆ ತಪ್ಪಿದಂತಾಗುತ್ತಿತ್ತು. ಅದುಕಾರಣ ಯಾರ ಭಿಡೆಯನ್ನು ಹಿಡಿಯದೆ ನಾನು ನನ್ನ ಕರ್ತವ್ಯವನ್ನು ಮಾಡಿದ್ದೇನೆ.' ಎಂದು ಹೇಳಿದನು. ಆಗ ಬಿಲ್ಲಿನ ವಿರೋಧಿಗಳು 'ಒಂದು ವೇಳೆ ಕೆಲವು ಯಹೂದೀ ಜನರನ್ನು ಪಾರ್ಲಮೆಂಟಿನಲ್ಲಿ ಸೇರಿಸಿಕೊಂಡರೆ, ಕ್ರಿಶ್ಚನ್-ಪಾರ್ಲಮೆಂಟು ಎಂಬ ಹೆಸರಿಗೆ ಕುಂದು ಬರುವದು' ಎಂಬದೊಂದು ಆಕ್ಷೇಪವನ್ನೊಡ್ಡಿದ್ದರು. ಅದಕ್ಕೆ ಗ್ಲ್ಯಾಡ್‌ಸ್ಟನ್ನನು "ನೀವು ಯಹೂದಿಯ ಜನರಿಗೆ ಮ್ಯುನಿಸಿಪಾಲಿಟಿಯೊಳಗಿನ ಮಹತ್ವದ ಸ್ಥಳಗಳನ್ನು ಈ ಮೊದಲೇ ಕೊಟ್ಟಿದ್ದೀರಿ, ಮುನ್ಸಿಫಿಯ ಮತ್ತು ಫೌಜದಾರಿಯ ದೊಡ್ಡ ದೊಡ್ಡ ಅಧಿಕಾರದ ಕೆಲಸಗಳ ಮೇಲೂ ಅವರನ್ನು ನಿಯಮಿಸಿದ್ದೀರಿ, ಇದ

ಲ್ಲದೆ ಕಾಯದೆಗಳ ಅಮಲ್ಬಜಾಯಿಸುವ ಉದ್ಯೋಗಗಳಲ್ಲಿಯೂ ಅವರನ್ನು ಸೇರಿಸಿದ್ದೀರಿ, ಇಷ್ಟೆಲ್ಲ ಅಧಿಕಾರಗಳನ್ನು ಅವರಿಗೆ ಕೊಟ್ಟು, ಕಾಯದೆಗಳನ್ನು ರಚಿಸುವ ಅಧಿಕಾರವೊಂದನ್ನು ಮಾತ್ರ ಕೊಡುವದಿಲ್ಲೆಂದರೆ, ಅದು ಇನ್ನುಮುಂದೆ ಎಂದಿಗೂ ನಡೆಯದು. ಅವರು ಪಾರ್ಲಮೆಂಟನ್ನು ಪ್ರವೇಶಿಸಿದರೆ, ಕಾಯದೆಗಳನ್ನು ರಚಿಸುವ ಅಧಿಕಾರವು ಅವರ ಕೈಸೇರುವದೆಂಬ ಅಂಜಿಕೆಯಿಂದ ಅವರನ್ನು ಒಳಗೆ ಬರಗೊಡವೊಲ್ಲಿರಿ; ಆದರೆ ಅವರನ್ನು ಕಾಯದೆಕರ್ತೃಗಳನ್ನಾಗಿ ಮಾಡುವವರು ಯಾರು? ಅವರನ್ನು ತಮ್ಮ ಪ್ರತಿನಿಧಿಗಳಾಗಿ ಆರಿಸಿಕೊಂಡು, ಪಾರ್ಲಮೆಂಟಿಗೆ ಕಳುಹಿಸುವ ಜನರೇ ಅಲ್ಲವೋ? ಆ ಜನರಲ್ಲಿ ಕೆಲವು ಯಹೂದೀ ಜನರನ್ನಾದರೂ ನೀವು ಸೇರಿಸಿದ್ದೀರಿ. ಪ್ರತಿನಿಧಿಗಳನ್ನು ಆರಿಸುವ ಹಕ್ಕುಳ್ಳ ಈ ಎಲ್ಲ ಜನರಿಗೂ ನೀವು ಕ್ರಿಶ್ಚನ್ನರೆಂದು ಹೇಳುವಿರೋ ಅಥವಾ ಕ್ರಿಶ್ಚನ್ನರಲ್ಲವೆಂದು ಹೇಳುವಿರೋ? ಒಂದು ವೇಳೆ ನೀವು ಅವರಿಗೆ ಕ್ರಿಶ್ಚನ್ನರೆಂದು ಹೇಳುತ್ತಿದ್ದರೆ, ಅದೇ ಜನರು ಆರಿಸಿ ಕಳುಹಿಸಿದ ಪ್ರತಿನಿಧಿಗಳುಳ್ಳ ಪಾರ್ಲಮೆಂಟಿಗೆ ಕ್ರಿಶ್ಚನ್ ಪಾರ್ಲಮೆಂಟು ಅಲ್ಲವೆಂದು ಹೇಳುವದು ತೀರ ಅಸಂಗತವು ಎಂದು ಉತ್ತರ ಕೊಟ್ಟನು.



ಧಾನ್ಯದ ಕಾಯದೆಯ ವಿರುದ್ಧವಾಗಿ ಗ್ಲ್ಯಾಡ್‌ಸ್ಟನ್ನನ ಪ್ರಯತ್ನಗಳು.

ಮುಖ್ಯ ಮಂತ್ರಿಯಾದ ಲಾರ್ಡ್ ಜಾನ್ ರಸೆಲ್ಲನಿಂದ ಹೊಸ ಮಂತ್ರಿಗಳನ್ನು ನಿಯಮಿಸಿಕೊಂಡು ಮಂತ್ರಿಮಂಡಲವನ್ನು ರಚಿಸುವದು ಆಗದಿರಲು, ಮಹಾರಾಣೀ ಸಾಹೇಬರು ಸರ್ ರಾಬರ್ಟ ಪೀಲನನ್ನು ಕರಿಸಿಕೊಂಡು, ಅವನಿಗೆ ಪುನಃ ಮುಖ್ಯಮಂತ್ರಿಯ ಉದ್ಯೋಗವನ್ನು ಕೊಟ್ಟರು. ಆ ಮೇಲೆ ಅವನು ಧಾನ್ಯದ ಕಾಯದೆಯ ವಿರುದ್ಧವಾಗಿ ಒಂದು ಕಾಯದೆಯ ಮಸೂದೆಯನ್ನು ಸ್ವತಃ ರಚಿಸಿ, ಅದನ್ನು ಪಾರ್ಲಮೆಂಟಿನಲ್ಲಿ ತಂದನು. ಈ ಸಮಯದಲ್ಲಿ ನಿಕರದ ವಾಗ್ವಾದಗಳು ನಡೆದವು. "ಧಾನ್ಯದ ಕಾಯದೆಗಳು" (Corn Laws) ಎಂಬ ಹೆಸರಿನ ಕಾಯದೆಯು ಸನ್ ೧೮೧೫ ನೆಯ ಇಸವಿಯಲ್ಲಿ ಆಗಿತ್ತು. ಈ ಕಾಯದೆಯ ಮೇರೆಗೆ, ಪರದೇಶದ ಧಾನ್ಯಗಳು ಇಂಗ್ಲಂಡಕ್ಕೆ ಬಂದರೆ, ಅವುಗಳಿಗೆ ಅಳತೆಗೆಟ್ಟ ಸುಂಕವನ್ನು ಕೊಡಬೇಕಾಗುತ್ತಿತ್ತು. ಈ ಕಾಯದೆಯು ಮೊದಲು ಅಲ್ಲಿಯ ಒಕ್ಕಲಿಗರ ಹಿತಕ್ಕಾಗಿ ಮಾಡಲ್ಪಟ್ಟಿತ್ತು. ಆದರೆ ಇತ್ತೀಚಿಗಾಗಿ ಇಂಗ್ಲಂಡದ ಜನಸಂಖ್ಯೆಯು ಮಿತಿಮೀರಿ ಬೆಳೆದದ್ದರಿಂದಲೂ ಪರದೇಶದ ಧಾನ್ಯಕ್ಕೆ ಬಹಳೇ ಸುಂಕ ಕೊಡಬೇಕಾದದ್ದರಿಂದ ಹೊರಗಿನ ಕಾಳು ಬರುವದು ಕಷ್ಟವಾದದ್ದರಿಂದಲೂ ಕಾಳು ತುಟ್ಟಿಯಾಗಿ ಬಡ ಜನರಿಗೆ ಹೊಟ್ಟೆತುಂಬ ಅನ್ನವು ಸಿಗದಂತಾಗಿತ್ತು. ಅದು ಕಾರಣ ಈ ಕಾಯದೆಯನ್ನು ರದ್ದುಮಾಡುವ ಪ್ರಸಂಗವು ಒದಗಿತ್ತು. ಇದೇ ಕಾಲಕ್ಕೆ ಐರ್ಲಂಡದಲ್ಲಿ ಬರ ಬೀಳಲು, ಜನರು ಮತ್ತಷ್ಟು ಕಂಗೆಟ್ಟರು. ದೇ

ತಕ್ಕೆ ಇಷ್ಟು ವಿಪತ್ಕಾಲವು ಒದಗಿದರೂ ಕಾನ್‌ಸರ್ವೇಟೀವ್ ಪಕ್ಷದ ಬಹು ಜನರು ಸರ್ ರಾಬರ್ಟಪೀಲನ ಮಸೂದೆಗೆ ಅಡ್ಡಬಂದರು. ಆದರೆ (Villiers) ವಿಲಿಯರ್ಸ್, (Cobden) ಕಾಬ್ಡೆನ್, (Bright) ಬ್ರಾಯಿಟ್ ಮುಂತಾದ ಉದಾರ ಮನಸ್ಸಿನ ಸದ್ಗೃಹಸ್ಥರು ಮಾತ್ರ ಆ ಮಸೂದೆಗೆ ತಮ್ಮಿಂದಾದಷ್ಟು ಸಾಹಾಯ್ಯ ಮಾಡಿದರು. ಈ ವೇಳೆಯಲ್ಲಿ ಗ್ಲ್ಯಾಡ್‌ಸ್ಟನ್ನನು ಪಾರ್ಲಮೆಂಟಿನಲ್ಲಿದ್ದಿಲ್ಲ. ಇದರ ಕಾರಣವೇನಂದರೆ:—ಅವನು ಕಾನ್ಸರ್ವೇಟೀವ್ ಪಕ್ಷಾಭಿಮಾನಿಗಳಾದ ನ್ಯೂಆರ್ಕ ಪ್ರಾಂತದವರ ಪ್ರತಿನಿಧಿಯಾಗಿ ಪಾರ್ಲಮೆಂಟನ್ನು ಸೇರಿದ್ದನು. ಆದರೆ ಕೆಲವು ದಿವಸಗಳಲ್ಲಿಯೇ ಅವನು ಲಿಬರಲ್ ಪಕ್ಷದ ದರಬಾರಿನಲ್ಲಿ ಕಲೋನಿಯಲ್ ಸೆಕ್ರೆಟರಿ (Colonial Secretary) ಅಂದರೆ 'ಹೊಸದಾಗಿ ಒಕ್ಕಲಾದ ಪ್ರದೇಶಗಳ ಮಂತ್ರಿ' ಎಂಬ ಉದ್ಯೋಗವನ್ನು ಅಂಗೀಕರಿಸಿ, ಮಂತ್ರಿಮಂಡಲವನ್ನು ಸೇರಿದ್ದನು. ಇದನ್ನು ಕಂಡು ನ್ಯೂಆರ್ಕ ಪ್ರಾಂತದವರು ಅವನ ಮೇಲೆ ಕಡುಸಿಟ್ಟಾಗಲು, ಅವನು ಪಾರ್ಲಮೆಂಟಿನೊಳಗಿನ ತನ್ನ ಪ್ರತಿನಿಧಿಯ ಸ್ಥಳವನ್ನು ಬಿಟ್ಟುಕೊಟ್ಟಿದ್ದನು. ಬಳಿಕ ಅವನನ್ನು ಮತ್ತಾವ ಸಂಸ್ಥೆಯವರೂ ತಮ್ಮ ಪಕ್ಷದಿಂದ ಪ್ರತಿನಿಧಿಯಾಗಿ ಆರಿಸಿಕೊಂಡು ಪಾರ್ಲಮೆಂಟಿಗೆ ಕಳುಹಿಸಿದ್ದಿಲ್ಲ. ಈ ಮೇರೆಗೆ ಅವನು ಪಾರ್ಲಮೆಂಟಿನ ಹೊರಗಿದ್ದುಕೊಂಡೇ, ಆ ಧಾನ್ಯದ ಕಾಯದೆಯನ್ನು ರದ್ದು ಪಡಿಸಲು ತನ್ನಿಂದಾದಷ್ಟು ಪ್ರಯತ್ನಿಸಿದನು. ಅವನು "ಇತ್ತಲಾಗಿ ವ್ಯಾಪಾರ ಸಂಬಂಧದ ಕಾಯದೆ" ಎಂಬ ಹೆಸರಿನದೊಂದು ಪುಸ್ತಕವನ್ನು ಬರೆದು ಪ್ರಕಟಿಸಿದನು. ಅದನ್ನು ಓದಿದವರೆಲ್ಲರೂ ಧಾನ್ಯದ ಕಾಯಿದೆಯಿಂದ ದೇಶಕ್ಕೆ ನಷ್ಟವುಂಟೆಂದು ಹೇಳತೊಡಗಿದರು. ಇದರ ಹೊರತು ಸರ್ ರಾಬರ್ಟ ಪೀಲನಿಗೆ ಆ ಕಾಯದೆಯ ಸಂಬಂಧದ ಎಲ್ಲ ತಿಳುವಳಿಕೆಯನ್ನು ಮಾಡಿಕೊಟ್ಟವನು ಗ್ಲ್ಯಾಡ್‌ಸ್ಟನ್ನನೇ ಎಂದು ಒಬ್ಬ ಗ್ರಂಥಕಾರನು ಬರೆದಿರುವನು. ಇದರಿಂದ ಗ್ಲ್ಯಾಡ್‌ಸ್ಟನ್ನನು ಪ್ರತ್ಯಕ್ಷವಾಗಿ ಅಲ್ಲ, ಆದರೆ ಅಪ್ರತ್ಯಕ್ಷವಾಗಿ ಆ ಕಾಯದೆಯನ್ನು ರದ್ದು ಪಡಿಸುವಲ್ಲಿ ಮನಮುಟ್ಟಿ ಸಾಹಾಯ್ಯ ಮಾಡಿದನೆಂದು ತಿಳಿಯುವದು. ಕಟ್ಟಕಡೆಗೆ ಆ ಕಾಯದೆಯನ್ನು ಪಾರ್ಲಮೆಂಟಿನವರು ಸನ್ ೧೮೪೬ನೆಯ ಇಸವಿಯ ಜಾನೇವಾರಿ ೨೬ನೆಯ ತಾರೀಖಿನ ದಿವಸ ರದ್ದು ಮಾಡಿದರು.

ವಾಟರ್‌ಲೂ ಕಾಳಗದ ವೀರನು ಎಂದು ಇತಿಹಾಸ ಪ್ರಸಿದ್ಧನಾದ ಡ್ಯೂಕ್-ಆಫ್-ವೆಲಿಂಗ್ಟನ್ನನು ಸನ್ ೧೮೫೨ನೆಯ ಇಸವಿಯ ಸೆಪ್ಟೆಂಬರ ತಿಂಗಳಿನ ೧೪ನೆಯ ತಾರೀಖಿನ ದಿವಸ ತೀರಿಕೊಂಡನು. ಈ ಹೊತ್ತಿಗೆ ಅವನ ಸನ್ಮಾನಾರ್ಥವಾಗಿ ದೊಡ್ಡ ದೊಡ್ಡ ಗೃಹಸ್ಥರು ಪಾರ್ಲಮೆಂ

ಡ್ಯೂಕ್-ಆಫ್-ವೆಲಿಂಗ್ಟನ್ನನು ತೀರಿಕೊಂಡ ಸಮಯದಲ್ಲಿ ಗ್ಲ್ಯಾಡ್‌ಸ್ಟನ್ನನು ಪಾರ್ಲಮೆಂಟಿನಲ್ಲಿ ಭಾಷ

ಣವಾಡಿದ್ದು, ೧೮೫೨, ಸೆಪ್ಟೆಂಬರ.

ಟವಲ್ಲಿ ಭಾಷಣಮಾಡಿದಂತೆ ಗ್ಲ್ಯಾಡ್‌ಸ್ಟನ್ನನೂ ಒಂದು ಭಾಷಣಮಾಡಿದನು. ಅದರ ತಾತ್ಪರ್ಯವೇನೆಂದರೆ:—

“ ಆ ತೇಜಸ್ವಿಯಾದ ಡ್ಯೂಕನಲ್ಲಿ ಉತ್ತಮೋತ್ತಮ ಗುಣಗಳು ಇಂತಿಷ್ಟೇ ಇದ್ದವೆಂದು ಹೇಳುವದು ಅಸಾಧ್ಯವು. ಅದೇ ಮೇರೆಗೆ ಅವನು ದೇಶಹಿತದ ಕೃತ್ಯಗಳನ್ನು ಇಂತಿಷ್ಟೇ ಎಸಗಿದನೆಂದು ನುಡಿಯುವದಾದರೂ ಅಸಾಧ್ಯವೇ. ಅವನ ಚರಿತ್ರೆಯು ನೀತಿಬೋಧದ ನಿಧಿಯೂ ಮಹತ್ಕೃತ್ಯಗಳ ಆಗರವೂ ಆಗಿದೆ. ಅವನಲ್ಲಿದ್ದ ಕೆಲವು ವಿಶೇಷ ಗುಣಗಳನ್ನು ನೋಡಿ ಮತ್ತೊಬ್ಬರು ಕಲಿತುಕೊಳ್ಳುವದಾಗಲಿ, ಅವನು ಮಾಡಿದ ಕೆಲವು ಮಹತ್ಕೃತ್ಯಗಳನ್ನು ಇನ್ನೊಬ್ಬರು ಮಾಡುವದಾಗಲಿ ತೀರದೀಗದ ಕೆಲಸಗಳು. ಅವನು ತನ್ನ ಅರಸನ ಒಳಿತಿಗಾಗಿ ದೊಡ್ಡ ದೊಡ್ಡ ಕೆಲಸಗಳನ್ನು ಮಾಡಿದನು, ತನ್ನ ಖಡ್ಗದ ಬಲದಿಂದ ಇಂಗ್ಲಂಡಕ್ಕೆ ಮಾತ್ರವಲ್ಲ, ಆದರೆ ಸಂಪೂರ್ಣ ಯುರೋಪಖಂಡಕ್ಕೆ ಸ್ವಾತಂತ್ರ್ಯವನ್ನು ಕೊಟ್ಟನು, ಇಂಗ್ಲಂಡದ ಕೀರ್ತಿಧ್ವಜವನ್ನು ಬಹು ಎತ್ತರಕ್ಕೇರಿಸಿ ಎಲ್ಲ ರಾಷ್ಟ್ರದವರನ್ನು ಆಶ್ಚರ್ಯಪಡಿಸಿದನು. ಇಂಥ ಘನವಾದ ಕೃತ್ಯಗಳನ್ನೆಸಗುವದು ಮತ್ತೊಬ್ಬರಿಂದಾಗಲಿಕ್ಕಿಲ್ಲ; ಅವನು ತನ್ನ ಬಾಹುಬಲದಿಂದ ಜೋಡಿಲ್ಲದ ಜಯಗಳನ್ನು ಪಡೆದು, ತನ್ನ ಹೆಸರಿನ ಯಶೋದುಂದುಭಿಯನ್ನು ಸುತ್ತಲೂ ಹೊಡಿಸಿ, ಬಳಿಕ ಕೈಯೊಳಗಿನ ಖಡ್ಗವನ್ನು ಕೆಳಗಿಟ್ಟು, ಸ್ವದೇಶದಲ್ಲಿಯೂ ಪರದೇಶಗಳಲ್ಲಿಯೂ ಶಾಂತತೆಯನ್ನು ನೆಲೆಗೊಳಿಸಲು ಅತ್ಯಂತ ಶ್ರಮಪಟ್ಟಂತೆ ಶ್ರಮಪಡುವದು ಅನ್ಯರಿಂದಾಗಲಿಕ್ಕಿಲ್ಲ; ಅವನು ತನ್ನ ಬೆಳಕನ್ನು ಅರಸನೊಡ್ಡೋಲಗದಲ್ಲಿಯೂ ಪಾರ್ಲಮೆಂಟಿನಲ್ಲಿಯೂ ಕೆಡವಿದಂತೆ ಮತ್ತಾರೂ ಕೆಡವಲಿಕ್ಕಿಲ್ಲ, ಅವನು ಇಷ್ಟು ಮಹತ್ಕೃತ್ಯಗಳನ್ನು ಮಾಡಿದರೂ ವೃದ್ಧಾಪ್ಯಕಾಲ ಒದಗಿದರೂ ಗರಿ ಮುಕ್ಕಾಗದ ತನ್ನ ಬುದ್ಧಿ ಸಾಮರ್ಥ್ಯವನ್ನು ದೇಶಾಭ್ಯುದಯ ಕೃತ್ಯಗಳಿಗೆ ಪ್ರಯೋಗಿಸಲು ಶಕ್ತನಾದಂತೆ ಅನ್ಯರು ಶಕ್ತರಾಗಲಿಕ್ಕಿಲ್ಲ; ಆದರೂ ಆ ಮಹಾಪುರುಷನಲ್ಲಿದ್ದ ಸದ್ಗುಣಗಳನ್ನು ಮಾತ್ರ ಪ್ರತಿ ಒಬ್ಬನು ಅನುಕರಣದಿಂದ ತಕ್ಕಮಟ್ಟಿಗೆ ಕಲಿತುಕೊಳ್ಳಬಹುದು. ತನುಮನಧನಗಳನ್ನೆಲ್ಲ ಸ್ವದೇಶ ಸೇವೆಗೆ ಅರ್ಪಿಸುವದು, ಸದಾಸರ್ವಕಾಲದಲ್ಲಿ ಸತ್ಯವನ್ನು ಸ್ಮರಿಸಿ, ತನ್ನ ರಾಷ್ಟ್ರದ ಹಿತವನ್ನು ಸಾಧಿಸುವ ಹಂಬಲವು, ಸಂಪೂರ್ಣ ರಾಜಭಕ್ತನಾಗಿದ್ದರೂ ತನಗೆ ಸತ್ಯವಾಗಿ ತೋರಿದ್ದನ್ನು ಸಿಂಹಾಸನಾಧಿಪತಿಗಳಿಗೆ ಸ್ಪಷ್ಟವಾಗಿ ತಿಳಿಸುವದು, ಸಾರ್ವಜನಿಕ ಕೃತ್ಯಗಳನ್ನೆಲ್ಲ ತನ್ನ ಕರ್ತವ್ಯದ ಮೇಲೆ ದೃಷ್ಟಿಯನ್ನಿಟ್ಟು, ಶಾಂತಚಿತ್ತದಿಂದಲೂ ನಿಶ್ಚಲಬುದ್ಧಿಯಿಂದಲೂ ಅನ್ಯರ ಸ್ತುತಿನಿಂದೆಗಳಿಗೆ ಲಕ್ಷ್ಯಗೊಡದೆಯೂ ಮಾಡುವದು, ನಿಯಮನಿಷ್ಠನಾಗಿಯೂ ವ್ರತಸ್ಥನಾಗಿಯೂ ಧರ್ಮಪರಾ

ಯುಣನಾಗಿಯೂ ಇರುವದು ಇವೇ ಮುಂತಾದ ಅವನ ಸದ್ಗುಣಗಳನ್ನು ಇಷ್ಟವುಳ್ಳವರು ಪ್ರಯತ್ನದಿಂದ ಪಡೆದುಕೊಳ್ಳಬಹುದು."

ಗ್ಲಾಡ್‌ಸ್ಟನ್ನನು ಸನ್ ೧೮೫೩ನೆಯ ಇಸವಿಯ ಆರಂಭದಲ್ಲಿ (Chancellor of the Exchequer) ಚಾನ್ಸಲರ್ ಆಫ್-ದಿ-ಎಕ್ಸಚಕರ್ ಅಂದರೆ ಜಮಾಬಂದಿ ಖಾತೆಯ ಮಂತ್ರಿಯಾದನು. ಅವನು ಈ ಮಂತ್ರಿಯ ಉದ್ಯೋಗವನ್ನು ಸುಮಾರು ಅಯ್ದಾರು ವರ್ಷಗಳ ವರೆಗೆ ಚೆನ್ನಾಗಿ ನಡೆಯಿಸಿದನು. ಅವನು ಸನ್ ೧೮೫೩ನೇ ವರ್ಷದ ಆಯವ್ಯಯ ಪತ್ರಿಕೆಯನ್ನು ಸಿದ್ಧಮಾಡಿ, ಅದನ್ನು ಎಪ್ರಿಲ ೧೮ನೆಯ ತಾರೀಖಿನ ದಿವಸ ಪ್ರತಿನಿಧಿಗಳ ಸಭೆಯ ಮುಂದಿಟ್ಟನು. ಈ ಹೊತ್ತಿಗೆ ಅವನು ಆ ಪತ್ರಿಕೆಯ ಪುಷ್ಟೀಕರಣಾರ್ಥವಾಗಿ ತನ್ನ ರಸಾಲವಾದ ವಾಣಿಯಿಂದ ಅಯ್ದು ತಾಸುಗಳ ವರೆಗೆ ಅಸ್ಖಲಿತವಾಗಿ ಮಾತನಾಡಿದನು. ಈ ಮಾತನ್ನು ಎಷ್ಟು ಬಣ್ಣಿಸಿದರೂ ಅಲ್ಪವೇ. ಈ ಸಮಗ್ರ ಭಾಷಣದಲ್ಲಿ ಅಂಕೆಗಳೇ ತುಂಬಿದ್ದರೂ, ಇದು ಅಷ್ಟೊಂದು ಮನೋಹರವಾಗುವ ಸಂಭವವಿಲ್ಲದಿದ್ದರೂ, ಅವನು ತನ್ನ ಅನುಪಮ ವಕ್ತೃತ್ವ ಶಕ್ತಿಯಿಂದಲೂ ಅತುಲವಾಗ್ವೃಷ್ಟಿಯಿಂದಲೂ ಸಭೆಯೊಳಗಿನ ಸಭಾಸದರನ್ನೆಲ್ಲ ಅಯ್ದು ತಾಸುಗಳ ವರೆಗೆ ಪಟದೊಳಗಿನ ಚಿತ್ರಗಳಂತೆ ತಟಸ್ಥರನ್ನಾಗಿ ಮಾಡಿಬಿಟ್ಟನು. ಈ ಮಾದರಿಯ ಭಾಷಣವನ್ನು ಪಾರ್ಲಮೆಂಟ್ ಸಭೆಯಲ್ಲಿ ಹಿಂದಿನ ೪೦|೫೦ ವರ್ಷಗಳಲ್ಲಿ ಯಾರೂ ಮಾಡಿದ್ದಿಲ್ಲವೆಂದು ಅನುಭವಶಾಲಿಗಳಾದ ವೃದ್ಧ ಪುರುಷರು ಅಭಿಪ್ರಾಯಪಟ್ಟಿರುವರು. ಒಬ್ಬ ಸಭಾಸದನು ಪಕ್ಕನೇ ತನ್ನ ಘಡಿಯಾರವನ್ನು ನೋಡಿ, ಈ ಅಯ್ದು ತಾಸುಗಳು ಅಯ್ದು ನಿಮಿಷಗಳಾಗಿ ಹೋದದ್ದಕ್ಕೆ ಪರಮಾಶ್ಚರ್ಯಪಟ್ಟನು. ಆ ಪತ್ರಿಕೆಯಲ್ಲಿ ಹಿಂದಿನ ಎಷ್ಟೋ ಸಂಗತಿಗಳು ಕಾಣಿಸಲ್ಪಟ್ಟಿದ್ದವು. ಮುಂದೆ ಮಾಡಲ್ಪಡತಕ್ಕ ಮಹತ್ವದ ಎಷ್ಟೋ ಸಂಗತಿಗಳು ಸೂಚಿಸಲ್ಪಟ್ಟಿದ್ದವು. ಅವುಗಳನ್ನೆಲ್ಲ ವಿವರಿಸಲು ಇಲ್ಲಿ ಸ್ಥಳವಿಲ್ಲದ್ದರಿಂದ ಅವುಗಳೊಳಗಿನ ಮುಖ್ಯ ಮುಖ್ಯ ಸಂಗತಿಗಳನ್ನಷ್ಟೇ ಹೇಳುವೆವು. ಸರಕುಗಳ ಮೇಲಿನ ಸುಂಕವನ್ನು ೫೦ ಲಕ್ಷ ಪೌಂಡು ಕಡಿಮೆ ಮಾಡುವದು, ಸಣ್ಣ ಸಣ್ಣ ವ್ಯವಹಾರಗಳ ಮೇಲಿನ, ಬಂಡಿ ಕುದುರೆ ಮುಂತಾದ ವಾಹನಗಳ ಮೇಲಿನ, ಕಿರಾಣಿ ಜೀನಸುಗಳ ಮೇಲಿನ ಕರಗಳನ್ನು ತಗ್ಗಿಸುವದು, ವರ್ತಮಾನ ಪತ್ರಗಳಲ್ಲಿಯ ಪ್ರಕಟನೆಗಳ ಮೇಲಿನ ಕರಗಳನ್ನೆಲ್ಲ ಸಂಪೂರ್ಣವಾಗಿ ತೆಗೆದುಹಾಕುವದು, ಚಹಾದ ಮೇಲಿದ್ದ ೨ ಸಿಲಿಂಗು ೧ ಪೇನಿ ಕರವನ್ನು ೧ ಸಿಲಿಂಗು ಮಾತ್ರ ಇಡುವದು, ಸಬಕಾರದ ಮೇಲಿನ ಕರವನ್ನು ಕಡಿಮೆ ಮಾಡುವ

ಗ್ಲಾಡ್‌ಸ್ಟನ್ನನು ಜಮಾಬಂದಿ ಖಾತೆಯ ಮಂತ್ರಿಯಾದದ್ದು ಮತ್ತು ತನ್ನ ಆಯವ್ಯಯ ಪತ್ರಿಕೆಯ ಮೇಲೊಂದು ಉತ್ತಮ ಭಾಷಣಮಾಡಿದ್ದು, ೧೮೫೩, ಎಪ್ರಿಲ, ೧೮

ದು, ಈ ಮೇರೆಗೆ ಒಟ್ಟು ೨೫೬ ಪದಾರ್ಥಗಳ ಮೇಲಿದ್ದ ಕರಗಳಲ್ಲಿ ಕೆಲವನ್ನು ಸಂಪೂರ್ಣವಾಗಿ ತೆಗೆದುಹಾಕುವದಕ್ಕೂ ಕೆಲವನ್ನು ಕಡಿಮೆ ಮಾಡುವದಕ್ಕೂ ಆ ಪತ್ರಿಕೆಯಲ್ಲಿ ಸೂಚಿಸಿದ್ದನು. ಇದರಿಂದ ಆದಾಯದಲ್ಲಿ ಬಿದ್ದ ಕೊರತೆಯನ್ನು ಆಸ್ತಿಯ ಸಂಬಂಧದ ಮೃತ್ಯುಪತ್ರಗಳ ಮೇಲೆ, ಸರಾಯಿಯ ಮೇಲೆ, ವರ್ಷಕ್ಕೆ ಒಂದು ನೂರಗಿಂತ ಹೆಚ್ಚು ಪೌಂಡು ಪ್ರಾಪ್ತಿಯ ಮೇಲೆ, ಕರ ಕೂಡ್ರಿಸಿ ಪೂರ್ಣಮಾಡಿದ್ದನು. ಅಪರೂಪವಾದ ಇವೆಲ್ಲ ಜೋಡಣಿಗಳನ್ನು ಕೇಳಿ ಸಭೆಯೊಳಗಿನ ಜನರೆಲ್ಲರೂ ಆಶ್ಚರ್ಯದಿಂದ ಬೊಟ್ಟುಕಚ್ಚಿದರು. ಆ ಪತ್ರಿಕೆಯು ಜನರ ಮನಸನ್ನು ಲೋಹಚುಂಬಕದಂತೆ ಈಪರಿ ಆಕರ್ಷಿಸಲು ಕಾರಣವೇನೆಂದರೆ— ನೋಡಿದಲ್ಲೆಲ್ಲ ಪ್ರಜೆಗಳ ಮೇಲಿನ ದಯಾಂತಃಕರಣವು ಅದರಲ್ಲಿ ತುಂಬಿ ತುಳುಕಾಡುತ್ತಿತ್ತು. ಅವನು ಅಂತ್ಯದಲ್ಲಿ ಪ್ರಾಪ್ತಿಯ ಮೇಲಿನ ಕರವನ್ನು ಉದ್ದೇಶಿಸಿ ‘ ನಾನು ಈಗ ಸೂಚಿಸಿರುವ ಕರವನ್ನು ಒಪ್ಪಿ, ತಾವು ಮಂಜೂರು ಮಾಡಿದರೆ, ಸನ್ ೧೮೬೦ ನೆಯ ಇಸ್ವಿಯಲ್ಲಿ ಪ್ರಾಪ್ತಿಯ ಮೇಲಿನ ಸಂಪೂರ್ಣಕರವು ತೆಗೆದು ಹಾಕಲ್ಪಡುವದು’ ಎಂದು ಹೇಳಿದನು. ‘ ತಮ್ಮನ್ನು ಬಲು ಹೊತ್ತು ಕುಳ್ಳಿರಿಸಿದೆನೆಂದು ಈಗಲೇ ಘಡಿಯಾರವನ್ನು ನೋಡಿದ್ದರಿಂದ ನನಗೆ ತಿಳಿಯಿತು. ಇದಕ್ಕಾಗಿ ತಮ್ಮೆಲ್ಲರ ಕ್ಷಮೆ ಬೇಡುತ್ತೇನೆ. ನನ್ನ ರಾಷ್ಟ್ರದ ಪ್ರತಿಷ್ಠೆಯು ಬೆಳೆಯಬೇಕು, ಪಾರ್ಲಮೆಂಟಿನ ವಿಚಾರಗಳು ಎಲ್ಲರಿಂದಲೂ ಮನ್ನಿಸಲ್ಪಡಬೇಕು, ದೇಶದ ಹಿತವು ಸಾಧಿಸಲ್ಪಡಬೇಕು, ಎಲ್ಲರ ಮೇಲೂ ಅವರವರ ಯೋಗ್ಯತೆಗೆ ಸರಿಯಾಗಿ ಕರದ ಭಾರವು ಬೀಳಬೇಕು’ ಎಂಬದೇ ನನ್ನ ಮುಖ್ಯ ಉದ್ದೇಶವಾಗಿದೆ. ಇದನ್ನು ಲಕ್ಷದಲ್ಲಿ ತಂದು, ತಾವು ಈ ಪತ್ರಿಕೆಯನ್ನು ಮಂಜೂರುಮಾಡಿದರೆ, ಮತ್ತು ಈ ಪತ್ರಿಕೆಯೊಳಗಿನ ಸೂಚನೆಗಳನ್ನೆಲ್ಲ ಪ್ರಚಾರದಲ್ಲಿ ತಂದರೆ, ನಮ್ಮ ದೇಶದ ಕಲ್ಯಾಣವಾಗುವದೆಂತಲೂ ಧನಲಕ್ಷ್ಮಿಯು ನಮ್ಮ ಕೈ ಹಿಡಿಯುವಳೆಂತಲೂ ಸಂಘಶಕ್ತಿಯು ಬೆಳೆಯುವದೆಂತಲೂ ನಾನು ತಮಗೆ ಸಾರಿ ಹೇಳುತ್ತೇನೆ. ಇದಲ್ಲದೆ ನಮ್ಮ ದೇಶದೊಳಗಿನ ಬಡ ಜನರ ಮತ್ತು ಕೂಲಿಕುಂಬಳಿಮಾಡಿ ಹೊಟ್ಟೆತುಂಬಿಕೊಳ್ಳುವವರ ತಲೆಯ ಮೇಲಿನ ಕರದ ಭಾರವನ್ನು ಕಡಿಮೆಮಾಡಿ, ಬಳಿಕೆಯೊಳಗಿನ ಪದಾರ್ಥಗಳು ಅವರಿಗೆ ಅಗ್ಗವಾಗಿಯೂ ಸುಲಭವಾಗಿಯೂ ದೊರೆಯುವಂತೆ ಮಾಡಿ, ಅವರ ಸಂಸಾರ ಸುಖವನ್ನು ಹೆಚ್ಚಿಸುವದು ದೊರೆತನದವರ ಕರ್ತವ್ಯವಾಗಿದೆ. ಇದನ್ನು ಸಾಧಿಸುವದಕ್ಕಾಗಿಯೇ ನನ್ನ ಪ್ರಯತ್ನವಿರುತ್ತದೆ’ ಎಂದು ಹೇಳಿ ತನ್ನ ಆಸನದ ಮೇಲೆ ಕುಳಿತುಕೊಂಡನು. ಕೂಡಲೇ ಆನಂದ ಸೂಚಕ ಧ್ವನಿಗಳೂ ಕರತಾಡನದ ಘಡಘಡ ಶಬ್ದಗಳೂ ಆ ಭವ್ಯವಾದ ಮಂದಿರದಲೆಲ್ಲ ಒಂದೇ ಸಮನೆ ಆಗಹತ್ತಿದವು. ಅವನ ಗೆಳೆಯರೂ ಸಹೋದ್ಯೋಗಿಗಳೂ ಆನಂದಭರಿತರಾಗಿ, ನಾಮುಂದು ನೀಮುಂದೆಂ

ದು ಲಗುಬಗೆಯಿಂದ ಬಂದು, 'ಈ ತರದ ಜಯವು ತಮಗೆ ಮೇಲಿಂದ ಮೇಲೆ ಉಂಟಾಗಲಿ' ಎಂದು ಹರಿಸಿ, ಅವನ ಬೆನ್ನು ತಟ್ಟಿದರು. ಸಭೆಯಲ್ಲಿದ್ದ ಜನಸ್ತೋಮದಲ್ಲಿ ಗ್ಲ್ಯಾಡ್‌ಸ್ಟನ್ನನ ಗುಣಾನುವಾದದ ಗುಣುಗುಣು ಶಬ್ದವು ಹುಟ್ಟಿ, ಅದು ಹಬ್ಬುತ್ತಹಬ್ಬುತ್ತ ಸ್ತ್ರೀಯರು ಕುಳಿತುಕೊಂಡಿದ್ದ ಮೇಲಿನ ಅಂತಸ್ತಿಗೂ ಹೋಯಿತು. ಬಡ ಜನರಂತು "ಗ್ಲ್ಯಾಡ್‌ಸ್ಟನ್ನನೇ ನಮ್ಮ ಉದ್ಧಾರಕನು, ಅವನೇ ನಮ್ಮ ತಂದೆಯು ಅವನೇ ನಮ್ಮ ತಾಯಿಯು" ಎಂದು ಅವನನ್ನು ಕೊಂಡಾಡಿದರು.

ರಶಿಯಾ ಮತ್ತು ತುರ್ಕಸ್ಥಾನಗಳ ನಡುವೆ ಯುದ್ಧವು.

ಗ್ಲ್ಯಾಡ್‌ಸ್ಟನ್ನನು ತನ್ನ ಆಯವ್ಯಯ ಪತ್ರಿಕೆಗೆ ಪಾರ್ಲಮೆಂಟಿನ ಒಪ್ಪಿಗೆಯನ್ನು ಪಡೆಯುವಷ್ಟರಲ್ಲಿಯೇ, ಇಂಗ್ಲಂಡದ ಹೊರಗೆ ಒಂದು ನಿಟ್ಟಿನಲ್ಲಿ ದೊಡ್ಡದೊಂದು ಪ್ರಕರಣವು ಒಮ್ಮಿಂದೊಮ್ಮೆ ಎದ್ದು, ಎಲ್ಲರ ಮನಸನ್ನು ಆಕರ್ಷಿಸಿಕೊಂಡಿತು. ಅದೇನೆಂದರೆ:—ರಶಿಯಾ ಮತ್ತು ತುರ್ಕಸ್ಥಾನ ಇವುಗಳ ನಡುವೆ ಒಂದು ರಾಜಕರಣದ ಸಲುವಾಗಿ ಒಡಕು ಹುಟ್ಟಲು ರಶಿಯಾದ ಬಾದಶಹನು (Zar) ಒಮ್ಮಿಂದೊಮ್ಮೆ ತನ್ನ ದಂಡನ್ನು ತುರ್ಕಸ್ಥಾನದ ಮೇಲೆ ಕಳುಹಿಸಿದನು. ಆ ದಂಡು (Pruth) ಪ್ರುಥ್ ಎಂಬ ನದಿಯನ್ನು ದಾಟಿ ಹೋಗಿ (Moldavia) ಮೋಲ್ಡೇವಿಯಾ ಮತ್ತು (Wallachia) ವಾಲಾಚಿಯಾ ಎಂಬ ತುರ್ಕೀ ಪ್ರಾಂತಗಳನ್ನು ಹಿಡಿದುಕೊಂಡಿತು. ಈ ಸುದ್ದಿಯನ್ನು ತುರ್ಕಸ್ಥಾನದ ಸುಲ್ತಾನನು ಕೇಳಿ, ಸಿಟ್ಟಿಗೆದ್ದು, ರಶಿಯಾದ ವಿರುದ್ಧವಾಗಿ ಯುದ್ಧವನ್ನು ಸಾರಿ, ತತ್‌ಕ್ಷಣವೇ ತನ್ನ ದಂಡನ್ನು ರಶಿಯಾದ ಸೈನ್ಯಕ್ಕೆದಿರಾಗಿ ಕಳುಹಿಸಿದನು. ಈ ಯುದ್ಧವನ್ನು ಕುರಿತು ಗ್ಲ್ಯಾಡ್‌ಸ್ಟನ್ನನು ಮ್ಯಾಂಚೆಸ್ಟರ್ ಪಟ್ಟಣದಲ್ಲಿ ಒಳ್ಳೆ ಆವೇಶದ ಭಾಷಣಮಾಡಿದನು. ಅವನು "ಈ ಪ್ರಕರಣದಲ್ಲಿ ರಶಿಯಾದ ಸ್ವಾರ್ಥಬುದ್ಧಿಯು ಒಡೆದು ಕಾಣಿಸುತ್ತದೆ; ಎಲ್ಲ ರಾಷ್ಟ್ರಗಳ ಮೇಲೆ ತನ್ನ ಶ್ರೇಷ್ಠತ್ವವನ್ನು ಸ್ಥಾಪಿಸಬೇಕೆಂಬ ಉತ್ಕಟೇಚ್ಛೆಯು ಅದಕ್ಕೆ ಉಂಟಾಗಿದೆ; ಇವು ಎಷ್ಟು ಮಾತ್ರವೂ ಸಲ್ಲವು" ಎಂದು ಹೇಳಿದನು. ಅವನು ಇಷ್ಟಕ್ಕೇ ಸುಮ್ಮನಾಗದೆ ಒಮ್ಮೆಲೇ ಇಂಗ್ಲೀಷ ಸೈನ್ಯವನ್ನು ತುರ್ಕಸ್ಥಾನದ ಸುಲ್ತಾನನ ಸಹಾಯಕ್ಕಾಗಿ ಕಳುಹಿಸಿದನು. ಈ ಕೆಲಸಕ್ಕೆ ಫ್ರೆಂಚ್ ಸರಕಾರದವರೂ ನೆರವಾದರು. ಈ ಮೇರೆಗೆ ತುರ್ಕಸ್ಥಾನ, ಇಂಗ್ಲಂಡ್ ಮತ್ತು ಫ್ರಾನ್ಸ್ ಈ ಮೂರು ದೇಶಗಳು ರಶಿಯಾದ ವಿರುದ್ಧವಾಗಿ ನಿಲ್ಲಲು, ಒಂದು ಘೋರತರ ಸಂಗ್ರಾಮವು ಕರೇಸಮುದ್ರದಲ್ಲಿ ನಡೆಯಿತು. ಈ ಯುದ್ಧದ ವೆಚ್ಚವನ್ನು ತೆರುವ ಭಾರವು ಗ್ಲ್ಯಾಡ್‌ಸ್ಟನ್ನನ ಮೇಲೆ ಬಿತ್ತು. ಇದರಿಂದ ಅವನು ತನ್ನ ಆಯವ್ಯಯ ಪತ್ರಿಕೆಯಲ್ಲಿ ಉಲ್ಲೇಖಿಸಿದ ಸುಧಾರಣೆಗಳನ್ನೆಲ್ಲ ಒತ್ತಟ್ಟಿಗಿಟ್ಟು, ೩ ಕೋಟಿ ೪೦ ಲಕ್ಷ ರೂಪಾಯಿಗಳನ್ನು *ಸಾಲಮಾಡಿ, ಆ ಹಣ

ದಿಂದ ಈ ಯುದ್ಧವನ್ನು ಸಾಗಿಸಬೇಕಾಯಿತು. ಈ ಸಂಗತಿಯು ಇಷ್ಟು ದಿವಸಗಳ ವರೆಗೆ ಹೊಂಚು ಹಾಕಿಕೊಂಡಿದ್ದ ಪ್ರತಿಪಕ್ಷದವರಿಗೆ ಅವನ ವಿರುದ್ಧವಾಗಿ ಕೂಗನ್ನೆಬ್ಬಿಸಲು ಸಾಕಷ್ಟು ಇಂಬುಗೊಟ್ಟಿತು. ಈ ಕಾಲದಲ್ಲಿ (Mr Roebuck) ಮಿಸ್ಟರ್ ರೋಬಕ್ಕನೆಂಬವನು "ಈ ಯುದ್ಧದಲ್ಲಿ ವ್ಯವಸ್ಥೆಯು ಏನಷ್ಟಾದರೂ ಇಲ್ಲವೆಂತಲೂ ಕಾಳಗದಲ್ಲಿ ಗಾಯಪಟ್ಟ ಮತ್ತು ಬೇನೆಬಿದ್ದ ದಂಡಾಳುಗಳಿಗೆ ಸಹ ಹೊಟ್ಟೆತುಂಬ ಅನ್ನವೂ ಹೊತ್ತುಹೊತ್ತಿಗೆ ಔಷಧವೂ ಬೆಚ್ಚಗಿನ ಹೊದ್ದಿಕೆಗಳೂ ಸಿಗುವದಿಲ್ಲೆಂತಲೂ ಕೇಳುತ್ತೇನೆ. ಅದು ಕಾರಣ ಅಲ್ಲಿಯ ಸ್ಥಿತಿಯನ್ನು ವಿಚಾರಿಸುವದಕ್ಕಾಗಿ ಒಂದು 'ಕಮಿಶನ್' ಅಂದರೆ ಪಂಚಾಯತಿಸಭೆಯನ್ನು ನಿಯಮಿಸಿ ಕಳುಹಿಸತಕ್ಕದ್ದು" ಎಂದು ಪಾರ್ಲಮೆಂಟಿಗೆ ಸೂಚಿಸಿದನು. ಈ ಸುದ್ದಿಯು ಸುಳ್ಳೆಂದು ಹೇಳಲಿಕ್ಕೆ ಬರುವಂತಿದ್ದಿಲ್ಲ. ಅದು ಕಾರಣ ಲಾರ್ಡ್ ಜಾನ್ ರಸೆಲ್ಲನು ಬೇರೆ ಉಪಾಯಗಾಣದೆ ತನ್ನ ಮುಖ್ಯ ಮಂತ್ರಿಯ ಉದ್ಯೋಗವನ್ನೇ ಬಿಟ್ಟುಕೊಟ್ಟನು. ಆ ಮೇಲೆ ಈ ಆರೋಪವು ನಿರಾಧಾರವಾದದ್ದೆಂದು ಪಾರ್ಲಮೆಂಟಿನವರ ನಿದರ್ಶನಕ್ಕೆ ತಂದುಕೊಡುವ ಭಾರವು ಗ್ಲ್ಯಾಡ್‌ಸ್ಟನ್ನನ ಮೇಲೆ ಬಿತ್ತು. ಅವನು ಈ ವಿಷಯದಲ್ಲಿ ತನ್ನಿಂದಾದಷ್ಟು ಪ್ರಯತ್ನಿಸಿದನು. ಆದರೆ ಈ ಯುದ್ಧದ ವಿಷಯವಾಗಿ ಜನರ ಮನಸಿನಲ್ಲಿದ್ದ ಪ್ರತಿಕೂಲ ಅಭಿಪ್ರಾಯವನ್ನು ತಿರುಗಿಸುವದು ಅವನಿಂದಾಗಲಿಲ್ಲ. ಅದು ಕಾರಣ ಪಾರ್ಲಮೆಂಟಿನಲ್ಲಿ ರೋಬಕ್ಕನಿಗೆ ೩೦೫ ಮತ್ತು ಗ್ಲ್ಯಾಡ್‌ಸ್ಟನ್ನನಿಗೆ ೧೪೮ ಮತಗಳು ದೊರೆದವು. ಹೀಗಾಗಿ ಸರಕಾರದವರ ಪಕ್ಷವು ಹಿಮ್ಮೋಡಾಯಿತು. ಆದರೂ ಬಹು ಜನರು ಈ ಕಾಲದಲ್ಲಿ ಗ್ಲ್ಯಾಡ್‌ಸ್ಟನ್ನನನ್ನು ಹೊಗಳದೆ ಇರಲಿಲ್ಲ. ನಾಮದಾರ ಪ್ರಿನ್ಸ್ ಆಲ್ಬರ್ಟ್ ದೊರೆಗಳು ಅಂದರೆ ಮಹಾರಾಣೀ ಸಾಹೇಬರ ಪತಿಗಳು ಬ್ಯಾರನ್ ಸ್ಟಾಕಮ್ಮಾರನಿಗೆ "ಈ ಯುದ್ಧಪ್ರಕರಣದಲ್ಲಿ ಗ್ಲ್ಯಾಡ್‌ಸ್ಟನ್ನನ ವರ್ತನವು ಗಂಡಸುತನದ್ದೂ ರಾಜನೀತಿಗೆ ಸರಿಯಾದದ್ದೂ ಪ್ರಾಮಾಣಿಕತನದ್ದೂ ಆಗಿದೆ" ಎಂಬ ಅಭಿಪ್ರಾಯದ ಪತ್ರವನ್ನು ಬರೆದಿರುವರು. ಲಾರ್ಡ್ ಜಾನ್ ರಸೆಲ್ಲನ ತರುವಾಯ (Lord Pamerston) ಲಾರ್ಡ್ ಪಾಮರ್‌ಸ್ಟನ್ನನು ಮುಖ್ಯ ಮಂತ್ರಿಯಾದನು. ಅವನ ಅಪೇಕ್ಷೆಯಂತೆ ಗ್ಲ್ಯಾಡ್‌ಸ್ಟನ್ನನು ಚಾನ್ಸಲರ್-ಆಫ್-ದಿ-ಎಕ್ಸಚಕ್ಕರನ ಉದ್ಯೋಗದಲ್ಲಿಯೇ ಉಳಿದನು.

ಅತ್ತಕಡೆಗೆ ಯುದ್ಧವು ನಡೆಯುತ್ತೇ ಇತ್ತು—(Sebastopol) ಸಿಬಾಸ್ಟೋಪಲ್ ಕಾಳಗದಲ್ಲಿ ರಶಿಯನ್ನರು ಪರಾಜಯ ಪಟ್ಟರು. ಈ ಸಮಯದಲ್ಲಿ ಅವರ ಬಾದಶಹನು ಹೊಸದಾಗಿ ಸಿಂಹಾಸನವನ್ನೇರಿದ್ದನು. ಅವನ ಮನಸಿಗೆ ಈ ಯುದ್ಧವು ಬಂದಿದ್ದಿಲ್ಲ. ಆದರೆ ಇದು ತನ್ನ ತಂದೆಯು ಹೂಡಿದ ಯುದ್ಧವೆಂಬ ಅಭಿಮಾನದಿಂ

ದ ಇದನ್ನು ಅಂತೂ ಇಂತೂ ನಡೆಯಿಸಿದ್ದನು. ಇದೇ ಮೇರೆಗೆ ಫ್ರಾನ್ಸದ ಬಾದ ಶಹನಿಗೂ ಈ ಯುದ್ಧವು ಬೇಡಾಗಿತ್ತು. ಇಷ್ಟರಲ್ಲಿ ಸುತ್ತಲೂ ಶಾಂತತೆಯನ್ನುಂಟು ಮಾಡುವ ಸ್ತುತ್ಯ ಉದ್ದೇಶದಿಂದ ಆಸ್ಟ್ರಿಯದ ಮಹಾರಾಜನು ಮುಂದಾಳಾಗಿ ನಿಂತು, ಎಲ್ಲ ಅರಸರ ಅನುಮತಿಯಿಂದ ಒಂದು ಶಾಂತತೆಯ ಒಪ್ಪಂದವನ್ನು ಮಾಡುವ ಪ್ರಯತ್ನಕ್ಕೆ ಹತ್ತಿದನು. ಅದೇ ಪ್ರಕಾರ ಇಂಗ್ಲಂಡ್, ಫ್ರಾನ್ಸ್, ಆಸ್ಟ್ರಿಯಾ, ಪ್ರುಸಿಯಾ, ತುರ್ಕಸ್ಥಾನ, ಸಾರ್ಡೀನಿಯಾ ದೇಶಗಳ ರಾಯಭಾರಿಗಳು ಪಾರಿಸ್ ಪಟ್ಟಣದಲ್ಲಿ ನೆರೆದು, ಸ್ ೧೮೫೬ ನೆಯ ಇಸವಿಯ ಫೆಬ್ರುವರಿ ೨೬ ನೆಯ ತಾರೀಖಿನಿಂದ ಮಾರ್ಚ ೩೦ ನೆಯ ತಾರೀಖಿನ ವರೆಗೆ ಚರ್ಚೆ ನಡೆಯಿಸಿ, ಕಟ್ಟಕಡೆಗೆ ಒಂದು ಒಪ್ಪಂದವನ್ನು ಮಾಡಿದರು. ಇದರಿಂದ ಕಾರ್ಸ್ ಸ್ಥಳವನ್ನು ತುರ್ಕಸ್ಥಾನಕ್ಕೆ ತಿರುಗಿ ಕೊಡಬೇಕು; ಪ್ರತಿಪಕ್ಷದವರು ಹಿಡಿದುಕೊಂಡಿದ್ದ ಸಿಬಾಸ್ಟೋಪಲ್ಲವನ್ನೂ ಎರಡನೆಯ ಸ್ಥಳಗಳನ್ನೂ ರಶಿಯಾಕ್ಕೆ ಬಿಟ್ಟುಕೊಡಬೇಕು; ಯುರೋಪದೊಳಗಿನ ಉಳಿದ ರಾಷ್ಟ್ರಗಳಿಗಿರುವಂತೆ ತುರ್ಕಸ್ಥಾನಕ್ಕೂ ಸಾರ್ವತ್ರಿಕ ವ್ಯವಹಾರಗಳ ಅಧಿಕಾರವಿರಬೇಕು; ತುರ್ಕಸ್ಥಾನದ ಸ್ವಾತಂತ್ರ್ಯರಕ್ಷಣೆಗಾಗಿ ಉಳಿದ ರಾಷ್ಟ್ರಗಳು ಯತ್ನಿಸಬೇಕು" ಎಂದು ಗೊತ್ತಾಯಿತು. ಇದಕ್ಕೆ ತುರ್ಕಸ್ಥಾನದ ಸುಲ್ತಾನನು ಬಹು ಸಂತೋಷಬಟ್ಟು, ತಾನಾಗಿಯೇ "ನಾವು ನಮ್ಮ ರಾಜ್ಯದಲ್ಲಿರುವ ಕ್ರಿಸ್ತೀ ಜನರನ್ನು ಕಾಪಾಡಿ, ಅವರ ಸ್ಥಿತಿಯನ್ನು ಸುಧಾರಿಸಲು ನಮ್ಮಿಂದಾದಷ್ಟು ಪ್ರಯತ್ನಿಸುವೆವು" ಎಂದು ಪ್ರಸಿದ್ಧಿಸಿದನು. ಈ ಒಪ್ಪಂದದಿಂದ ತನ್ನ ಬಯಕೆಗಳೆಲ್ಲ ಈಡೇರಿದವೆಂದು ನೋಡಿ, ಗ್ಲ್ಯಾಡ್‌ಸ್ಟನ್ನನು ಹಿರಿಹಿರಿ ಹಿಗ್ಗಿದನು.

ಡಾನ್ ಪಾಸಿಫಿಕೋನ ಮತ್ತು ಫಿನಲೇ ಎಂಬವನ ಪ್ರಕರಣಗಳು, ೧೮೪೭.

ಇದಾದ ಮೇಲೆ ಇಂಗ್ಲಂಡದ ಒಡ್ಡೋಲಗಕ್ಕೆ (Don Pacifico) ಡಾನ್ ಪಾಸಿಫಿಕೋ ಎಂಬವನ ದೊಡ್ಡ ಪ್ರಕರಣವು ಬಂತು. ಇದು ಯುರೋಪ ಖಂಡದ ರಾಷ್ಟ್ರಗಳ ನಡುವೆ ದೊಡ್ಡದೊಂದು ಯುದ್ಧವನ್ನೇ ಹೂಡುವ ಭೀತಿಯನ್ನುಂಟು ಮಾಡಿತು. ಇದನ್ನು ನಿವಾರಿಸಲು ಗ್ಲ್ಯಾಡ್‌ಸ್ಟನ್ನನ ವಕ್ತೃತ್ವವೆ ವಿಶೇಷ ಕಾರಣವಾಯಿತು. ಅದರ ವಿವರವೇನೆಂದರೆ:— ಡಾನ್ ಪಾಸಿಫಿಕೋ ಎಂಬ ಹೆಸರಿನ ಒಬ್ಬ ಯಹೂದೀ ಗೃಹಸ್ಥನು ಅಥೆನ್ಸ ಪಟ್ಟಣಕ್ಕೆ ಹೋಗಿ, ಅಲ್ಲಿ ಇರುತ್ತಿದ್ದನು. ಅವನು ಜಿಬ್ರಾಲ್ಟರದಲ್ಲಿ ಹುಟ್ಟಿ ಅಲ್ಲೇ ಎಷ್ಟೋ ವರ್ಷಗಳ ವರೆಗೆ ಇದ್ದುದರಿಂದ, ತಾನೊಬ್ಬ ಮಹಾರಾಣೀ ಸರಕಾರದ ಪ್ರಜೆಯಾಗಿದ್ದೇನೆಂದೆನ್ನಿಸಿಕೊಳ್ಳುತ್ತಿದ್ದನು. ಅವನು ಅಥೆನ್ಸ ಪಟ್ಟಣದಲ್ಲಿ ಯಾರ ಹಾದಿಗೂ ಹೋಗದೆ, ತನ್ನಷ್ಟಕ್ಕೆ ತಾನು ಸ್ವಸ್ಥವಾಗಿ ಇರುತ್ತಿದ್ದನು. ಆದರೆ ಈಸ್ಟರ ಹಬ್ಬದ ದಿವಸ ಯಹೂದೀ ಜನರಿಗೆ ಇಲ್ಲದ್ದೊಂದು ಚೇಷ್ಟೆ ಮಾಡುವ ಮತ್ತು

ಅವರಿಗೆ ನಷ್ಟವನ್ನುಂಟು ಮಾಡುವ ಕೆಟ್ಟ ಚಾಳಿಯು ಅಥೆನ್ಸದವರಲ್ಲಿತ್ತು. ಇದರ ವಿರುದ್ಧವಾಗಿ ಅಲ್ಲಿಯ ಸರಕಾರದವರು ಬಿಗಿಯಾದ ಕಟ್ಟಳೆಗಳನ್ನು ಮಾಡಿದ್ದರು. ಆದರೂ ಆ ಕಟ್ಟಳೆಗಳನ್ನು ಮೀರಿ ಸನ್ ೧೮೪೭ ನೆಯ ಇಸವಿಯ ಈಸ್ಟರ್ ಹಬ್ಬದ ದಿನ, ಅಲ್ಲಿಯ ಜನರು ಸುಮ್ಮಸುಮ್ಮನೆ ಡಾನ್ ಪಾಸಿಫಿಕೋನ ಮನೆಯನ್ನು ಹೊಕ್ಕು, ಕೈಗೆ ಸಿಕ್ಕ ವಸ್ತು ಒಡವೆಗಳನ್ನೆಲ್ಲ ಒಡೆದು, ಚೂರು ಚೂರು ಮಾಡಿಬಿಟ್ಟರು ಇದನ್ನು ನೋಡಿ ಪಾಸಿಫಿಕೋನು ಅಲ್ಲಿಯ ಸರಕಾರದವರ ಕಡೆಗೆ ಹೋಗಿ, 'ನನ್ನ ಸಾಮಾನು ಮುಂತಾದವುಗಳನ್ನು ಗ್ರೀಕ್ ಜನರು ಈ ಪರಿ ನಿರರ್ಥಕವಾಗಿ ನಾಶ ಮಾಡಿದ್ದರಿಂದ ನನಗೆ ೭ ಲಕ್ಷ ೨೦ ಸಾವಿರ ರೂಪಾಯಿಗಳ ನಷ್ಟವುಂಟಾಗಿದೆ; ಇಷ್ಟು ಹಣವು ನನಗೆ ಬರತಕ್ಕದ್ದು' ಎಂದು ಫಿರ್ಯಾದಿ ಮಾಡಿದನು. ಇದನ್ನು ಸರಕಾರದವರು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಇದಲ್ಲದೆ (Finlay) ಫಿನಲೇ ಎಂಬೊಬ್ಬ ಇಂಗ್ಲಿಷ್ ಗೃಹಸ್ಥನು ಅಥೆನ್ಸದಲ್ಲಿ ಮನೆಮಾರು ಮಾಡಿಕೊಂಡಿರುತ್ತಿದ್ದನು. ಅವನದೊಂದು ಭೂಮಿಯನ್ನು ಸರಕಾರದವರು ಸಾರ್ವಜನಿಕ ಕೆಲಸಕ್ಕಾಗಿ ತೆಗೆದುಕೊಂಡು, ಅವನು ಬೇಡಿದಷ್ಟು ಹಣವನ್ನು ಅವನಿಗೆ ಕೊಟ್ಟಿದ್ದಿಲ್ಲ. ಇದೊಂದು ಎರಡನೆಯ ಫಿರ್ಯಾದೆಯು ಅವರ ಮೇಲೆ ಆಗಿತ್ತು. ಇದಕ್ಕೂ ಅವರು ಅಲಕ್ಷ ಮಾಡುತ್ತ ಬಂದಿದ್ದರು. ಇವು ಸಣ್ಣ ಸಂಗತಿಗಳಾಗಿದ್ದರೂ, ಇವುಗಳಿಗೂ ರಾಜಕರಣಕ್ಕೂ ಏನೂ ಸಂಬಂಧವಿಲ್ಲದಿದ್ದರೂ, ಆ ಕಾಲದ ಪರರಾಷ್ಟ್ರ ಸಂಬಂಧದ ಇಂಗ್ಲಂಡದ ಮಂತ್ರಿಯಾದ ಲಾರ್ಡ್ ಪಾಮರ್‌ಸ್ಟನ್ನನು ಇವುಗಳನ್ನು ನಿರರ್ಥಕವಾಗಿ ಬೆಳೆಯಿಸಿದನು. ಗ್ರೀಕ್ ಒಡ್ಡೋಲಗದಲ್ಲಿದ್ದ ಫ್ರೆಂಚ್ ರಾಯಭಾರಿಯು ಇಂಗ್ಲಂಡಕ್ಕೆ ಅಪಮಾನ ಮಾಡಬೇಕೆಂಬ ಉದ್ದೇಶದಿಂದ ಗ್ರೀಕ್ ಸರಕಾರದವರಿಗೆ ಇಲ್ಲದ್ದೊಂದು ಹೇಳಿ ಈ ಅನುಚಿತ ಕೃತ್ಯಗಳನ್ನು ಅವರಿಂದ ಮಾಡಿಸಿರುವನೆಂದು ಗ್ರಹಿಸಿ, ಅವನು ಒಂದು ಇಂಗ್ಲಿಷ್ ಹಡಗುಪಡೆಯನ್ನು ಬಮ್ಮೆಲೇ ಪಾಯರಿಸ್ ಸಮುದ್ರಕ್ಕೆ ಕಳುಹಿಸಲು, ಅದು ಅಲ್ಲಿದ್ದ ಗ್ರೀಕ್ ಸರಕಾರದ ಮತ್ತು ಗ್ರೀಕ್ ವರ್ತಕರ ಹಡಗುಗಳನ್ನೆಲ್ಲ ಹಿಡಿದುಕೊಂಡಿತು. ಈ ಸುದ್ದಿಯನ್ನು ಕೇಳಿ, ಗ್ರೀಕ್ ಸರಕಾರದವರು ಫ್ರಾನ್ಸ್ ಮತ್ತು ರಶಿಯಾ ದೇಶಗಳ ಸಹಾಯವನ್ನು ಬೇಡಿದರು. ಯಾಕೆಂದರೆ, ಗ್ರೀಸದ ಸ್ವಾತಂತ್ರ್ಯವನ್ನು ಸಂರಕ್ಷಿಸುವದಕ್ಕಾಗಿ ಹಿಂದಕ್ಕೆ ಆದದ್ದೊಂದು ಒಪ್ಪಂದದಲ್ಲಿ ಇಂಗ್ಲಂಡವು ಮತ್ತು ಈ ಎರಡು ರಾಷ್ಟ್ರಗಳು ಸೇರಿದ್ದವು. ಈ ರಾಷ್ಟ್ರದವರು ಗ್ರೀಕ್ ಸರಕಾರದ ಪಕ್ಷವನ್ನು ವಹಿಸಿ ಲಾರ್ಡ ಪಾಮರ್‌ಸ್ಟನ್ನನಿಗೆ ಈ ಸಂಗತಿಯನ್ನು ಕುರಿತು ಕೆಲವು ಪ್ರಶ್ನಗಳನ್ನು ಮಾಡಿದರು. ಆದರೆ ಅವನು ಆ ಪ್ರಶ್ನಗಳಿಗೆ ಸಮರ್ಪಕವಾದ ಉತ್ತರಗಳನ್ನು ಕೊಡಲಿಲ್ಲ. ಇದರಿಂದ ಯುರೋಪಖಂಡದ ರಾಷ್ಟ್ರಗಳ ನಡುವೆ ಒಂದು ಭ

ಭಯಂಕರವಾದ ಯುದ್ಧವೇ ಹತ್ತುವ ಲಕ್ಷಣಗಳು ತೋರಲಾರಂಭಿಸಿದವು. ಇದನ್ನು ನೋಡಿ ಗ್ಲಾಡ್‌ಸ್ಟನ್ನನು ಬಹು ಖೇದಗೊಂಡು, ಪಾರ್ಲಮೆಂಟ್ ಸಭೆಯಲ್ಲಿ ಈ ವಿಷಯದ ಮೇಲೆ ಒಂದು ಆವೇಶದ ಭಾಷಣ ಮಾಡಿದನು. ಅದು ಅವನ ಅತ್ಯುತ್ತಮ ಭಾಷಣಗಳಲ್ಲಿ ಒಂದೆಂದು ಎಣಿಸಲ್ಪಡುತ್ತದೆ. ಲಾರ್ಡ್ ಪಾಮರ್‌ಸ್ಟನ್ನನು ತನ್ನ ಈ ಕೃತ್ಯಗಳ ಪುಷ್ಟೀಕರಣಾರ್ಥವಾಗಿ ಮಾತನಾಡಿದ್ದನ್ನು ಉದ್ದೇಶಿಸಿ ಗ್ಲಾಡ್‌ಸ್ಟನ್ನನು ಹೇಳಿದ್ದೇನಂದರೆ:—“ಪರರಾಷ್ಟ್ರ ಸಂಬಂಧದ ಮಂತ್ರಿಗಳು, ಪ್ರಾಚೀನ ಕಾಲದಲ್ಲಿ ಹೆಸರ್ಗೊಂಡಿದ್ದ ರೋಮ ಪಟ್ಟಣದ ನಿವಾಸಿಗಳಿಗೆ ನಮ್ಮಲ್ಲಿಯ ಪ್ರತಿ ಒಬ್ಬ ಇಂಗ್ಲಿಷ್ ಮನುಷ್ಯನನ್ನು ಹೋಲಿಸುತ್ತಾರೆ ಮತ್ತು ಅವರಿಗಿದ್ದಷ್ಟು ವಿಶೇಷ ಅಧಿಕಾರಗಳೂ ಹಕ್ಕುಗಳೂ ನಮ್ಮ ಇಂಗ್ಲಿಷ್ ಮನುಷ್ಯನಿಗೂ ಇರುತ್ತವೆಂದು ಪ್ರತಿಪಾದಿಸುತ್ತಾರೆ. ಆದರೆ ಆ ರೋಮ ಪಟ್ಟಣದ ಪ್ರತಿ ಒಬ್ಬ ನಿವಾಸಿಯು ವಿಶೇಷ ಅಧಿಕಾರಗಳುಳ್ಳ ಒಂದು ಸ್ವತಂತ್ರ ಜಾತಿಯಲ್ಲಿ ಹುಟ್ಟಿದವನಾಗಿದ್ದನು; ಅವನು ರಣಧುರಂಧರವಾದ ಆ ಕ್ಷತ್ರಿಯ ಜಾತಿಗೆ ಸೇರಿದವನಾಗಿದ್ದನು; ತನ್ನ ಮುಂಗೈ ಕಸುವಿನಿಂದ ಮಿಕ್ಕ ರಾಷ್ಟ್ರದವರನ್ನು ಗೆದ್ದು, ಅವರನ್ನು ತನ್ನ ದಾಸಾನುದಾಸರನ್ನಾಗಿ ಮಾಡಿಕೊಂಡಿದ್ದ ಆ ತುಂಗವಿಕ್ರಮ ಜನಾಂಗದಲ್ಲಿ ಜನಿಸಿದವನಾಗಿದ್ದನು. ಯಾರಿಗೂ ಎಂದೆಂದಿಗೂ ಇಲ್ಲದ ಅಪೂರ್ವವಾದ ಕಾಯಿದೆಕಟ್ಟಳೆಗಳೂ ವಿಶೇಷ ಹಕ್ಕುಗಳೂ ನಿರಂಕುಶವಾದ ಅಧಿಕಾರಗಳೂ ಅವನಿಗಿದ್ದವು. ಅವನಿಗಿದ್ದ ಈ ಹಕ್ಕುಗಳನ್ನೂ ಅಧಿಕಾರಗಳನ್ನೂ ವಿರೋಧಿಸುವ ಧೈರ್ಯವಾಗಲಿ, ಸಾಮರ್ಥ್ಯವಾಗಲಿ ಆ ಕಾಲದೊಳಗಿನ ಯಾವ ಜನಾಂಗದವರಿಗೂ ಯಾವ ರಾಷ್ಟ್ರದವರಿಗೂ ಇದ್ದಿಲ್ಲ. ರೋಮದ ನಿವಾಸಿಯು ಅಥವಾ ರೋಮ ರಾಜ್ಯವು ಎಂಬ ಶಬ್ದವನ್ನು ಕೇಳಿದ ಮಾತ್ರವೇ ಪರದೇಶದವರು ಗದಗದ ನಡುಗುತ್ತಿದ್ದರು. ಈ ಮೇರೆಗೆ ರೋಮ ರಾಜ್ಯವು ತನ್ನ ದರ್ಪನ್ನೂ ತನ್ನ ಶ್ರೇಷ್ಠತ್ವವನ್ನೂ ಸುತ್ತಲಿನ ರಾಜ್ಯಗಳ ಮೇಲೆ ಕುಳ್ಳಿರಿಸಿತ್ತು. ಆ ದರ್ಪ ಮತ್ತು ಆ ಶ್ರೇಷ್ಠತ್ವವು ಈ ಕಾಲದಲ್ಲಿ ನಮ್ಮ ಇಂಗ್ಲಂಡಕ್ಕಿರುವವೋ? ಇಂಗ್ಲಂಡದ ಅಪ್ಪಣೆಗಳನ್ನೆಲ್ಲ ಪರರಾಷ್ಟ್ರದವರು ಪಾಲಿಸುತ್ತಿರುವರೋ? ನಮ್ಮ ದೇಶವು ಪರದೇಶಗಳಿಗಿಂತ ಶ್ರೇಷ್ಠವಾದದ್ದೆಂತಲೂ ಅವುಗಳಲ್ಲಿರುವ ಅಜ್ಞಾನವನ್ನೂ ದುರ್ಗುಣಗಳನ್ನೂ ಕಿತ್ತುಹಾಕಿ, ಅವುಗಳನ್ನು ಸನ್ಮಾರ್ಗಕ್ಕೆ ತಿರುಗಿಸುವ ಸಂಪೂರ್ಣ ಗುರುತ್ವವು ತಮ್ಮ ಕಡೆಗಿರುತ್ತದೆಂತಲೂ ಲಾರ್ಡ್ ಪಾಮರ್‌ಸ್ಟನ್ ದೊರೆಗಳು ಗ್ರಹಿಸುವಂತೆ ಕಾಣಿಸುತ್ತದೆ. ಆದರೆ ಅವರ ಈಗಿನ ಕೃತ್ಯಗಳಿಂದ ನಮ್ಮ ಜನಾಂಗಕ್ಕೆ ಸೇರಿದವನು ಸ್ವಂತ ದೇಶದಲ್ಲಿರಲಿ, ಪರದೇಶದಲ್ಲಿರಲಿ, ಅವನು ಸರಳ ಸ್ವಭಾವದವನಾಗಿಯೂ ಪ್ರಾಮಾಣಿಕನಾಗಿಯೂ ಉದಾರ ಬುದ್ಧಿಯುಳ್ಳವನಾಗಿಯೂ ನಿಷ್ಕಪಟಿಯಾಗಿಯೂ ಸತ್ಯಶೀಲನಾಗಿಯೂ

ಶೂರನಾಗಿಯೂ ಇರುವನೆಂದು ಜಗತ್ತಿಗೆ ತೋರಿಸಿಕೊಡುವ ಭಾರವನ್ನು ನಾವಾಗಿಯೇ ನಮ್ಮ ತಲೆಯಮೇಲೆ ಹೊತ್ತುಕೊಂಡಂತಾಗಿದೆ. ಇದು ಹಾಗಿರಲಿ. ನಾನೇ ದೊಡ್ಡವನು, ನನ್ನ ಮುಂದೆ ಉಳಿದವರೆಲ್ಲರೂ ಹುಲ್ಲಿಗಿಂತ ಕಡೆಯೆಂದು ಬಿಂಕದಿಂದ ನಡೆಯುವ ದುರ್ಗುಣವು ನಮ್ಮಲ್ಲುಂಟೆಂದು ಪರದೇಶದವರು ನಮ್ಮ ಮೇಲೆ ಆರೋಪವನ್ನು ಹೊರಿಸುವರು. ಈ ಆರೋಪವು ಸಟೆಯೋ ದಿಟವೋ ನೀವೇ ತಿಳಿದು ನೋಡತಕ್ಕದ್ದು. ಸದ್ಗೃಹಸ್ಥರೇ, ನನ್ನ ಈ ಭಾಷಣವನ್ನು ಕೇಳಿ, ಈ ಮಹಾ ಸಭೆಯೊಳಗಿನ ಕೆಲವು ಜನರು ಮೂಗು ಮುರಿಯಬಹುದು. ಕೆಲವರು ನಾನು ಸ್ವದೇಶಾಭಿಮಾನಶೂನ್ಯನಾಗಿರುವೆನೆಂದು ನನ್ನನ್ನು ದೂಷಿಸಬಹುದು. ಆದರೆ ನಾನು ಅವುಗಳಿಗೆ ಹೆದರುವದಿಲ್ಲ. ನೀವಾದರೂ ಆ ಹುರುಡಿಲ್ಲದ ಮಾತಿಗೆ ಮರುಳಾಗಲಿಕ್ಕಿಲ್ಲೆಂದು ನಾನು ನಂಬುತ್ತೇನೆ. ಒಂದು ವೇಳೆ ನೀವು ಅವರ ಮಾತುಗಳಿಗೆ ಕಿವಿಜೋತು, ಈ ಪ್ರಕರಣಕ್ಕೆ ನಿಮ್ಮ ಒಪ್ಪಿಗೆಯನ್ನು ಕೊಟ್ಟರೆ, ಅಷ್ಟಕ್ಕೇ ತೀರಿತೆಂದು ಎಣಿಸಬೇಡಿರಿ. ನಿಮ್ಮ ಮೇಲೆ ಲಾರ್ಡರ ಸಭೆಯುಂಟು. ಒಂದು ಪಕ್ಷಕ್ಕೆ ಆ ಸಭೆಯವರು ಕೂಡ ಇದಕ್ಕೆ ಒಪ್ಪಿದರೆ, ಅವರ ಮೇಲೆ ಇಂಗ್ಲಂಡದ ಜನರಿರುವರು. ಅವರು ಸಹ ಇದಕ್ಕೆ ಸಮ್ಮತಿಸಿದರೆ, ಅವರ ಮೇಲೆ ವಿದ್ಯಾಚಾರ ಸಂಪನ್ನ ರಾಷ್ಟ್ರಗಳಿರುವವು. ಇವುಗಳನ್ನೆಲ್ಲ ದುರ್ಲಕ್ಷಿಸಿ, ಇಂಗ್ಲಂಡವು ತನ್ನ ದುರಾಗ್ರಹವನ್ನೇ ಹಿಡಿದುಕೊಂಡು ಕುಳಿತರೆ, ಆಯಾ ಹೊತ್ತಿಗೆ ಅದಕ್ಕೆ ಯಾರೂ ನೆರವಾಗಲಿಕ್ಕಿಲ್ಲ. ಅದು ಒಂಟಿಗವಾಗಿ ಉಳಿಯುವ ಪ್ರಸಂಗವು ಬರಬಹುದು. ಆದರೆ ಸಭ್ಯಗೃಹಸ್ಥರೇ, ಹೀಗಾಗುವದು ಎಷ್ಟು ಮಾತ್ರಕ್ಕೂ ಹಿತಕರವಾದದ್ದಲ್ಲ. ಪರರಾಷ್ಟ್ರದವರು ಸಶಕ್ತರಾಗಿರಲಿ, ಅಶಕ್ತರಾಗಿರಲಿ, ಅವರೆಲ್ಲರೂ ನಮಗೆ ಸಮಾನರೇ ಎಂದೆಣಿಸಿ ಅವರೊಡನೆ ಒಡಹುಟ್ಟಿದವರಂತೆ ನಡೆದುಕೊಳ್ಳುವುದು ಯುಕ್ತವು. ಒಬ್ಬರಿಗೊಬ್ಬರು ನೆರವಾಗುತ್ತ ಹಾಲು ಹಣ್ಣಿನಂತೆ ಒಮ್ಮನಸ್ಸಿನಿಂದಿರುವುದೇ ಲೇಸು. ನಮ್ಮ ದೇಶಬಾಂಧವರ ಹಕ್ಕುಗಳನ್ನು ಪರರಾಷ್ಟ್ರದವರು ಯಥಾಸ್ಥಿತವಾಗಿ ಕಾಪಾಡಲಿಕ್ಕೆಬೇಕೆಂದು ನಾವು ಅವರ ಮೇಲೆ ಒತ್ತಾಯ ಮಾಡಿದ ಬಳಿಕ, ಆ ಪರರಾಷ್ಟ್ರದವರ ಹಕ್ಕುಗಳನ್ನು ನಾವು ಕಾಪಾಡಬೇಡವೋ? ಆ ರಾಷ್ಟ್ರಗಳು ಸಣ್ಣವು, ಅಥವಾ ಬಲಹೀನವಾದವುಗಳು, ಅವುಗಳು ನಮಗೇನು ಮಾಡುವವು ಎಂಬ ಹೆಮ್ಮೆಯಿಂದ ನಾವು ಅವುಗಳನ್ನು ಉಪೇಕ್ಷಿಸುವದು ಸರಿಯಲ್ಲ. ನಮ್ಮ ದೇಶದ ಆಡಳಿತೆಯಲ್ಲಿ ಅನ್ಯರಾಷ್ಟ್ರದವರು ಕೈಹಾಕಿ, ಸುಮ್ಮಸುಮ್ಮನೆ ತೊಂದರೆ ಕೊಡಹತ್ತಿದರೆ, ನಾವು ಅದನ್ನು ತುಸುವಾದರೂ ತಡಕೊಳ್ಳುವದಿಲ್ಲ. ಆದರೆ ನಾವು ಅವರ ರಾಜ್ಯಕಾರಭಾರಗಳಲ್ಲಿ ಕೈಹಾಕಿದರೆ, ಅವರು ಮಾತ್ರ ತಡಕೊಳ್ಳಬೇಕೆಂದು ಹಟ ಹಿಡಿಯುವದು ನ್ಯಾಯವೋ? ನೀವೇ ವಿಚಾರ ಮಾಡಿರಿ.

ಅವನ ಈ ಭಾಷಣಕ್ಕೆ ಕೆಲವು ಜನರು ಮೆಚ್ಚಲಿಲ್ಲ. ಅವರು ಅವನ ವಿರುದ್ಧವಾಗಿ ಮನಬಂದಂತೆ ಮಾತನಾಡಿದರು. ಅವನಿಗೆ ಸ್ವದೇಶದ ಅಭಿಮಾನವೇ ಇಲ್ಲೆಂಬ ಗರ್ಭಿತಾರ್ಥವುಳ್ಳ ಭಾಷಣಗಳನ್ನು ಸಹ ಮಾಡಿದರು. ಆದರೆ ಇಷ್ಟು ಮಲಕುಗಳುಳ್ಳ, ಇಷ್ಟು ಬಲವುಳ್ಳ, ನ್ಯಾಯಕ್ಕೂ ಸತ್ಯಕ್ಕೂ ಇಷ್ಟು ನಿಕಟಸಂಬಂಧವುಳ್ಳ ಅವನ ಈ ಭಾಷಣವು ಪಾರ್ಲಮೆಂಟಿನೊಳಗಿನ ಎರಡೂ ಪಕ್ಷದವರ ಮನಸನ್ನು ಒಲಿಸಿಕೊಳ್ಳದೆ ಬಿಡಲಿಲ್ಲ. ಹೇಗಾದರೂ ಮಾಡಿ ಯುದ್ಧವನ್ನು ತಪ್ಪಿಸುವದೇ ಅವನ ಮುಖ್ಯ ಅಭಿಪ್ರಾಯವಾಗಿತ್ತು. ಅವನು ಪ್ರಿನ್ಸ್ ಬಿಸ್ಮಾರ್ಕನನ್ನು ಉದ್ದೇಶಿಸಿ ಒಂದು ಸಾರೆ "ರಕ್ತಪಾತದಿಂದ ಬರತಕ್ಕ ಕೀರ್ತಿಯನ್ನು ನಾನೊಲ್ಲೆ" ಎಂದು ಹೇಳಿದನು. ಮುಂದೆ ಈ ಗ್ರೀಸದ ಪ್ರಕರಣದಲ್ಲಿ ಉಳಿದ ರಾಷ್ಟ್ರದವರು ಮಧ್ಯಸ್ಥಿಕೆಯನ್ನು ಮಾಡಿ, ಆ ಗೃಹಸ್ಥರಿಗೆ ಗ್ರೀಕ್ ಸರಕಾರದವರಿಂದ ಹಣ ಕೊಡಿಸಿ, ಈ ನ್ಯಾಯವನ್ನು ಬಗೆ ಹರಿಸಿದರು.

ಅಯೋನಿಯನ್ ದ್ವೀಪಗಳ ಪ್ರಕರಣವು, ೧೮೬೪.

ಅಯೋನಿಯನ್ ಎಂಬ ಸಪ್ತದ್ವೀಪಗಳು ಗ್ರೀಸ ದೇಶದ ಪಶ್ಚಿಮ ದಿಕ್ಕಿಗಿರುತ್ತವೆ. ಅವುಗಳಲ್ಲಿ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯು ಸನ್ ೧೮೦೦ ನೆಯ ಇಸವಿಯಲ್ಲಿ ಸ್ಥಾಪಿಸಲ್ಪಟ್ಟಿತ್ತು. ಮುಂದೆ ೧೮೧೫ ನೆಯ ವರ್ಷದಲ್ಲಿ ಈ ದೊರೆತನವು ಇಂಗ್ಲಿಷ್ ಸರಕಾರದ ಮೇಲ್ವಿಚಾರಣೆಗೊಳಗಾಯಿತು. ಅಂದಿನಿಂದ ಈ ನಡುಗಡ್ಡೆಗಳಲ್ಲಿ (Lord High Commissioner) ಲಾರ್ಡ್ ಹಾಯ್ ಕಮಿಶನರ್ ಎಂಬೊಬ್ಬ ಇಂಗ್ಲಿಷ್ ಅಧಿಕಾರಸ್ಥನು ತುಸು ಸೈನ್ಯದೊಂದಿಗೆ ಇರಹತ್ತಿದ್ದನು. ಅವನು ಅಲ್ಲಿಯ ರಾಜ್ಯದಾಡಳಿತದಲ್ಲಿ ಏನೂ ಕೈಹಾಕದೆ, ಅದರ ಮೇಲೆ ತನ್ನ ಲಕ್ಷವನ್ನು ಮಾತ್ರ ಇಡುತ್ತಿದ್ದನು. ಅಲ್ಲಿಯ ನಿವಾಸಿಗಳು ಇಂಗ್ಲಂಡದ ಈ ಮೇಲ್ವಿಚಾರಣೆಯನ್ನು ತಪ್ಪಿಸಿ, ತಾವು ಗ್ರೀಸ ದೇಶಕ್ಕೆ ಅಧೀನರಾಗಿರುವದು ಲೇಸೆಂದೆಣಿಸುತ್ತಿದ್ದರು. ಅವರ ಈ ಚಾಂಚಲ್ಯವೃತ್ತಿಯ ಸುದ್ದಿಯು ಇಂಗ್ಲಂಡದ ದೊರೆತನದವರಿಗೆ ತಿಳಿಯಲು (Earl Derby) ಅರ್ಲ ಡರ್ಬಿಯು ಸನ್ ೧೮೫೮ ನೆಯ ವರ್ಷದಲ್ಲಿ ಗ್ಲ್ಯಾಡ್‌ಸ್ಟನ್ನನಿಗೆ (Lord High Commissioner Extraordinary) ಲಾರ್ಡ-ಹಾಯ್-ಕಮಿಶನರ್ ಎಕ್ಸಟ್ರಾ-ಆರ್ಡಿನರಿ ಎಂಬ ಅಧಿಕಾರವನ್ನು ಕೊಟ್ಟು, ಅಲ್ಲಿಯ ನಿವಾಸಿಗಳ ಮನಸನ್ನು ಇಂಗ್ಲಂಡದ ಕಡೆಗೆ ತಿರುಗಿಸಿಕೊಳ್ಳಬೇಕೆಂದು ಸೂಚಿಸಿ, ಅವನನ್ನು ಆ ನಡುಗಡ್ಡೆಗಳಿಗೆ ಕಳುಹಿಸಿದನು. ಅದೇಪ್ರಕಾರ ಗ್ಲ್ಯಾಡ್‌ಸ್ಟನ್ನನು ಅಲ್ಲಿಗೆ ಹೋಗಿ, ದೊಡ್ಡ ದೊಡ್ಡ ಸಭೆಗಳನ್ನು ನೆರೆಯಿಸಿ, ಅವರಿಗೆ ನಾನಾ ವಿಧವಾಗಿ ಉಪದೇಶ ಮಾಡಿದನು. ಆದರೂ ಅವರ ಮನಸು ಗ್ರೀಸ ದೇಶದ ಕಡೆಗೆ ಹರಿಯುತ್ತಿದ್ದದ್ದು ಹಿಂದುರುಗ

ಲಿಲ್ಲ. ಇಲ್ಲಿ ಹೇಳಬೇಕಾದದ್ದೊಂದು ವಿಶೇಷ ಸಂಗತಿ ಏನಂದರೆ—ಗ್ಲ್ಯಾಡ್‌ಸ್ಟ ನ್ನನು ಹೋಮರನೆಂಬ ಪ್ರಸಿದ್ಧ ಕವಿಯ ಕಾವ್ಯವನ್ನು ಮನಃಪೂರ್ವಕವಾಗಿ ಪ್ರೀತಿಸುತ್ತಿದ್ದನು. ಇದರಿಂದ ಆ ಕವಿಯು ಜನ್ಮದೇಶವಾದ ಗ್ರೀಸದ ಮೇಲೂ ಅವನ ಪ್ರೀತಿಯು ವಿಶೇಷವಾಗಿತ್ತು. ಈ ಕಾರಣಗಳಿಂದ, ಅಲ್ಲಿಯ ಜನರು, ತಾವು ಗ್ರೀಸ ದೇಶದ ಆಶ್ರಯದಲ್ಲಿರುವದೇ ಗ್ಲ್ಯಾಡ್‌ಸ್ಟನ್ನನ ಮನಸಿನಲ್ಲಿದ್ದರೂ ಅವನು ಅದನ್ನು ಹೊರಗೆಡವದೆ, ನಿರುಪಾಯಸ್ಥನಾಗಿ ಬಾಯಿಯಿಂದ ಮಾತ್ರ ಹೀಗೆ ಹೇಳುತ್ತಿರುವನೆಂದು ತಪ್ಪಾಗಿ ಗ್ರಹಿಸಿ, ಅವನ ಮಾತನ್ನು ಮನ್ನಿಸ ಲಿಲ್ಲ. ಕಟ್ಟಕಡೆಗೆ ಆ ಸಪ್ತದ್ವೀಪಗಳ ಪ್ರತಿನಿಧಿಗಳ ಸಭೆಯವರು ಸನ್ ೧೮೫೯ ರ ಜಾನೆವರಿ ೨೭ ನೆಯ ತಾರೀಖಿನ ದಿನ ನೆರೆದು, ಸರ್ವಾನುಮತ ದಿಂದ, ತಾವು ಗ್ರೀಸ ದೇಶಕ್ಕೆ ಅಧೀನರಾಗಿರಬೇಕೆಂದು ನಿರ್ಣಯಿಸಿ, ಕೆಲವು ದಿವಸಗಳಲ್ಲಿಯೇ ಅದೇ ಅಭಿಪ್ರಾಯದ ಒಂದು ವಿಜ್ಞಾಪನಾ ಪತ್ರಿಕೆಯನ್ನು ಬರೆ ದು, ಗ್ಲ್ಯಾಡ್‌ಸ್ಟನ್ನನಿಗೆ ಒಪ್ಪಿಸಿದರು. ಅದನ್ನು ಅವನು ಇಂಗ್ಲಂಡದ ದರಬಾರಿ ಗೆ ಕಳುಹಿಸಬೇಕಾಯಿತು. ಬಳಿಕ ಅವನು ಫೆಬ್ರುವರಿ ತಿಂಗಳಿನ ೧೯ ನೆಯ ತಾರೀ ಖಿನ ದಿವಸ, ಅಯೋನಿಯನ್ ನಡುಗಡ್ಡೆಗಳಿಂದ ಹೊರಟು, ಇಂಗ್ಲಂಡಕ್ಕೆ ತಿರು ಗಿ ಬಂದನು. ಅಲ್ಲಿ ಅವನು ವಿಶೇಷ ಹರಲಿಗೆ ಗುರಿಯಾದನು. ಹೋಮರನ ಮೇಲಿನ ಪ್ರೀತಿಯಿಂದ ಗ್ಲ್ಯಾಡ್‌ಸ್ಟನ್ನನೇ ಆ ನಡುಗಡ್ಡೆಗಳ ಜನರಿಗೆ ಗ್ರೀಸದೇ ಶದ ಆಶ್ರಯದಲ್ಲಿರಲು ಚುಚ್ಚಿಕೊಟ್ಟಿರಬಹುದೆಂದೆಣಿಸಿ, ಬಹು ಜನರು ಅವನಿಗೆ ಬಾಯಿಗೆ ಬಂದಂತೆ ಮಾತನಾಡಿದರು. ಸಜ್ಜನರು ಒಮ್ಮೊಮ್ಮೆ ಲೋಕಾಪವಾದಕ್ಕೆ ಈಡಾಗುವದುಂಟೆಂಬ ನಾಣ್ಣುಡಿಗೆ ಇದೊಂದು ತಕ್ಕ ದೃಷ್ಟಾಂತವಾಗಿದೆ.

ಗ್ಲ್ಯಾಡ್‌ಸ್ಟನ್ನನ ಆಯ ವ್ಯಯ ಪತ್ರಿಕೆಗಳು.

ಸನ್ ೧೮೬೦ ನೆಯ ವರ್ಷದ ಆಯವ್ಯಯ ಪತ್ರಿಕೆಯ ಮಸೂದೆಯನ್ನು ಗ್ಲ್ಯಾಡ್‌ಸ್ಟನ್ನನು ಸಿದ್ಧಮಾಡಿ, ಅದನ್ನು ಪಾರ್ಲಮೆಂಟ್ ಸಭೆಗೆ ಒಪ್ಪಿಸಿದನು. ಅದು ಬಹು ಮಹತ್ವವುಳ್ಳದ್ದಾಗಿತ್ತು. ಯಾಕೆಂದರೆ, ಅದೇ ಸಮಯದಲ್ಲಿ ಇಂ ಗ್ಲಂಡದ ಸರಕಾರದವರು ಕಾಬ್ಡನ್ನನೆಂಬ ದೊರೆಯನ್ನು ಅನಿರ್ಬಂಧ ವ್ಯಾಪಾರದ ತತ್ವಗಳನ್ನನುಸರಿಸಿ ಫ್ರಾನ್ಸದೊಂದಿಗೆ ಒಪ್ಪಂದದ ಕರಾರುಗಳನ್ನು ಮಾಡಿಕೊಂಡು ಬರಲಿಕ್ಕೆ ಅಲ್ಲಿಗೆ ಕಳುಹಿಸಿದ್ದರು. ಅವನು ಅದೇ ಮೇರೆಗೆ ದೀರ್ಘ ಪ್ರಯತ್ನಗ ಳಿಂದ ಫ್ರಾನ್ಸದಗೂಡ ಸರಿಯಾದ ಕರಾರುಗಳನ್ನು ಮಾಡಿಕೊಂಡು ತಿರುಗಿ ಬಂದ ಬಳಿಕ, ಅವುಗಳನ್ನನುಸರಿಸಿ ಕಾಗದದ ಮೇಲಿನ ಸುಂಕವನ್ನು ತೆಗೆದು ಹಾಕಬೇ ಕೆಂಬ ಅಭಿಪ್ರಾಯದ ಒಂದು ಕಾಯದೆಯ ಮಸೂದೆಯನ್ನು ಮಾಡಿ, ಪಾರ್ಲ ಮೆಂಟಿನಲ್ಲಿ ತಂದಿದನು. ಇದು ಬಹು ಜನರ ಮನಸಿಗೆ ಬಂದಿದ್ದಿಲ್ಲ. ಯಾಕೆಂ

ದರೆ, ಇದರಿಂದ ದೇಶದ ಉತ್ಪನ್ನವು ಕಡಿಮೆಯಾಗುವದಲ್ಲದೆ ಕಾಗದದ ಗಿರಣಿಗಳ ಒಡೆಯರಿಗೆ ಅಪರಿಮಿತ ನಷ್ಟವುಂಟಾಗುವದೆಂದು ಅವರು ಹೆದರಿಕೊಂಡಿದ್ದರು. ಈ ಮಸೂದೆಗೂ ೧೮೬೦ನೇ ವರ್ಷದ ಆಯವ್ಯಯ ಪತ್ರಿಕೆಯ ಮಸೂದೆಗೂ ನಿಕಟ ಸಂಬಂಧವಿತ್ತು. ಅದುಕಾರಣ ಎಲ್ಲರ ಲಕ್ಷ್ಯವು ಸ್ವಾಭಾವಿಕವಾಗಿಯೇ ಇದರ ಕಡೆಗೆ ತಿರುಗಿತ್ತು. ಇದನ್ನು ಮನಸಿನಲ್ಲಿ ತಂದು ಗ್ಲ್ಯಾಡ್‌ಸ್ಟನ್ನನು ಪಾರ್ಲಮೆಂಟಿನಲ್ಲಿ ತನ್ನ ಆಯವ್ಯಯ ಪತ್ರಿಕೆಯೊಳಗಿನ ವಿಷಯಗಳನ್ನು ವಿವರಿಸಿ ಹೇಳುವಾಗ್ಗೆ, ಕಾಗದದ ಮೇಲಿನ ಸುಂಕವನ್ನು ತೆಗೆದು ಹಾಕುವದರಿಂದ ಹಾನಿಗೆ ಬದಲಾಗಿ ಆದಾಯವು ಹೇಗಾಗುವದೆಂಬದನ್ನು ಸ್ಪಷ್ಟವಾಗಿ ವಿವರಿಸಿ ಹೇಳಿದನು. ಅದನ್ನು ಕೇಳಿ ಪಾರ್ಲಮೆಂಟ್ ಸಭಿಕರು ತಮ್ಮ ಮನಸಿನ ಸಂಶಯವನ್ನು ಬಿಟ್ಟು, ಆ ಮಸೂದೆಯನ್ನು ಮಂಜೂರು ಮಾಡಿ, ಲಾರ್ಡರ ಸಭೆಗೆ ಕಳುಹಿಸಿದರು. ಅಲ್ಲಿ ಅದರ ವಿರುದ್ಧವಾಗಿ ಬಹು ಜನರು ತಮ್ಮ ಅಭಿಪ್ರಾಯಗಳನ್ನು ಕೊಟ್ಟದ್ದರಿಂದ ಅದನ್ನು ಆ ಸಭೆಯವರು ಮಂಜೂರು ಮಾಡಲಿಲ್ಲ. ಇದಕ್ಕೆ ಗ್ಲ್ಯಾಡ್‌ಸ್ಟನ್ನನು ಅತಿಶಯ ಕೋಪಿಷ್ಠನಾಗಿ ತನ್ನ ಕೆಲಸವನ್ನೇ ಬಿಡಬೇಕೆಂದು ಯೋಚಿಸಿದನು. ಆದರೂ ವಿವೇಕದಿಂದ ಆ ಸಿಟ್ಟನ್ನು ನುಂಗಿಕೊಂಡು, ಮುಂದಿನ ವರ್ಷ ಅಂದರೆ ೧೮೬೧ನೆಯ ವರ್ಷದ ಆಯವ್ಯಯ ಪತ್ರಿಕೆಯಲ್ಲಿಯೇ ಆ ಸುಂಕದ ಮಸೂದೆಯ ತಾತ್ಪರ್ಯವನ್ನು ಬಹು ಯುಕ್ತಿಯಿಂದ ಸೇರಿಸಿ, ಅದನ್ನು ಲಾರ್ಡರ ಸಭೆಯ ಮುಂದಿಟ್ಟನು. ಆ ಪತ್ರಿಕೆಯನ್ನು ಸಭೆಯವರು ಮಂಜೂರು ಮಾಡಲೇ ಬೇಕಾಗಿತ್ತು. ಅದು ಕಾರಣ ಈ ಕಾಗದದ ಮೇಲಿನ ಜಕಾತಿಯ ವಿಷಯವಾಗಿ ಈಗ ಚರ್ಚೆ ನಡೆಯಿಸುವದು ತಕ್ಕದ್ದಲ್ಲೆಂದು ಯೋಚಿಸಿ ಲಾರ್ಡರ ಸಭೆಯವರು ಆ ಸಮಗ್ರ ಪತ್ರಿಕೆಯನ್ನೇ ಮಂಜೂರು ಮಾಡಿ ಬಿಟ್ಟರು. ಈ ವೇಳೆಗೆ ಗ್ಲ್ಯಾಡ್‌ಸ್ಟನ್ನನು ಲಾರ್ಡರ ಸಭೆಯಲ್ಲಿ, ಜಯ ಪಡೆದದ್ದು ಇದೇ ಮೊದಲನೆಯ ಸಾರೆಯು.

ಆ ಮೇಲೆ ಗ್ಲ್ಯಾಡ್‌ಸ್ಟನ್ನನು ಸನ್ ೧೮೬೩, ೧೮೬೪, ೧೮೬೫ ಮತ್ತು ೧೮೬೬ ಈ ನಾಲ್ಕು ವರ್ಷಗಳ ಆಯವ್ಯಯ ಪತ್ರಿಕೆಗಳನ್ನು ಆಯಾ ವರ್ಷಗಳಲ್ಲಿ ಸಿದ್ಧ ಮಾಡಿ, ಪಾರ್ಲಮೆಂಟ್ ಸಭೆಗೆ ಒಪ್ಪಿಸಿದನು. ಉದ್ಯೋಗ- ವ್ಯವಹಾರಗಳ ಮೇಲಿನ ಕರಗಳನ್ನು ಸಂಪೂರ್ಣವಾಗಿ ತೆಗೆದುಹಾಕುವದು, ಆದಾಯದ ಮೇಲಿನ ಕರವನ್ನು ಆದಷ್ಟು ಕಡಿಮೆ ಮಾಡುವದು, ಕೈ ಬಿಗಿಹಿಡಿದು ಹಣ ವೆಚ ಮಾಡುವದು, ಯುದ್ಧದ ಪ್ರಸಂಗಗಳನ್ನು ಕೈಲಾದ ಮಟ್ಟಿಗೆ ತಪ್ಪಿಸುವದು ಇವೇ ಮುಂತಾದ ತತ್ವಗಳನ್ನು ಮೇಲು ಪಂಕ್ತಿಯಾಗಿಟ್ಟುಕೊಂಡು, ಅವನು ಈ ನಾಲ್ಕೂ ವರ್ಷಗಳ ಅಂದಾಜು ಪತ್ರಿಕೆಗಳನ್ನು ಸಿದ್ಧ ಮಾಡಿದ್ದನು. ಇದರಿಂದ ಅವನು ಪ್ರತಿ ಒಂದು ವರ್ಷದ ಆದಾಯದ ಹಣದಲ್ಲಿ ಶಿಲುಕನ್ನು ಬಳಿತಾಗಿಯೇ ಉ

ಳಿಸಲು ಸಮರ್ಥನಾಗಿದ್ದನು. ಆದರೆ ಈ ಅವಧಿಯಲ್ಲಿ ಕ್ರಿಮಿಯಾದ ಯುದ್ಧವು ಹುಟ್ಟಿದ್ದರಿಂದಲೂ ಅಮೇರಿಕದಲ್ಲಿ ಅಂತಸ್ಥಕಲಹಗಳು ಎದ್ದು, ಅಲ್ಲಿಯ ಅರಳಿಯು ಬರುವದು ಕಟ್ಟಾಗಿ, ಇಂಗ್ಲಂಡದಲ್ಲಿ ಅದರ ದರವು ಮಿತಿ ಮೀರಿ ಏರಿದ್ದರಿಂದಲೂ ಅವನ ಆಯವ್ಯಯ ಪತ್ರಿಕೆಗಳೊಳಗಿನ ಹಲ ಕೆಲವು ಸೂಚನೆಗಳು ಪ್ರಚಾರದಲ್ಲಿ ಬಾರದೆ, ಅಷ್ಟಕ್ಕೇ ನಿಂತುಹೋದವು. ಆದರೂ ಕಾಬ್ಡೆನ್ನನು ಫ್ರಾನ್ಸದೊಂದಿಗೆ ಮಾಡಿದ ಒಪ್ಪಂದದಿಂದ, ಅವನ ಎಷ್ಟೋ ಉದ್ದೇಶಗಳು ಕೈಗೂಡಿದವು. ಕಾಬ್ಡೆನ್ನನು ಅನಿಯಂತ್ರಿತ-ವ್ಯಾಪಾರದ ಸಂಪೂರ್ಣಾಭಿಮಾನಿಯಾಗಿದ್ದುದರಿಂದ, ಅವನು ಗ್ಲ್ಯಾಡ್‌ಸ್ಟನ್ನನ ಕೃತ್ಯಗಳಿಗೆ ಮನಮುಟ್ಟಿ ಸಹಾಯ ಮಾಡಿದನು. ಇದರಿಂದ ಗ್ಲ್ಯಾಡ್‌ಸ್ಟನ್ನನಿಗೆ ಅತಿಶಯ ಆನಂದವಾಯಿತು. ಅವನು "ಒಂದುವೇಳೆ ಪಾರ್ಲಮೆಂಟಿನವರು ನನ್ನ ಸೂಚನೆಗಳನ್ನೆಲ್ಲ ಪ್ರಚಾರದಲ್ಲಿ ತರುತ್ತ ಬಂದಿದ್ದರೆ, ಸನ್ ೧೮೪೫ನೆಯ ವರ್ಷದಲ್ಲಿ ಒಟ್ಟು ೧೧೬೩ ಜಾತಿಯ ಬೇರೆ ಬೇರೆ ಸರಕುಗಳ ಮೇಲೆ ಬೀಳುತ್ತಿದ್ದ ಸುಂಕವು ಇಷ್ಟೊತ್ತಿಗೆ ಕಡಿಮೆಯಾಗಿ ೪೮ ಜಾತಿಯ ಸರಕುಗಳ ಮೇಲಷ್ಟೇ ಬೀಳುತ್ತಿತ್ತು" ಎಂದು ಒಂದುಸಾರೆ ಹೇಳಿದನು. ಅವನು ಈ ಉದ್ಯೋಗವನ್ನು ಕೈಕೊಂಡಾಗ್ಗೆ, ದೇಶದ ಆದಾಯಕ್ಕಿಂತ ವ್ಯಯದ ರಕಮು ಬಹಳೇ ಬೆಳೆದಿತ್ತು. ಆದರೆ ಸನ್ ೧೮೬೫ನೆಯ ವರ್ಷದ ಆಯವ್ಯಯ ಪತ್ರಿಕೆಯಲ್ಲಿ ಆದಾಯದ ಒಟ್ಟು ರಕಮಿನೊಳಗಿಂದ ವ್ಯಯದ ರಕಮನ್ನು ಕಳೆದು, ೩೨ ಲಕ್ಷ ಪೌಂಡು ಉಳಿಪಡಿಯನ್ನು ತೋರಿಸಿದ್ದನು. ಇದಲ್ಲದೆ ಈ ಮೊದಲೇ ೨ ಲಕ್ಷ ೪೦ ಸಾವಿರ ಪೌಂಡು ರಾಷ್ಟ್ರೀಯ ಸಾಲವನ್ನು ಹರಿದಿದ್ದನು. ದೇಶಕ್ಕೆ ಇಷ್ಟು ಉಳಿತಾಯವನ್ನು ಹಿಂದಕ್ಕೆ ಯಾರೂ ಮಾಡಿದ್ದಿಲ್ಲ. ಈ ಕೆಲಸದಲ್ಲಿ ಇಷ್ಟು ಚಾತುರ್ಯವನ್ನು ಈವೊತ್ತಿನವರೆಗೆ ಯಾರೂ ತೋರಿಸಿದ್ದಿಲ್ಲ. ಇದರಿಂದ ಗ್ಲ್ಯಾಡ್‌ಸ್ಟನ್ನನ ಕೀರ್ತಿಯು ಇಂಗ್ಲಂಡ್ ದೇಶದಲ್ಲಿ ಮಾತ್ರವಲ್ಲ ಆದರೆ ಯುರೋಪ ಖಂಡದೊಳಗಿನ ಎಲ್ಲ ದೇಶಗಳಲ್ಲಿಯೂ ಹಬ್ಬಿತು. ಈ ಸಮಯದಲ್ಲಿ ಫ್ರಾನ್ಸ ದೇಶದ ಆಯವ್ಯಯ ಪತ್ರಿಕೆಯಲ್ಲಿ ಬಹಳ ಗದ್ದಲವಾಗಿ, ಆ ಲೆಕ್ಕವು ಯಾರಿಗೂ ತಿಳಿಯದಂತಾಗಿತ್ತು. ಆದದ್ದರಿಂದ ಆ ದೇಶದ ಆಯವ್ಯಯದ ಲೆಕ್ಕವನ್ನು ಕೆಲವು ದಿವಸಗಳವರೆಗೆ ಗ್ಲ್ಯಾಡ್‌ಸ್ಟನ್ನನಿಗೆ ಒಪ್ಪಿಸುವ ವಿಚಾರವು ಸಹ ಅಲ್ಲಿ ನಡೆದಿತ್ತು.

ಬಾಲಾಟ್ ಆಕ್ಟು ಮಂಜೂರು ಆದದ್ದು, ೧೮೭೨.

ಪ್ರತಿನಿಧಿಗಳನ್ನು ಆರಿಸಿಕೊಳ್ಳುವವರು ಪಾರ್ಲಮೆಂಟಿನ ಉಮೇದವಾರರಿಗೆ ಬಹಿರಂಗವಾಗಿ ಮತಗಳನ್ನು ಕೊಡುವ ಸಂಪ್ರದಾಯವಿತ್ತು. ಇದರಿಂದ ಯಾವ ಮನುಷ್ಯನು ಯಾವ ಉಮೇದವಾರನಿಗೆ ತನ್ನ ಮತವನ್ನು ಕೊಟ್ಟನೆಂಬುದು ಎಲ್ಲರಿಗೂ ತಿಳಿದು, ಪರಸ್ಪರ ಮನಸ್ತಾಪವು ಉಂಟಾಗಿ, ಒಮ್ಮೊಮ್ಮೆ ಬಹು ಕೇಡುಗಳು

ಸಂಭವಿಸುತ್ತಿದ್ದವು. ಅದುಕಾರಣ ಈ ಪದ್ಧತಿಯನ್ನು ಮುರಿದು, ಗುಪ್ತರೀತಿಯಿಂದ ಮತ ಕೊಡುವ ರೂಢಿಯನ್ನು ಕಡಿವಿದರೆ, ಈ ಕೇಡುಗಳು ಓರೆಗಾಗುವವೆಂದು ಯೋಚಿಸಿ, ಮಂತ್ರಿಸಭೆಯವರು (Ballot Act) ಬಾಲಾಟ್ ಆಕ್ಟನ್ನು ಅಂದರೆ ಬರಹಮೂಲಕವಾಗಿ ಅನ್ಯರಿಗೆ ತಿಳಿಯದಂತೆ ಮತಕೊಡುವ ಸಂಬಂಧದ ಕಾಯದೆಯ ಮಸೂದೆಯನ್ನು ಪಾರ್ಲಮೆಂಟಿನಲ್ಲಿ ತಂದರು. ಅದಕ್ಕೆ ಕಾನ್‌ಸರ್ವೇಟೀವ್ ಪಕ್ಷದ ಮುಖಂಡರು ತಮ್ಮಿಂದಾದಷ್ಟು ಅಡ್ಡಿಗಳನ್ನೊಡ್ಡಿದರು. ಈ ಸಮಯದಲ್ಲಿ ಗ್ಲ್ಯಾಡ್‌ಸ್ಟನ್ನನು ಆ ಮಸೂದೆಯು ಪುಷ್ಟೀಕರಣಾರ್ಥವಾಗಿ ಹಲವು ಸಾರೆ ಭಾಷಣ ಮಾಡಿ, ಅದನ್ನು ಅಲ್ಲಲ್ಲಿ ತಿದ್ದಿ, ಪಾರ್ಲಮೆಂಟಿನವರಿಂದ ಮಂಜೂರು ಮಾಡಿಸಿ, ಅದಕ್ಕೆ ಸನ್ ೧೮೭೨ ನೆಯ ವರ್ಷದಲ್ಲಿ ಮಹಾರಾಣೀ ಸಾಹೇಬರ ಒಪ್ಪಿಗೆಯನ್ನು ಪಡೆದು, ಅದನ್ನು ಕೂಡಲೆ ಪ್ರಚಾರದಲ್ಲಿ ತಂದನು. ಇದರಿಂದ ಮತ ಕೊಡುವವರಿಗೆ ಬಹು ದಿವಸಗಳಿಂದಿದ್ದ ಘನವಂತರ ಅಂಜಿಕೆಯೂ ಭಿಡೇಭಾರಣಗಳೂ ತಪ್ಪಿಹೋಗಿ, ಅವರು ಸ್ವತಂತ್ರ ರೀತಿಯಿಂದ ಯೋಗ್ಯ ಜನರನ್ನು ಆರಿಸಿಕೊಂಡು ಪಾರ್ಲಮೆಂಟಿಗೆ ಕಳುಹಿಸಲು ಶಕ್ತರಾದರು.

ಗ್ಲ್ಯಾಡ್‌ಸ್ಟನ್ನನು ದಂಡಿನ ಉದ್ಯೋಗಗಳ ಮಾರಾಟವನ್ನು ನಿಲ್ಲಿಸಿದ್ದು.

ಬಹು ದಿವಸಗಳಿಂದ ದಂಡಿನ ಉದ್ಯೋಗಗಳ ಮಾರಾಟವು ಎಗ್ಗಿಲ್ಲದೆ ನಡೆಯುತ್ತ ಬಂದಿತ್ತು. ಲಷ್ಕರೀ ಖಾತೆಯೊಳಗಿನ ದೊಡ್ಡ ದೊಡ್ಡ ಸ್ಥಳಗಳನ್ನು ಯೋಗ್ಯತೆ ಇಲ್ಲದವರು ಸಹ ತಮ್ಮ ದುಡ್ಡಿನ ಕಸುವಿನಿಂದ ಪಡೆದುಕೊಳ್ಳುತ್ತಿದ್ದರು. ಈ ಅಯೋಗ್ಯವಾದ ಪದ್ಧತಿಯನ್ನು ಮುರಿಯುವ ಇಚ್ಛೆಯಿಂದ ಗ್ಲ್ಯಾಡ್‌ಸ್ಟನ್ನನು ಒಂದು ಕಾಯದೆಯ ಮಸೂದೆಯನ್ನು ಮಾಡಿ, ಅದನ್ನು ಪಾರ್ಲಮೆಂಟ ಸಭೆಯಲ್ಲಿ ತಂದನು. ಆದರೆ ಆ ಮಸೂದೆಗೆ ಲಾರ್ಡರ ಸಭೆಯವರು ವಿರೋಧಿಸುವಂತೆ ಕಂಡುಬರಲು, ಅವನು ಆ ಹವ್ಯಾಸವನ್ನು ಬಿಟ್ಟು, ಬಹು ಯುಕ್ತಿಯಿಂದ ಈ ಸಂಗತಿಗಳನ್ನೆಲ್ಲ ಮಹಾರಾಣೀ ಸಾಹೇಬರ ಕಿವಿಯ ಮೇಲಿಟ್ಟು, ಅವರ ಮನಸನ್ನು ಒಲಿಸಿಕೊಂಡು ಬಿಟ್ಟನು. ಆದರಿಂದ ಅವನ ಉದ್ದೇಶವು ಸುಲಭವಾಗಿ ಈಡೇರಿತು. ಅದು ಹೇಗೆಂದರೆ:—ಆ ನೇಮಣೂಕಗಳಿಗೆ ಮಹಾರಾಣೀ ಸಾಹೇಬರ ಮಂಜೂರಿಯು ಬೇಕಾಗುತ್ತಿತ್ತು. ಈ ಮಂಜೂರಿಯನ್ನು ಕೊಡುವ ಕಾಲದಲ್ಲಿ ಅವರು ಅವುಗಳ ವಿಷಯವಾಗಿ ಸೂಕ್ಷ್ಮರೀತಿಯಿಂದ ವಿಚಾರ ಮಾಡಿದ ಹೊರತು ತಮ್ಮ ಒಪ್ಪಿಗೆಯನ್ನು ಕೊಡದಾದರು. ಗ್ಲ್ಯಾಡ್‌ಸ್ಟನ್ನನ ಈ ಮೇಲಾದ ಹಂಚಿಕೆಯನ್ನು ನೋಡಿ ಜನರು ಬಹು ಸಂತೋಷಪಟ್ಟರು.

ಸನ್ ೧೮೭೩ ನೆಯ ಇಸವಿಯಲ್ಲಿ ಘಟಸ್ಫೋಟ-ಕಾಯದೆಯ ಮಸೂದೆಯು

ಗ್ಲ್ಯಾಡ್‌ಸ್ಟನ್ನನು ಘಟಸ್ಫೋಟ ಕಾಯದೆಯ ವಿರುದ್ಧವಾಗಿ ಮಾಡಿದ ಪ್ರಯತ್ನಗಳು, ೧೮೫೭.

ಪಾರ್ಲಮೆಂಟಿನಲ್ಲಿ ತರಲ್ಪಟ್ಟಿತು. ಆ ಮಸೂದೆಯ ಪಕ್ಷವನ್ನು ಬಹು ಜನ ಸಭಾಸದರು ಹಿಡಿದರು. ಅವರಲ್ಲಿ ಲಾರ್ಡ ಪಾಮರ್‌ಸ್ಟನ್ನನು ಮುಖ್ಯನಾಗಿದ್ದನು. ಆ ಮಸೂದೆಯೊಳಗಿನ ಬೇರೆ ಬೇರೆ ಮುದ್ದೆಗಳ ವಿಷಯವಾಗಿ ಪಾರ್ಲಮೆಂಟಿನಲ್ಲಿ ನಿಕರದ ವಾದವಿವಾದಗಳು ಬಹು ದಿವಸಗಳ ವರೆಗೆ ನಡೆಯುತ್ತಲೇ ಇದ್ದವು. ಆ ಸಮಯದಲ್ಲಿ ಗ್ಲ್ಯಾಡ್‌ಸ್ಟನ್ನನು ಒಟ್ಟು ಎಪ್ಪತ್ತು ಎಪ್ಪತ್ತೆರಡು ಸಾರೆ ಆ ಮಸೂದೆಯ ವಿರುದ್ಧವಾಗಿ ಮಾತನಾಡಿದನು. ಆ ಮಸೂದೆಯ ತಾತ್ಪರ್ಯವೇನೆಂದರೆ:—“ಹೆಂಡತಿಯು ಒಮ್ಮೆ ವ್ರತಭಂಗ ಮಾಡಿದಳೆಂದು ಸಿದ್ಧವಾದ ಕೂಡಲೆ, ಅವಳ ಸೆರಗು ಹರಿದುಬಿಡುವ ಅಧಿಕಾರವು ಅವಳ ಗಂಡನಿಗುಂಟು. ಆದರೆ ಗಂಡನು ಹೊಡೆಯುವದೂ ಬಡೆಯುವದೂ ಮಾಡುತ್ತಾನೆ, ಹೊಟ್ಟೆಬಟ್ಟೆಗೆ ಕೊಡದೆ ಪರಿಪರಿಯಿಂದ ಪೀಡಿಸುತ್ತಾನೆ ಅಥವಾ ಪುನಃ ಪುನಃ ವ್ರತಭಂಗ ಮಾಡುತ್ತಾನೆ ಎಂದು ಸಿದ್ಧವಾದ ವಿನಹಾ ಗಂಡನನ್ನು ಬಿಡುವ ಅಧಿಕಾರವು ಹೆಂಡತಿಗಿಲ್ಲ.” ಈ ಮಸೂದೆಯಲ್ಲಿ ಗಂಡನಿಗೆ ತೋರಿಸಿರುವ ಪಕ್ಷಪಾತವು ಗ್ಲ್ಯಾಡ್‌ಸ್ಟನ್ನನ ಮನಸ್ಸಿಗೆ ರವಷ್ಟಾದರೂ ಬಂದಿದ್ದಿಲ್ಲ. ಅದು ಕಾರಣ ಅವನು ಈ ವಿಷಯವನ್ನು ಕುರಿತು ಬಂದುಸಾರೆ ಮೇಲಾದ ಭಾಷಣ ಮಾಡಿದನು. ಅವನ ಈ ಭಾಷಣವನ್ನು ಕೇಳಿದವರು, ಈ ವಿಷಯದ ಅಭ್ಯಾಸವನ್ನು ಅವನು ತನ್ನ ಜನ್ಮದಾರಭ್ಯ ಮಾಡಿರುವನೋ ಏನೋ ಎಂದೆಣಿಸಿದರು. ಅವನು ಮಾತನಾಡುವಾಗ್ಗೆ ಈ ವಿಷಯದ ಮೇಲೆ ಹಿಂದಕ್ಕಾದ ಕಾಯದೆಗಳೊಳಗಿನ ನೂರಾರು ಕಲಮುಗಳನ್ನು ಸಮಯೋಚಿತವಾಗಿ ಒಂದರ ತರುವಾಯ ಒಂದನ್ನು ಅಂದನು; ಮತ್ತು ಧರ್ಮಶಾಸ್ತ್ರದೊಳಗಿನ ಈ ಸಂಬಂಧದ ವಚನಗಳನ್ನು ಅಕ್ಷರಶಃ ಬಾಯಿಯಿಂದ ಅಲ್ಲಲ್ಲಿ ಹೇಳಿದನು. ಅವನ ಈ ಯಥಾರ್ಥವಾದ ವಿಷಯಪ್ರತಿಪಾದನವನ್ನು ಕೇಳಿ, ಸಭಿಕರೆಲ್ಲರೂ ಬೆರಗಾದರು. ಅವನು ಮೊದಲು ಆ ಸಂಪೂರ್ಣ ಮಸೂದೆಯನ್ನೇ ಖಂಡಿಸುವ ಪ್ರಯತ್ನ ಮಾಡಿದನು; ಆದರೆ ಅದು ಸಫಲವಾಗುವದಿಲ್ಲೆಂದು ಕಂಡುಬರಲು, ಅವನು ಅದನ್ನು ಮುಂದಕ್ಕೆ ಹಾಕಲು ಪ್ರಯತ್ನಿಸಿದನು; ಅದೂ ಕೈಗೂಡದಂತೆ ಕಂಡು ಬರಲು ಅವನು ಅದರೊಳಗಿನ ತೀರ ಅನ್ಯಾಯದ ಭಾಗವನ್ನಷ್ಟೇ ತೆಗೆದುಹಾಕುವ ಉದ್ಯೋಗ ನಡೆಯಿಸಿದನು; ಅದೂ ಗತಿಗಾಣದಂತೆ ತೋರಲು, ಅವನು ಕಟ್ಟಕಡೆಗೆ ಹೇಳಿದ್ದೇನೆಂದರೆ:—“ಈ ವಿಷಯಕ್ಕೆ ಹೇಳಕೂಡದಷ್ಟು ಅಡ್ಡಿಗಳು ಬರುತ್ತವೆಂಬ ಮಾತು ನಿಜವು. ಆದರೆ ಲಗ್ನವು ಪರಮ ರಹಸ್ಯವಾದದ್ದೊಂದು ಬಂಧನವಿರುತ್ತದೆ. ಈ ಪ್ರಪಂಚದ ವ್ಯವಹಾರಗಳಲ್ಲಿ ಅತಿಶಯ ಮಹ

ಶುದ್ಧ ಮನಸ್ಸಿನಿಂದ ಒಪ್ಪಿಕೊಂಡನು. ಅವನು ಹೇಳಿದ್ದೇನೆಂದರೆ:— ಆ ಕಾಲದಲ್ಲಿ ನಾನು ಒಂದು ದೊಡ್ಡ ತಪ್ಪನ್ನು ಮಾಡಿದೆನು. ಆ ಪ್ರಕಾರವಾಗಿ ಮಾತನಾಡಿ, ಹೊರಲಾರದ ಹೊರೆಯನ್ನು ನನ್ನ ತಲೆಯ ಮೇಲೆ ಹೊತ್ತುಕೊಂಡೆನು. ಇದರಲ್ಲಿ ಏನೂ ಸಂಶಯವಿಲ್ಲ. ಆದರೆ ನನ್ನ ಉದ್ದೇಶದಲ್ಲಿ ಒಂದು ಎಳ್ಳುಕಾಳಷ್ಟು ಸುದ್ಧಾ ದೋಷವಿದ್ದಿಲ್ಲ. ಅಮೇರಿಕದೊಳಗಿನ ಎಲ್ಲ ಜನರ ಮೇಲೂ ಈಗಿರುವಷ್ಟು ನನ್ನ ಪ್ರೀತಿಯೂ ಅಂತಃಕರಣವೂ ಆಗೂ ಇದ್ದವು. ಆದರೆ ಆ ಎರಡು ಪಕ್ಷದವರಲ್ಲಿದ್ದ ನಿಜಸ್ಥಿತಿಗಳು ಮಾತ್ರ ಆಗ ನನಗೆ ತುಸುವಾದರೂ ಗೊತ್ತಾಗಿದ್ದಿಲ್ಲ. ಆದದ್ದರಿಂದ ನನ್ನ ಅಭಿಪ್ರಾಯವು ಹಾಗಾಯಿತು, ಆ ಅಭಿಪ್ರಾಯವನ್ನು ನನ್ನ ನಾಲಿಗೆಯು ಇದ್ದಕ್ಕಿದ್ದ ಹಾಗೆ ಹೊರಗೆಡವಿತು. ಅದಕ್ಕೆ ಉಪಾಯವಿಲ್ಲ. ಆದರೆ ಒಂದು ಮಾತನ್ನು ನಾನು ಈಗ ಹೇಳುತ್ತೇನೆ. ನನ್ನ ಅಭಿಪ್ರಾಯವು ಉಳಿದ ಎಷ್ಟೋ ಇಂಗ್ಲಿಷ್ ಗೃಹಸ್ಥರ ಅಭಿಪ್ರಾಯಕ್ಕಿಂತ ಸ್ವಲ್ಪ ಭಿನ್ನವಾಗಿದೆ. ಅದೇನೆಂದರೆ:— "ಆ ಎಲ್ಲ ಸಂಸ್ಥಾನಗಳ ಒಗ್ಗಟ್ಟೇ ಇಂಗ್ಲಂಡಕ್ಕೆ ಹಿತಕರವಾದದ್ದೆಂತಲೂ ಅವುಗಳಲ್ಲಿಯ ಒಡಕೇ ಅವುಗಳಿಗೂ ನಮಗೂ ಹಾನಿಕಾರಕವೆಂತಲೂ ನಾನು ನೆನಸುತ್ತೇನೆ." ಮನುಷ್ಯನು ಎಷ್ಟು ದೊಡ್ಡವನಾದರೂ ಎಷ್ಟು ಬುದ್ಧಿಶಾಲಿಯಾದರೂ ಅವನಿಂದ ಒಮ್ಮೊಮ್ಮೆ ತಪ್ಪುಗಳು ಆಗೇ ಹೋಗುತ್ತವೆ. ಆದರೆ ಆ ತಪ್ಪುಗಳನ್ನು ನಿರಭಿಮಾನದಿಂದ ಒಪ್ಪಿಕೊಳ್ಳುವದು ಮಾತ್ರ ಎಲ್ಲರಿಂದಲೂ ಆಗುವದಿಲ್ಲ.

ಆಲಾಬಾಮಾ ಎಂಬ ಹಡಗದಿಂದ ಉತ್ತರ ಸಂಸ್ಥಾನಗಳಿಗಾದ ನಷ್ಟ ದ್ರವ್ಯವನ್ನು ಇಂಗ್ಲಂಡವು ಕೊಟ್ಟದ್ದು, ೧೮೭೨.

ಈ ಯುದ್ಧವು ಮುಗಿದ ಮೇಲೆ ಇಂಗ್ಲಡ್ ದೇಶವು ಅದರಲ್ಲಿ ತಾನೂ ಸಿಕ್ಕು, ಮಾಡಿದ ತಪ್ಪನ್ನು ಒಪ್ಪಿಕೊಂಡು, ಅಮೇರಿಕದವರಿಗೆ ಒದಗಿದ ದ್ರವ್ಯ-ನಷ್ಟವನ್ನು ಕೈಯಿಂದ ಕೊಡಬೇಕಾಯಿತು. ಈ ಯುದ್ಧವು ನಡೆದಾಗ್ಗೆ ಇಂಗ್ಲಂಡದಲ್ಲಿ ಕೆಲವು ಯುದ್ಧದ ಹಡಗಗಳು ಕಟ್ಟಲ್ಪಟ್ಟವು. ಅವುಗಳಲ್ಲಿ (Alabama) ಅಲಾಬಾಮಾ ಎಂಬ ಹೆಸರಿನ ಹಡಗವು ಎಲ್ಲಕ್ಕೂ ದೊಡ್ಡದಾಗಿತ್ತು. ಅದನ್ನು ಇಂಗ್ಲಿಷ್ ಅಂಬಿಗರು ನಡಿಸುತ್ತಿದ್ದದರಿಂದಲೂ ಅದರ ಮೇಲೆ ಇಂಗ್ಲಿಷ್ ನಿಶಾನೆಗಳು ಹಾರಾಡುತ್ತಿದ್ದದರಿಂದಲೂ ಅದು ಬೇರಾದ ಬಂದರಕ್ಕೆ ಹೋದರೂ ಬೇರಾದ ಬಂದರದಿಂದ ಬಂದರೂ ಯಾರೂ ಅದಕ್ಕೆ ಅಡ್ಡಿ ಮಾಡುತ್ತಿದ್ದಿಲ್ಲ. ಆ ಹಡಗವನ್ನು ಇಂಗ್ಲಂಡದ ಸರಕಾರದವರು ಯುದ್ಧವು ನಡೆದ ಸಮಯದಲ್ಲಿಯೇ ಅಮೇರಿಕದೊಳಗಿನ ದಕ್ಷಿಣ ಸಂಸ್ಥಾನದವರಿಗೆ ಕಡವಾಗಿ ಕೊಟ್ಟರು. ಅದನ್ನು ಆ ಸಂಸ್ಥಾನದವರು ಯುದ್ಧದಲ್ಲಿ ಉಪಯೋಗಿಸಿದ್ದರಿಂದ ಉತ್ತರ ಸಂಸ್ಥಾನಗಳವರಿಗೆ ಬಹು ಕೇಡುಂಟಾಯಿತು. ಇದನ್ನು ಕಂಡು, ಆ ಸಂಸ್ಥಾನಗಳವರು 'ನೀವು ತಟಸ್ಥರಾ

ಗಿರುವೆನೆಂದು ಮೊದಲು ಹೇಳಿ, ಯುದ್ಧವು ನಡೆದ ಕಾಲದಲ್ಲಿಯೇ ನಿಮ್ಮ ಹಡಗವನ್ನು ದಕ್ಷಿಣ ಸಂಸ್ಥಾನಗಳವರಿಗೆ ಕೊಟ್ಟದ್ದರಿಂದ, ನಮಗುಂಟಾಗಿರುವ ನಷ್ಟವನ್ನು ನೀವು ಕೊಡಲಿಕ್ಕೇಬೇಕು' ಎಂದು ಇಂಗ್ಲಂಡದ ಸರಕಾರದವರಿಗೆ ಗಂಟುಬಿದ್ದರು. ಇದರಿಂದ ಇಂಗ್ಲಂಡಕ್ಕೂ ಆ ಸ್ವತಂತ್ರ ಸಂಸ್ಥಾನಗಳಿಗೂ ಯುದ್ಧವು ಹತ್ತತಕ್ಕದ್ದೇ ಸರಿ. ಆದರೆ ಇಂಗ್ಲಂಡದ ದರಬಾರಿನಲ್ಲಿ ಶಾಂತಿ ಪ್ರಿಯನಾದ ಗ್ಲ್ಯಾಡ್‌ಸ್ಟನ್ನನ ವರ್ಚಸ್ಸು ವಿಶೇಷವಿದ್ದದರಿಂದಲೂ ಆ ಸ್ವತಂತ್ರ ಸಂಸ್ಥಾನಗಳ ಮುಖಂಡರು ಸಹ ಶಾಂತ ಪ್ರಿಯರೇ ಆಗಿದ್ದದರಿಂದಲೂ, ಎಲ್ಲರೂ ಕೂಡಿ ವಿಚಾರ ಮಾಡಿ, ಇಂಗ್ಲಂಡದ ಪಕ್ಷದಿಂದ ಆರು ಜನ, ಆ ಸ್ವತಂತ್ರ ಸಂಸ್ಥಾನಗಳ ಪಕ್ಷದಿಂದ ಆರು ಜನ, ಈ ಮೇರೆಗೆ ಹನ್ನೆರಡು ಜನ ಪಂಚರು ಕೂಡಿ, ಬಹುಮತದಿಂದ ನಿರ್ಣಯಿಸಿದ ಮೇರೆಗೆ ಈ ಪ್ರಕರಣವನ್ನು ಬಗೆ ಹರಿಸಿಕೊಳ್ಳಬೇಕೆಂದು ಗೊತ್ತು ಮಾಡಿದರು. ಅದಕ್ಕೆ ಸರಿಯಾಗಿ ಗ್ಲ್ಯಾಡ್‌ಸ್ಟನ್ನನು ಆರು ಜನ ಇಂಗ್ಲಿಷ್ ಪಂಚರನ್ನು ವಾಶಿಂಗ್ಟನ್ನ ಪಟ್ಟಣಕ್ಕೆ ಕಳುಹಿಸಿದನು. ಇವರಲ್ಲಿ ಲಾರ್ಡ್ ರಿಪನ್ ದೊರೆಯು ಒಬ್ಬನಾಗಿದ್ದನು. ಈ ಪಂಚರು ಕೂಡಿ, ಎಷ್ಟೋ ವಾದವಿವಾದಗಳನ್ನು ಮಾಡಿ, ಸನ್ ೧೮೭೨ನೆಯ ಇಸವಿಯ ಸೆಪ್ಟೆಂಬರ ತಿಂಗಳಿನಲ್ಲಿ, ಇಂಗ್ಲಂಡವು ಆ ಸ್ವತಂತ್ರ ಸಂಸ್ಥಾನಗಳಿಗೆ ೩೨ ಲಕ್ಷ ೨೯ ಸಾವಿರ ಪೌಂಡು ಹಣವನ್ನು ಕೊಡಬೇಕೆಂದು ನಿರ್ಣಯಿಸಿದರು. ಈ ನಿರ್ಣಯಕ್ಕೆ ಸರಿಯಾಗಿ ಇಂಗ್ಲಂಡದವರು ಇಷ್ಟು ಹಣವನ್ನು ಆ ಸಂಸ್ಥಾನಗಳವರಿಗೆ ಕೊಟ್ಟು, ಅವರನ್ನು ಸಮಾಧಾನ ಪಡಿಸಿದರು. ಈ ಸಂಗತಿಯಿಂದ ಇಂಗ್ಲಂಡ ದೇಶಕ್ಕೊದಗಿದ ಅಪಮಾನವನ್ನು ಕಂಡು ಎಷ್ಟೋ ಜನ ರಾಜ್ಯಕಾರ್ಯ ಧುರಂಧರರ ಪಿತ್ತವು ತಲೆಗೇರಿತು. ಕೆಲವರು ಒಳಗಿಂದೊಳಗೆ ತಳಮಳಿಸ ಹತ್ತಿದರು. ಆದರೆ ಈ ಕೆಲಸದಲ್ಲಿ ಆದದ್ದೆಲ್ಲ ನ್ಯಾಯವೇ ಆಗಿತ್ತು. ಒಂದು ಎಳ್ಳುಕಾಳಷ್ಟು ಸಹ ಅನ್ಯಾಯಕ್ಕೆ ಸ್ಥಳವಿದ್ದಿಲ್ಲ. ಆದ್ದರಿಂದ ಕೈಕಟ್ಟಿದಂತಾಗಿ, ಅವರು ಸುಮ್ಮನಾದರು. ಈ ಪ್ರಕರಣವು ನಿಕರಕ್ಕೆ ಹೋಗದೆ ತಮ್ಮಣ್ಣಯಾದದ್ದಕ್ಕೆ ಗ್ಲ್ಯಾಡಸ್ಟನ್ನನೇ ಕಾರಣನು. ಒಂದು ವೇಳೆ ಅವನಿಲ್ಲದಿದ್ದರೆ ಅಮೇರಿಕದೊಳಗಿನ ಉತ್ತರ ಸಂಸ್ಥಾನಗಳವರಿಗೂ ಇಂಗ್ಲಂಡದವರಿಗೂ ಒಂದು ದಾರುಣವಾದ ಯುದ್ಧವು ನಿಶ್ಚಯವಾಗಿ ಹತ್ತುತ್ತಿತ್ತು.

ಗ್ಲ್ಯಾಡ್‌ಸ್ಟನ್ನನು ರಿಫಾರ್ಮ ಬಿಲ್ಲಿನ ಮೇಲೆ ಭಾಷಣ ಮಾಡಿದ್ದು, ೧೮೬೪.

ಸನ್ ೧೮೬೪ನೆಯ ಇಸವಿಯಲ್ಲಿ (Mr. Baines) ಮಿಸ್ಟರ್ ಬೇನ್ಸನೆಂಬ ಗೃಹಸ್ಥನು (Reform Bill) ರಿಫಾರ್ಮ ಬಿಲ್ಲನ್ನು ಅಂದರೆ ಪಾರ್ಲಮೆಂಟಿನ ಸುಧಾರಣೆಯ ಸಂಬಂಧದ ಕಾಯದೆಯ ಮಸೂದೆಯನ್ನು ಪಾರ್ಲಮೆಂಟಿನಲ್ಲಿ ತಂದನು. ಆ ಮಸೂದೆಯಲ್ಲಿ 'ಈಗ ೧೦ ಪೌಂಡು ಉತ್ಪನ್ನವುಳ್ಳವರಿಗೆ ಪಾರ್ಲಮೆಂಟಿನ ಪ್ರತಿನಿಧಿಗಳನ್ನು ಆರಿ

ಸಿಕೊಳ್ಳುವ ಅಧಿಕಾರವಿದ್ದಂತೆ ಇನ್ನು ಮುಂದೆ ೬ ಪೌಂಡಿಗಿಂತ ಹೆಚ್ಚು ಉತ್ಪನ್ನವುಳ್ಳವರಿಗೂ ಇರತಕ್ಕದ್ದು ' ಎಂಬ ಅಭಿಪ್ರಾಯವು ಕಾಣಿಸಲ್ಪಟ್ಟಿತ್ತು. ಅದನ್ನು ಪಾರ್ಲಮೆಂಟಿನವರು ಮಂಜೂರು ಮಾಡಲಿಲ್ಲ. ಆದರೂ ಆ ಮಸೂದೆಯನ್ನು ಕುರಿತು ಗ್ಲ್ಯಾಡ್‌ಸ್ಟನ್ನನು ಮಾಡಿದ ಭಾಷಣವು ಅತಿ ಮಹತ್ವಪೂರ್ಣವಾದ್ದಾಗಿದೆ. ಅದು ಪಾರ್ಲಮೆಂಟಿನ ಸುಧಾರಣೆಯ ಸಂಬಂಧದ ಮುಂದಿನ ಪ್ರಯತ್ನಗಳಿಗೆ ವಿಶೇಷ ಬಲಗೊಟ್ಟಿತು. ಅವನು ತನ್ನ ಭಾಷಣದಲ್ಲಿ " ಮಾನಸಿಕ ವ್ಯಂಗಗಳಿದ್ದದರಿಂದ ಇಲ್ಲವೆ ಯಾವುದೊಂದು ರಾಜಕೀಯ ಪ್ರಕರಣದಲ್ಲಿ ಸೇರಿದ್ದರಿಂದ ಮತಕೊಡಲು ಅಯೋಗ್ಯರಾಗಿರುವವರನ್ನು ಬಿಟ್ಟು, ಉಳಿದ ಎಲ್ಲ ಜನರಿಗೂ ಪ್ರತಿನಿಧಿಗಳನ್ನು ಆರಿಸುವ ಸಮಯದಲ್ಲಿ ಮತ ಕೊಡುವ ಅಧಿಕಾರವಿರುವದು ಯೋಗ್ಯವು " ಎಂದು ಸ್ಪಷ್ಟವಾಗಿ ಹೇಳಿದನು. ಅವನ ಈ ನುಡಿಯು ನ್ಯಾಯವಾದದ್ದು ಮಾತ್ರವಲ್ಲ ಆದರೆ ಸಮಯೋಚಿತವೂ ಆಗಿತ್ತು. ಆ ಮಸೂದೆಯು ವಾಡಿಕೆಯಾಗಿ ಸಾಮಾನ್ಯ ಪ್ರತಿಯ ಜನರಿಗೆ ಅಂದರೆ ಕೂಲಿ ಕುಂಬಳಿ ಮಾಡಿ ಹೊಟ್ಟೆ ತುಂಬಿಕೊಳ್ಳುವ ಜನರಿಗೆ ಅನುಕೂಲವಾಗಿ ಮಾಡಲ್ಪಟ್ಟಿತ್ತು. ಒಂದುವೇಳೆ ಅದು ಮಂಜೂರಾಗಿದ್ದರೆ, ಅವರೊಳಗಿನ ಬಹು ಜನರು ಪಾರ್ಲಮೆಂಟಿನ ಸಭಾಸದರನ್ನು ಆರಿಸಿಕೊಳ್ಳುವ ಅಧಿಕಾರವನ್ನು ಹೊಂದುತ್ತಿದ್ದರು. ಆ ಜನರನ್ನು ಉದ್ದೇಶಿಸಿ ಗ್ಲ್ಯಾಡ್‌ಸ್ಟನ್ನನು ಹೇಳಿದ್ದೇನಂದರೆ:— " ಕನಿಷ್ಠ ಪ್ರತಿಯ ಜನರು ತಮಗೆ ಆ ಅಧಿಕಾರವು ಇರಬೇಕೆಂದು ಹೇಳಿಕೊಳ್ಳದೆ ಅಥವಾ ಅದರ ವಿಷಯವಾಗಿ ಅವರು ಏನೂ ಪ್ರಯತ್ನಿಸದೆ ಸುಮ್ಮನೇ ಇರುತ್ತಿರುವಲ್ಲಿ, ದರಬಾರಿನೊಳಗಿನ ಕೆಲವು ಗೃಹಸ್ಥರು ತಾವಾಗಿಯೇ ಈ ಮಾತನ್ನು ಅವರಿಗೆ ಸೂಚಿಸಿ ಯಾಕೆ ಕೊಡುತ್ತಿರುವರೋ ಎಂದು ಬಹು ಜನರು ತಮ್ಮ ತಮ್ಮೊಳಗೆ ಮಾತನಾಡಿಕೊಳ್ಳುತ್ತಿರುವರೆಂದು ನನಗೆ ತಿಳಿದದೆ. ಆದರೆ ಕಾಯಕಷ್ಟ ಮಾಡುವ ಜನರು ಆ ಅಧಿಕಾರವನ್ನು ತಮಗೆ ಕೊಡಿರೆಂದು ಹಟ ಹಿಡಿಯುವ ವರೆಗೆ ನಾವು ಸುಮ್ಮನಿರುವದು ಧರ್ಮವೋ! ಕಾಯದೆಗಳನ್ನು ತಿದ್ದಿರೆಂದು ಸಾಮಾನ್ಯ ಜನರು ಕೂಗನ್ನೆಬ್ಬಿಸುವ ಪ್ರಸಂಗವು ಬರುವದರೊಳಗಾಗಿ ಅಂಥ ಪ್ರಸಂಗವನ್ನೇ ಬರಗೊಡದಿರುವದು ರಾಜ್ಯಚಾಲಕರ ಕರ್ತವ್ಯವಲ್ಲವೋ! ಇದಲ್ಲದೆ ಹೊಟ್ಟೆಗಾಗಿ ಹಗಲು ಹನ್ನೆರಡು ತಾಸು ದುಡಿಯಬೇಕಾಗುವ ಜನರಿಗಿಂತ ನಿರರ್ಥಕವಾಗಿ ವೇಳೆಯನ್ನು ಕಳೆಯುವಂಥ ಉಚ್ಚ ಪ್ರತಿಯ ಜನರು ಆ ಸಂಗತಿಗೆ ಹೆಚ್ಚು ಲಕ್ಷ್ಯಗೊಡತಕ್ಕದ್ದು. ಯಾಕಂದರೆ ಇದರಿಂದ ಅವರಿಗೆ ಯಾವುದೊಂದು ಹಾನಿಯುಂಟಾಗುವ ಸಂಭವವಿರುವದಿಲ್ಲ. ಸುಮ್ಮನೇ ಕೂಳಿತುಕೊಂಡು ಕಳೆಯುತ್ತಿದ್ದ ಹೊತ್ತನ್ನು ಈ ಒಳ್ಳೆಯ ಕೆಲಸಕ್ಕೆ ಹಚ್ಚಿದಂತೆ ಮಾತ್ರ ಆಗುವದು. ಕೂಲಿಕಾರರ ಮಾತು ಹಾಗಲ್ಲ. ಅವರು ಈ ಕೆಲಸಕ್ಕೆ ಹತ್ತಬೇಕಾದರೆ ತಮ್ಮ

ಹೊಟ್ಟೆಯು ಉದ್ಯೋಗವನ್ನು ಬಿಡಬೇಕಾಗುವದು. ಅದನ್ನು ಬಿಟ್ಟರೆ ಅವರೂ ಅವರ ಹೆಂಡಿರು ಮಕ್ಕಳೂ ಉಪವಾಸ ಬೀಳುವ ಹೊತ್ತು ಬರುವದು. ಒಂದು ವೇಳೆ ಅಂಥ ಹೊತ್ತು ಬಂದರೂ, ಅವರು ಅದಕ್ಕೆ ಜಳಕದೆ, ತಮ್ಮ ಹೊಟ್ಟೇ ಕಟ್ಟಿಕೊಂಡು, ದೃಢ ನಿಶ್ಚಯದಿಂದ ಆ ಕೆಲಸಕ್ಕೆ ತಲೆಗೊಟ್ಟು ನಿಂತರೆ, ನಮ್ಮ ದೊರೆತನದವರು ತಮ್ಮ ಕರ್ತವ್ಯವನ್ನು ಸರಿಯಾಗಿ ಮಾಡುವದಿಲ್ಲ; ಅದು ಕಾರಣ ನಾವು ನಿರುಪಾಯದಿಂದ ಅವರ ಕರ್ತವ್ಯವನ್ನು ಸ್ವತಃ ಕೈಕೊಂಡಿದ್ದೇವೆ ಎಂದು ಹೇಳಲಿಕ್ಕಿಲ್ಲವೋ! ಒಂದು ವೇಳೆ ಹೇಳಿದರೆ, ಆ ಮಾತಿನಲ್ಲಿ ರಾಜ್ಯ ಕರ್ತರ ಮೇಲಿನ ಅವಿಶ್ವಾಸವು ಗರ್ಭಿತವಾದಂತಾಗಲಿಕ್ಕಿಲ್ಲವೋ! ದೇವರ ದಯದಿಂದ ಅಂಥ ಪ್ರಸಂಗವು ಸದ್ಯಕ್ಕಿಲ್ಲೆಂದು ನೋಡಿ ನಾನು ಪರಮಾನಂದ ಬಡುತ್ತೇನೆ. ಆದರೂ ಅವರಾಗಿಯೇ ಕೇಳುವದಿಲ್ಲೆಂಬ ನೆವದಿಂದ ಕಾಯದೆಯಲ್ಲಿ ಅವಶ್ಯಕವಾದ ಸುಧಾರಣೆಗಳನ್ನು ಮಾಡದಿರುವದು ಪಾರ್ಲಮೆಂಟಿನವರಿಗೂ ಇಂಗ್ಲಿಷ್ ದೊರೆತನದವರಿಗೂ, ತುಸುವಾದರೂ ಶೋಭಿಸುವದಿಲ್ಲ.'' ಮನೆಗೆ ಎಡತಾಕಿದ ಮೇಲೆ ಇಲ್ಲವೆ ಬಾಗಿಲುಕಟ್ಟಿದ ಮೇಲೆ ಕೊಡಬೇಕಾದದ್ದನ್ನು ಯಾರಾದರೂ ಕೊಟ್ಟೇ ಕೊಡುವರು; ಆದರೆ ಕೇಳುವ ಮೊದಲೇ ಅದು ನ್ಯಾಯವಾದದ್ದೆಂದು ತಿಳಿದುಕೊಂಡು ಅದನ್ನು ಕೊಡುವದರಲ್ಲಿ ವಿಶೇಷ ಭೂಷಣವುಂಟು.

ಗ್ಲ್ಯಾಡ್‌ಸ್ಟನ್ನನು ಹಿಂದುಸ್ಥಾನದ ಮೇಲೆ ಮಾಡಿದ ಉಪಕಾರಗಳು, ೧೮೮೦

ಗ್ಲ್ಯಾಡ್‌ಸ್ಟನ್ನನು, ಗ್ರೀಸ್, ತುರ್ಕಸ್ಥಾನ, ಐಯೋನಿಯನ್ ನಡುಗಡ್ಡೆಗಳು ಮುಂತಾದ ಪರದೇಶಗಳಿಗೆ ಹಿತಕರವಾದ ಕೃತ್ಯಗಳನ್ನು ಮಾಡಿದಂತೆ ನಮ್ಮ ಹಿಂದುಸ್ಥಾನಕ್ಕೆ ಪ್ರಯೋಜನಕರವಾದದ್ದನ್ನೇನಾದರೂ ಮಾಡಿರುವನೋ ಎಂದು ಯಾರಾದರೂ ಕೇಳಿದರೆ, ಅದಕ್ಕೂ ಉತ್ತರವುಂಟು. ಅದನ್ನು ಕೇಳುವವರು ತಮ್ಮ ಲಕ್ಷದಲ್ಲೊಂದು ಸಂಗತಿಯನ್ನಿಡತಕ್ಕದ್ದು. ಅದೇನೆಂದರೆ:—ಗ್ಲ್ಯಾಡ್‌ಸ್ಟನ್ನನು ಮಹಾ ಬುದ್ಧಿಶಾಲಿಯೂ ರಾಜಕಾರ್ಯಧುರಂಧರನೂ ಆಗಿದ್ದರೂ ಅವನು ಸರ್ವಜ್ಞನಾಗಿದ್ದಿಲ್ಲ. ಇದಲ್ಲದೆ ಸ್ವದೇಶದ ಕೆಲಸಗಳನ್ನು ಮಾಡಿಕೊಂಡು, ಪರದೇಶದ ಕೆಲಸಗಳ ಕಡೆಗೆ ಕಣ್ಣಿತ್ತಿ ನೋಡಲು ಸಹ ಅವನಿಗೆ ಅವಕಾಶವಿದ್ದಿಲ್ಲ. ಹೀಗಿದ್ದರೂ ಪ್ರಸಂಗಾನುಸಾರವಾಗಿ ಹಿಂದುಸ್ಥಾನದ ಯಾವುದೊಂದು ರಾಜ್ಯಪ್ರಕರಣವು ಅವನ ಮುಂದೆ ಬಂದರೆ, ಅದರಲ್ಲಿ ಅವನು ತನ್ನ ನ್ಯಾಯದೃಷ್ಟಿಯನ್ನು ಪ್ರಕಟಿಸದೆ ಬಿಡಲಿಲ್ಲ. ಅಂಥ ಪ್ರಸಂಗಗಳು ಎರಡೇ ಸಂಭವಿಸಿದವು. ಅದಕ್ಕೆ ಯಾರ ಉಪಾಯವೂ ಇಲ್ಲ. ಲಾರ್ಡ್ ಲಿಟನ್ನನ ತರುವಾಯ [illegible] ರ್ಡ್ ರಿಪನ್ ದೊರೆಯನ್ನು ಹಿಂದುಸ್ಥಾನದ ಸರ್ವಾಧಿಪತಿಯಾಗಿ ನಿಯ[illegible]ದ್ದು ಅವುಗಳಲ್ಲಿ ಮೊದಲನೆಯದು. ಈ ಯೋಜನೆಯ ಸಲುವಾಗಿ ಅವನು ಇಂಗ್ಲಂಡ

ದ ದರಬಾರಿನಲ್ಲಿ ಬಹು ತೊಂದರೆಗೊಳಗಾದನು. ಯಾಕೆಂದರೆ, ಲಾರ್ಡ್ ರಿಪನ್ನು ದೊಡ್ಡವನೆಂತಲೂ ಸದ್ಗೃಹಸ್ಥನೆಂತಲೂ ಇಂಗ್ಲಂಡದಲ್ಲಿ ಹೆಸರು ಪಡೆದಿದ್ದರೂ, ಅವನು ಕೆಲವು ದಿವಸಗಳ ಹಿಂದೆ ಪ್ರಾಟೆಸ್ಟಂಟ ಪಂಥವನ್ನು ಬಿಟ್ಟು, ರೋಮನ್ ಕ್ಯಾಥಲಿಕ್ ಪಂಥವನ್ನು ಸ್ವೀಕರಿಸಿದ್ದರಿಂದ, ಜನರ ಚರ್ಚೆಗೆ ಗುರಿಯಾಗಿದ್ದನು. ಆದರೂ ಗ್ಲ್ಯಾಡಸ್ಟನ್ನನು ಅದಕ್ಕೆ ಲಕ್ಷ್ಯಗೊಡದೆ, ಅವನಿಂದ ಹಿಂದುಸ್ಥಾನದ ಹಿತವು ನಿಶ್ಚಯವಾಗಿ ಆಗುವದೆಂದು ಬಗೆದು, ಅವನನ್ನೇ ಸರ್ವಾಧಿಪತಿಯಾಗಿ ನಿಯಮಿಸಿದನು. ಆ ಮೇಲೆ ಲಾರ್ಡ್ ರಿಪನ್ ದೊರೆಯು ಅವನ ಬಯಕೆಗೆ ಅನುಗುಣವಾಗಿ ಹಿಂದುಸ್ಥಾನದ ಮೇಲೆ ಮಹದುಪಕಾರಗಳನ್ನು ಮಾಡಿದನು. ಅವುಗಳನ್ನೆಲ್ಲ ಸಾದ್ಯಂತವಾಗಿ ವಿವರಿಸುತ್ತ ಕುಳಿತರೆ, ಅದೊಂದು ದೊಡ್ಡ ಗ್ರಂಥವಾಗಬಹುದು. ಅದು ಕಾರಣ ಹಾಗೆ ಮಾಡದೆ, ಅವುಗಳೊಳಗಿನ ಮುಖ್ಯ ಮುಖ್ಯ ಸಂಗತಿಗಳ ಹೆಸರುಗಳನ್ನಷ್ಟೇ ಇಲ್ಲಿ ಹೇಳುವೆವು.

೧. ಹಿಂದುಸ್ಥಾನಕ್ಕೂ ಅಫಗಾಣಿಸ್ಥಾನಕ್ಕೂ ನಡೆದ ಯುದ್ಧವನ್ನು ನಿಲ್ಲಿಸಿದನು.

೨. ಇವರು ಹಿಂದುಸ್ಥಾನದ ನಿವಾಸಿಗಳೂ ಅವರು ಇಂಗ್ಲಂಡದ ನಿವಾಸಿಗಳೂ ಎಂಬ ಭೇದಾಭೇದವನ್ನೆಣಿಸದೆ ನ್ಯಾಯಗಳನ್ನು ನಿರ್ಣಯಿಸುವ ಕಟ್ಟಳೆಯನ್ನು ಮಾಡಲು ಯತ್ನಿಸಿದನು.

೩. ವಾಯವ್ಯ ಮತ್ತು ಅಯೋಧ್ಯಾ ಪ್ರಾಂತಗಳಲ್ಲಿದ್ದ 'ಪರವಾರಿ' ಎಂಬ ಹೆಸರಿನ ಕರವನ್ನು ತೆಗೆದು ಹಾಕಿದನು.

೪. ಉಪ್ಪಿನ ಮೇಲಿನ ಜಕಾತಿಯನ್ನು ಪ್ರತಿ ಒಂದು ಮಣಕ್ಕೆ ೨ ರೂಪಾಯಿಗಳಂತೆ ಮಾತ್ರ ತೆಗೆದುಕೊಳ್ಳಬೇಕೆಂದು ನಿರ್ಣಯಿಸಿದನು. ಇದರಿಂದ ಪ್ರಜೆಗಳ ತಲೆಯ ಮೇಲಿನ ೧ ಕೋಟಿ, ೪೦ ಲಕ್ಷ ರೂಪಾಯಿಗಳ ಭಾರವು ಕಡಿಮೆಯಾಯಿತು.

೫. ವಿಲಾಯತಿಯಿಂದ ಹಿಂದುಸ್ಥಾನಕ್ಕೆ ಬರುತ್ತಿದ್ದ ಅರಿವೆಯು ಮತ್ತು ಬೇರೆ ಹಲವು ಸರಕುಗಳ ಮೇಲಿನ ಸುಂಕಗಳನ್ನು ತೆಗೆದು ಹಾಕಿದನು.

೬. ಇಜಿಪ್ತ ದೇಶದ ಯುದ್ಧದ ಸಲುವಾಗಿ ೫೦ ಲಕ್ಷ ರೂಪಾಯಿಗಳನ್ನು ಹಿಂದುಸ್ಥಾನಕ್ಕೆ ಕೊಡಬೇಕೆಂದು ಇಂಗ್ಲಂಡದ ದೊರೆತನದವರಿಂದ ವಚನ ತೆಗೆದುಕೊಂಡನು.

೭. ಹಿಂದಿನ ಸರ್ವಾಧಿಪತಿಯ ಆಳಿಕೆಯಲ್ಲಿ ವರ್ತಮಾನ ಪತ್ರಗಳ ಬಾಯ್ತಡೆಯ ಕಾಯಿದೆಯಾಗಿತ್ತು. ಅದನ್ನು ರದ್ದು ಮಾಡಿದನು.

೮. ಸರಕಾರದ ಕೆಲಸಗಳಿಗೆ ಈ ದೇಶದಲ್ಲಿ ಹುಟ್ಟಿದ ಪದಾರ್ಥಗಳನ್ನು ಆದಷ್ಟು ಹೆಚ್ಚು ಉಪಯೋಗಿಸಬೇಕೆಂದು ನಿರ್ಣಯಿಸಿದನು.

೯. ಸ್ಥಾನಿಕ ಸ್ವರಾಜ್ಯದ ಸಂಸ್ಥೆಗಳನ್ನು ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಸ್ಥಾಪಿಸಿ, ಈ ದೇಶದ ಜನರನ್ನು ತಮ್ಮ ತಮ್ಮಲ್ಲಿಯು ಸಾರ್ವಜನಿಕ ಕೃತ್ಯಗಳನ್ನು ತಾವೇ ಜರಗಿಸಿಕೊಳ್ಳಲು ಶಕ್ತರನ್ನಾಗ ಮಾಡಿದನು.

ಮೇಲೆ ಹೇಳಲ್ಪಟ್ಟ ಅವನ ಯಾವತ್ತು ಕೃತ್ಯಗಳಲ್ಲಿ ಗ್ಲ್ಯಾಡ್‌ಸ್ಟನ್ನನ ಪ್ರಜಾವಾತ್ಸಲ್ಯವು ಸಂಪೂರ್ಣವಾಗಿ ತುಂಬಿರುವದು. ಇದರಿಂದ ಲಾರ್ಡ್‌ರಿಪನ್ನನು, ಹಿಂದುಸ್ಥಾನದಲ್ಲಿ ಚಿರಸ್ಮರಣೀಯನಾಗಿರುವನು. ನಮ್ಮ ದೇಶದೊಳಗಿನ ಇಂಗ್ಲಿಷ್ ರಾಜ್ಯಾಧಿಕಾರದ ವಿಷಯವಾಗಿ ಗ್ಲ್ಯಾಡ್‌ಸ್ಟನ್ನನು ಒಂದು ಸ್ಥಳದಲ್ಲಿ ಬರೆದಿರುವದೇನೆಂದರೆ:—"ಹಿಂದುಸ್ಥಾನದಲ್ಲಿ ನಮ್ಮ ರಾಜ್ಯದಾಡಳಿತವು ಸ್ಥಿರವಾಗಿ ನಿಲ್ಲಗೊಳ್ಳಲಿಕ್ಕೆ ಎರಡು ಸಂಗತಿಗಳ ಆವಶ್ಯಕತೆಯುಂಟು. ಎಲ್ಲ ಬಗೆಗಳಿಂದ ಹಿಂದೂ ಜನರಿಗೆ ಹಿತವಾಗುವಂತೆ ನಾವು ನಮ್ಮ ರಾಜ್ಯಕಾರಭಾರವನ್ನು ನಡೆಸುವದು ಮೊದಲನೆಯದು. ಇಂಗ್ಲಿಷ್ ರಾಜ್ಯದಾಡಳಿತೆಯಿಂದ ನಿಶ್ಚಯವಾಗಿ ನಮ್ಮ ಕಲ್ಯಾಣವಾಗುವದೆಂಬ ನಂಬುಗೆಯನ್ನು ಅವರಲ್ಲಿ ಹುಟ್ಟಿಸುವದು ಎರಡನೆಯದು." ಈ ಎರಡು ವಾಕ್ಯಗಳಲ್ಲಿ ಎಲ್ಲ ರಾಜನೀತಿಗಳೂ ಸಮಸ್ತ ವ್ಯವಹಾರ ಶಾಸ್ತ್ರಗಳೂ ಗರ್ಭಿತವಾಗಿರುತ್ತವೆ. ವಿಚಾರ ಮಾಡಿನೋಡಿದರೆ, ಇವೆರಡು ಸಂಗತಿಗಳನ್ನು ಲಾರ್ಡ ರಿಪನ್ನನು ಮೇಲುಪಜ್ಞೆಯಾಗಿರಿಸಿಕೊಂಡು, ತನ್ನ ರಾಜ್ಯದಾಡಳಿತವನ್ನು ಸಾಗಿಸಿದ್ದನೆಂದು ಸ್ಪಷ್ಟವಾಗಿ ತಿಳಿಯುವದು. ಇದರಿಂದ ಅವನು ತನ್ನ ಕೀರ್ತಿಯನ್ನೂ ತನ್ನ ದೇಶದ ಗೌರವವನ್ನೂ ಮತ್ತಿಷ್ಟು ಹೆಚ್ಚಿಸಿದ್ದಲ್ಲದೆ, ಹಿಂದುಸ್ಥಾನಕ್ಕೆ ಶಾನೆ ಹಿತವನ್ನೂ ಮಾಡಿದನು. ಈ ದೊರೆಯು ಸ್ವದೇಶಕ್ಕೆ ತಿರುಗಿ ಹೋಗುವ ಕಾಲದಲ್ಲಿ, ಇಲ್ಲಿಯ ನಿವಾಸಿಗಳು ಅವನು ತಮಗೆ ಮಾಡಿದ ಮಹದುಪಕಾರಗಳನ್ನು ಜ್ಞಾಪಕಕ್ಕೆ ತಂದು ಕೃತಜ್ಞತಾಪೂರ್ವಕವಾಗಿ ಮಾನಪತ್ರಗಳ ಮಳೆಯನ್ನು ಅವನ ಮೇಲೆ ಸುರಿಸಿದಷ್ಟಕ್ಕೆ ತೃಪ್ತರಾಗಲಿಲ್ಲ; ಆದರೆ ಹಲವು ಪಟ್ಟಣಗಳ ನಿವಾಸಿಗಳು ಹಲವು ವಿಧವಾಗಿ ಅವನನ್ನು ಸತ್ಕರಿಸಿದರು. ಕೆಲವರು ಅವನನ್ನು ರಥದಲ್ಲಿ ಕುಳ್ಳಿರಿಸಿ ಮೆರಿಸಿದರು. ಅವನ ರಥವು ರಾಜಬೀದಿಯಲ್ಲಿ ಹೋಗುವಾಗ್ಗೆ ಬ್ರಾಹ್ಮಣರು ಅದನ್ನು ನಿಲ್ಲಿಸಿ, ತೆಂಗಿನಕಾಯಿ, ಗೋದಿ ಮುಂತಾದ ಮಂಗಲ ಪದಾರ್ಥಗಳನ್ನು ಅವನಿಗೆ ಅರ್ಪಿಸಿ, "ಶಾಂತಿರಸ್ತು" "ಪುಷ್ಟಿರಸ್ತು" ಎಂದು ಅವನನ್ನು ಹರಸಿದರು. ಕೆಲವು ಜನರು ಅವನೊಬ್ಬ ತಮ್ಮ ಇಷ್ಟದೇವತೆಯೆಂದು ಭಾವಿಸಿ, ಅವನನ್ನು ಉನ್ನತವಾದ ರಥದಲ್ಲಿ ಕುಳ್ಳಿರಿಸಿ, ಬಹು ಸಡಗರದಿಂದ ಆ ರಥವನ್ನು ಸ್ವತಃ ಎಳೆದು ಅವನ ಮೇಲಿದ್ದ ತಮ್ಮ ಭಕ್ತಿಯನ್ನು ವ್ಯಕ್ತಪಡಿಸಿದರು! ಕೆಲವು ಕಡೆಯಲ್ಲಿ ಜನರು ಸಾರ್ವಜನಿಕ ಸಭೆಗಳನ್ನು ನೆರೆಯಿಸಿ ನೃಸಿಂಹ ಜಯಂತಿ-ಹನುಮಜ್ಜಯಂತಿಗಳಂತೆ 'ರಿಪನ್ ಜಯಂತಿಯನ್ನು' ಮಾಡಲು ಸರ್ವಾನುಮತದಿಂದ ನಿರ್ಣಯಿಸಿದರು! ಮುಂಬಯಿ ಪಟ

ಣದ ನಿವಾಸಿಗಳು ಅವನನ್ನು ಸತ್ಕರಿಸಿದ್ದನ್ನು ನೋಡಿದ ಒಬ್ಬ ಪ್ರಸಿದ್ಧ ಲೇಖಕನು "ಇಷ್ಟು ಮನ್ನಣೆಗಳನ್ನು ಮುಂಬಯಿಯ ಪಟ್ಟಣದವರು ಪ್ರತ್ಯಕ್ಷ ಇಂಗ್ಲಂಡದ ಅರಸು ಮನೆತನದವರ ಆಗಮನ ಸಮಯಗಳಲ್ಲಿ ಕೂಡ ಅವರಿಗೆ ಕೊಟ್ಟಿರುವದಿಲ್ಲ; ಲಾರ್ಡ ರಿಪನ್ ದೊರೆಯ ಪ್ರೀತ್ಯರ್ಥವಾಗಿ ಮಾಡಿದ ಸಮಾರಂಭಕ್ಕೂ ಆ ಘನವಾದ ಅರಸು ಮನೆತನದವರ ಪ್ರೀತ್ಯರ್ಥವಾಗಿ ಮಾಡಿದ ಸಮಾರಂಭಗಳಿಗೂ ಒರೆ ಹಚ್ಚಿ ನೋಡಿದರೆ ಅವುಗಳ ಮಧ್ಯದಲ್ಲಿ, ಸ್ವತಃ ಮಾಡುವವರ ಮತ್ತು ಅನ್ಯರಿಂದ ಮಾಡಿಸುವವರ ಮಧ್ಯದಲ್ಲಿರುವಷ್ಟು ಹೆಚ್ಚುಕಡಿಮೆ ಇರುತ್ತದೆ" ಎಂದು ಬರೆದಿದ್ದಾನೆ. ಇದು ಯಥಾರ್ಥವಾದದ್ದು. ಈಗಾದರೂ ರಾಜ್ಯ ಪ್ರಕರಣದ ಯಾವುದೊಂದು ತೊಂದರೆಯು ಬಂದರೆ, ಹಿಂದುಸ್ಥಾನದ ಜನರು ಲಾರ್ಡ ರಿಪನ್ ದೊರೆಯನ್ನು ನೆನಸದೇ ಇರುವದಿಲ್ಲ. ಇದು ಹಾಗಿರಲಿ. ಈ ದೊರೆಯು ಹಿಂದೂ ಜನರ ಮನಸ್ಸನ್ನು ಮಾತ್ರ ಈ ಪರಿ ಒಲಿಸಿಕೊಂಡಿದ್ದನಂತಲ್ಲ; ಆದರೆ ತನ್ನ ದೇಶದವರ ಮನಸ್ಸನ್ನು ಸಹ ಒಲಿಸಿಕೊಂಡಿದ್ದನು. ಸನ್ ೧೮೯೪ನೆಯ ವರ್ಷದಲ್ಲಿ ಗ್ಲ್ಯಾಡ್‌ಸ್ಟನ್ನನು ಮುಖ್ಯ ಮಂತ್ರಿಯ ಸ್ಥಳವನ್ನು ಬಿಟ್ಟಬಳಿಕ, ತೆರವಾದ ಅವನ ಸ್ಥಳಕ್ಕೆ ಯೋಗ್ಯರಾದ ಮುತ್ಸದ್ದಿಗಳ ಹೆಸರುಗಳು ಪ್ರಸಿದ್ಧಿಸಲ್ಪಟ್ಟವು. ಅವುಗಳಲ್ಲಿ ಲಾರ್ಡ ರಿಪನ್ನನ ಹೆಸರು ಒಂದಾಗಿತ್ತು. ಇದರಿಂದ ಸ್ವದೇಶದಲ್ಲಿಯೂ ಅವನು ಎಷ್ಟು ಹೆಸರುವಾಸಿಯಾಗಿದ್ದನೆಂಬ ಸಂಗತಿಯು ವಾಚಕರ ಲಕ್ಷದಲ್ಲಿ ಸುಲಭವಾಗಿ ಬರಬಹುದು. ಇಷ್ಟು ಯೋಗ್ಯತೆಯ ಗೃಹಸ್ಥನು ಸರ್ವಾಧಿಪತಿಯಾಗಿ ನಮಗೆ ದೊರೆಯಲು ಆಗಿನ ಶಿರಃಪ್ರಧಾನಿಯಾದ ಗ್ಲ್ಯಾಡ್‌ಸ್ಟನ್ನನ ಅನುಗ್ರಹವೇ ವಿಶೇಷ ಕಾರಣವಾಗಿರುವದು.

ಇದರ ಹೊರತು ಗ್ಲ್ಯಾಡ್‌ಸ್ಟನ್ನನು ಹಿಂದುಸ್ಥಾನದ ಮತ್ತೊಂದು ದೊಡ್ಡ ಕೆಲಸವನ್ನು ಮಾಡಿದನು. ಅದು ದುಡ್ಡಿನ ಸಂಬಂಧದ್ದು. ಆ ಮೊಬಲಗು ದೊಡ್ಡದೋ ಅಥವಾ ಸಣ್ಣದೋ ಎಂಬ ದೃಷ್ಟಿಯಿಂದ ಅದನ್ನು ವಿಚಾರ ಮಾಡುವದಕ್ಕಿಂತ ನ್ಯಾಯದೃಷ್ಟಿಯಿಂದ ವಿಚಾರ ಮಾಡುವದು ಯುಕ್ತವು. ಸನ್ ೧೮೭೯-೮೦ನೆಯ ಇಸವಿಯಲ್ಲಿ ಅಫಗಾಣಿಸ್ಥಾನದ ಯುದ್ಧವು ಏಕೆ ಆಯಿತು? ಅದರ ಪರಿಣಾಮವೇನಾಯಿತು? ಎಂಬ ಸಂಗತಿಗಳನ್ನು ನಮ್ಮ ವಾಚಕರು ಬಲ್ಲರಷ್ಟೇ. ಈ ಯುದ್ಧದ ಹಣದ ಭಾರವನ್ನೆಲ್ಲ ಹೊರುವದು ಹಿಂದುಸ್ಥಾನದ ಪಾಲಿಗೆ ಬಂದಿತ್ತು. ಆದರೆ ಈ ಮೇರೆಗೆ ದುಡ್ಡಿನ ಎಲ್ಲ ಭಾರವನ್ನು ಹಿಂದುಸ್ಥಾನದ ಮೇಲೆ ಹಾಕುವದು ನ್ಯಾಯವಲ್ಲೆಂಬ ಮತ್ತು ಅದರೊಳಗಿನದೊಂದು ಭಾಗವನ್ನು ಇಂಗ್ಲಂಡವು ಹೊರುವದು ಉಚಿತವೆಂಬ ಸೂಚನೆಯನ್ನು ಫಾಸೆಟ್ಟನೆಂಬ ದೊರೆಯು ಪಾರ್ಲಮೆಂಟಿನಲ್ಲಿ ತಂದನು. ಈ ಸೂಚನೆಯ ಮೇಲೆ ಗ್ಲ್ಯಾಡ್‌ಸ್ಟನ್ನನು ಸನ್

೧೮೮೭ ನೆಯ ಇಸವಿಯ ಮಾರ್ಚ ತಿಂಗಳಿನ ೨ ನೆಯ ತಾರೀಖಿನ ದಿವಸ ಪಾರ್ಲ ಮೆಂಟಿನಲ್ಲಿ ಭಾಷಣ ಮಾಡಿದನು. ಅದರ ತಾತ್ಪರ್ಯವೇನಂದರೆ:- "ಹಿಂದುಸ್ಥಾನದ ಸರ್ವಾಧಿಪತಿಗಳು ಅಫಗಾಣಿಸ್ಥಾನದ ಯುದ್ಧದ ವೆಚ್ಚವನ್ನೆಲ್ಲ ಹಿಂದುಸ್ಥಾನದ ಮೇಲೆ ಹಾಕಬೇಕೆಂಬ ಮಾತಿಗೆ ಒಪ್ಪಿಕೊಂಡ ಮಾತ್ರದಿಂದಲೇ ಹಿಂದುಸ್ಥಾನದ ನಿವಾಸಿಗಳೆಲ್ಲರು ಅದಕ್ಕೆ ಒಪ್ಪಿಕೊಳ್ಳುತ್ತಾರೆಂದು ಹೇಳುವದು ಸಮಂಜಸವಾಗಿ ತೋರುವದಿಲ್ಲ. ಯಾಕೆಂದರೆ ವ್ಯವಹಾರದಲ್ಲಿ ಈತರದ ಉದಾಹರಣೆಗಳನ್ನು ನಾನೆಂದೂ ನೋಡಿಲ್ಲ. ಈ ಯುದ್ಧದ ಸಂಬಂಧವು ಒರೀ ಹಿಂದುಸ್ಥಾನಕ್ಕೆ ಮಾತ್ರವಲ್ಲ; ಆದರೆ ಸಮಗ್ರ ಇಂಗ್ಲಿಷ್ ಪ್ರಭುತ್ವಕ್ಕೂ ಇರುತ್ತದೆಂದು ಹಿಂದುಸ್ಥಾನದ ಸರ್ವಾಧಿಪತಿಗಳೂ ಲಾರ್ಡ್ ಸಾಲಿಸಬರಿಗಳೂ ಒಪ್ಪಿಕೊಳ್ಳುತ್ತಾರೆ. ಈ ಒಪ್ಪಿಗೆಯಿಂದಲೇ ಆ ವೆಚ್ಚದ ಒಂದು ದೊಡ್ಡ ಭಾಗವನ್ನು ಇಂಗ್ಲಂಡವು ಹೊತ್ತುಕೊಳ್ಳುವದು ಅವಶ್ಯವಿರುತ್ತದೆಂಬ ಮಾತು ಸಿದ್ಧವಾಗುತ್ತದೆ. ಇದಲ್ಲದೆ ಈ ಯುದ್ಧವನ್ನು ಇಂಗ್ಲಂಡವು ತಾನೇ ತಾನಾಗಿ ಹೂಡಿರಲು ಅದಕ್ಕೆ ತಗಲಿರುವ ಹಣದೊಳಗಿನ ದೊಡ್ಡ ಭಾಗವನ್ನು ಇಂಗ್ಲಂಡವು ಹೊತ್ತುಕೊಳ್ಳಬೇಕೆಂದು ಈ ದೇಶದೊಳಗಿನ ಬೇಕಾದ ಸಭೆಯಲ್ಲಿ ಸಾರಿ ಹೇಳಲು ನಾನು ಸಿದ್ಧನಿದ್ದೇನೆ. ಯಾಕೆಂದರೆ ಇದು ಶುದ್ಧ ನ್ಯಾಯವು." ಈ ಭಾಷಣವನ್ನು ಕೇಳಿ ಇಂಗ್ಲಂಡದ ದೊರೆತನದವರು ನಿರುಪಾಯಸ್ಥರಾಗಿ ತಮ್ಮ ಆದಾಯದೊಳಗಿನ ೫೦ ಲಕ್ಷ ಪೌಂಡು ಹಣವನ್ನು ಈ ಯುದ್ಧದ ವೆಚ್ಚಕ್ಕಾಗಿ ಕೊಟ್ಟರು. ಇದು ಗ್ಲ್ಯಾಡ್‌ಸ್ಟನ್ನನ ಪ್ರಯತ್ನದ ಫಲವು. ಅವನಿಗೆ ಸ್ವದೇಶದ ಕೆಲಸಗಳೇ ಹೆಚ್ಚಾಗಿದ್ದದರಿಂದ ಅವನ ಲಕ್ಷವು ಹಿಂದುಸ್ಥಾನದ ಕಡೆಗೆ ತಕ್ಕಷ್ಟು ತಿರುಗಲಿಲ್ಲ. ಇದಕ್ಕೆ ನಮ್ಮ ದುರ್ದೈವವೇ ಕಾರಣವು.

ಇಜಿಪ್ತದ ಪ್ರಕರಣವು
೧೮೮೨

ಸನ್ ೧೮೮೨ನೆಯ ಇಸವಿಯಲ್ಲಿ ಇಂಗ್ಲಂಡದ ದೊರೆತನದವರು ಇಜಿಪ್ತದೇಶದ ಒಂದು ಪ್ರಕರಣದಲ್ಲಿ ಸೇರಿ ಬಲು ಪೇಚಿಗೊಳಗಾದರು. ಆ ದೇಶದ ಒಡೆಯನಾದ ಖೇದೀವನ ವಿರುದ್ಧವಾಗಿ ಅರಬರ ಪಾಶ್ಯನು ದೊಡ್ಡದೊಂದು ಬಂಡನ್ನೆಬ್ಬಿಸಿ ಅವನ ಸೀಮೆಯನ್ನು ಹಿಡಿದುಕೊಂಡಿದ್ದನು. ಖೇದೀವನು ಇಂಗ್ಲಂಡದ ಸರಕಾರದವರ ಮಿತ್ರನಾಗಿದ್ದುದರಿಂದ, ಅವರು ಅವನ ಒತ್ತಾಸೆಗಾಗಿ ತಮ್ಮ ಸೈನ್ಯವನ್ನು ಅಲ್ಲಿಗೆ ಕಳುಹಿಸಿದ್ದರು. ಈ ಸೈನ್ಯಕ್ಕೆ ಸೇರಿದ ಹಡಗು ಪಡೆಯು ಅಲೆಕ್ಝಾಂಡ್ರಿಯಾ ಪಟ್ಟಣಕ್ಕೆ ತೋಫುಗಳನ್ನು ಹಚ್ಚಿ ಹೊಡಿದು ಅದನ್ನು ಹಾಳು ಮಾಡಿತ್ತು. ಅಲ್ಲಿ ಸುತ್ತಲು ದಂಗೆಗಳೂ ಕ್ರೂರತನಗಳೂ ನಡೆದಿದ್ದವು. ಈ ಕೃತ್ಯಗಳು ಗ್ಲ್ಯಾಡ್‌ಸ್ಟನ್ನನ ಮತ್ತು ಅವನ ಅನುಯಾಯಿಗಳ ಮನಸಿಗೆ ತುಸುವಾದರೂ ಬಂ

ದಿದ್ದಿಲ್ಲ. ಈ ಯುದ್ಧವು ಹಿಂದಿನ ಮುಖ್ಯ ಮಂತ್ರಿಯಾದ ಲಾರ್ಡ್ ಬೀಕನ್ಸ್‌ಫೀಲ್ಡನ ಕಾಲದಿಂದ ನಡೆದು ಬಂದದ್ದಾಗಿದ್ದದರಿಂದಲೂ ಕೆಲವು ವಿಶೇಷ ರಾಜಕಾರಣಗಳಿಗಾಗಿಯೂ ಅದನ್ನು ಒಮ್ಮೆಲೆ ನಿಲ್ಲಿಸಿ ಬಿಡಲಿಕ್ಕೆ ಬರುವಂತಿದ್ದಿಲ್ಲ. ಈ ಸಂಗತಿಯನ್ನು ಗ್ಲ್ಯಾಡ್‌ಸ್ಟನ್ನನ ಪರಮ ಮಿತ್ರನೂ ನಿಸ್ಸೀಮ ಭಕ್ತನೂ ಆದ ಜಾನ್-ಬ್ರೈಟನು ತಿಳಿದುಕೊಂಡು, ಮಂತ್ರಿ ಮಂಡಲದೊಳಗಿನ ತನ್ನ ಸ್ಥಳವನ್ನು ಬಿಟ್ಟುಕೊಟ್ಟನು. ಇದರಿಂದ ಅವನು ತನಗೂ ಗ್ಲಾಡಸ್ಟನ್ನನಿಗೂ ಬಹು ಕಾಲದಿಂದಿದ್ದ ಸಂಬಂಧವು ಹರಿದು ಹೋದದ್ದನ್ನು ನೋಡಿ ಅತಿ ಖಿನ್ನನಾಗಿ ಆ ಸಮಯದಲ್ಲಿ ಒಂದು ಚಿತ್ತವೇಧಕ ಭಾಷಣ ಮಾಡಿದನು. ಅದರ ತಾತ್ಪರ್ಯವೇನಂದರೆ:— “ಇಜಿಪ್ತದ ಈ ಪ್ರಕರಣದ ವಿಷಯವಾಗಿ ನಾನು ಆರಂಭದಿಂದಲೇ ಭಿನ್ನಾಭಿಪ್ರಾಯವುಳ್ಳವನಾಗಿದ್ದೇನೆ. ಈ ಪ್ರಕರಣವು ನನ್ನ ತಲೆ ಹಿಡಿದದ್ದರಿಂದ ನಾನು ನನ್ನ ಕೆಲಸದಿಂದ ನಿವೃತ್ತನಾಗಿದ್ದೇನೆ. ಈ ಸ್ಥಿತಿಯನ್ನು ನೋಡೀ ನೋಡಿ ನಾನು ಮಂತ್ರಿ ಮಂಡಲದಲ್ಲಿ ಉಳಿದಿದ್ದರೆ, ನನ್ನ ಮನಸಿಗೆ ಬಾರದ ಇಲ್ಲವೆ ನನಗೆ ತೀರ ಅಯೋಗ್ಯವಾಗಿ ತೋರಿದ ಅಥವಾ ನನಗೆ ಸಂಪೂರ್ಣವಾಗಿ ಅಸಮಂಜಸವೆಂದು ಕಂಡುಬಂದ ಕೃತ್ಯಗಳಿಗೆ ನಾನು ಒಪ್ಪಿಕೊಳ್ಳಬೇಕಾಗುತ್ತಿತ್ತು; ಇಲ್ಲವೆ ಅವುಗಳನ್ನು ನಿರಾಕರಿಸುವಗೋಸ್ಕರ ನನ್ನ ಮಿತ್ರರ ಕೂಡ ಯಾವಾಗಲು ಜಗಳಾಡುತ್ತ ಹಣಿದಟ್ಟುತ್ತ ಇರಬೇಕಾಗುತ್ತಿತ್ತು. ಇದನ್ನು ಲಕ್ಷದಲ್ಲಿ ತಂದು, ನಾನು ನನ್ನ ಕೆಲಸವನ್ನು ಬಿಟ್ಟು, ಅವರಿಗೂ ಒಳ್ಳೆಯದನ್ನು ಮಾಡಿದ್ದೇನೆ; ನನಗೂ ಒಳ್ಳೆಯದನ್ನು ಮಾಡಿಕೊಂಡಿದ್ದೇನೆ. ನೀತಿ ಶಾಸ್ತ್ರದ ನಿಯಮಗಳನ್ನು ಒಬ್ಬರು ಮತ್ತೊಬ್ಬರ ಕೂಡ ವರ್ತಿಸುವಾಗ ಮಾತ್ರ ಪಾಲಿಸಿದರೆ ತೀರದು; ಆದರೆ ಅವುಗಳನ್ನು ಒಂದು ರಾಷ್ಟ್ರವು ಬೇರೆ ರಾಷ್ಟ್ರಗಳ ಕೂಡ ವರ್ತಿಸುವ ಸಮಯದಲ್ಲಿಯೂ ಪಾಲಿಸಲಿಕ್ಕೆ ಬೇಕು. ಈ ತತ್ವವನ್ನು ನಾನು ಹಿಂದಿನ ನಾಲ್ವತ್ತು ವರ್ಷಗಳಿಂದ ಎಡೆಬಿಡದೆ ಪ್ರತಿಪಾದಿಸುತ್ತ ಬಂದಿರುವದನ್ನೂ ಅದನ್ನು ಪ್ರತಿ ಒಬ್ಬನ ಮನಸ್ಸಿನಲ್ಲಿ ಬಿಂಬಿಸುವ ಪ್ರಯತ್ನವನ್ನು ಮನಃಪೂರ್ವಕವಾಗಿ ಮಾಡುತ್ತಿರುವದನ್ನೂ ಪಾರ್ಲಮೆಂಟ್ ಸಭೆಯವರು ಚೆನ್ನಾಗಿ ಬಲ್ಲರು. ಆದರೆ ಈಗಿನ ಪ್ರಕರಣದಲ್ಲಿ ವ್ಯವಹಾರದೊಳಗಿನ ಅತಿ ಸಾಮಾನ್ಯವಾದ ನಿಯಮಗಳೂ ಪರರಾಷ್ಟ್ರಗಳೊಂದಿಗೆ ವರ್ತಿಸಬೇಕಾಗುವ ವಾಡಿಕೆಯ ಶಿಷ್ಟ ಸಂಪ್ರದಾಯಗಳೂ ಕೂಡ ಉಲ್ಲಂಘಿಸಲ್ಪಟ್ಟಿವೆ. ಇದಕ್ಕೆ ನಾನು ಸಮ್ಮತಿಸಲಾರೆನು. ನಾನು ಇಷ್ಟು ದಿವಸಗಳವರೆಗೆ ಮಾಡುತ್ತ ಬಂದಿರುವ ಉಪದೇಶಗಳ ವಿರುದ್ಧವಾಗಿ ನಾನೇ ನಡೆಯುವದು ನನ್ನಿಂದ ಸರ್ವಥಾ ಆಗದು. ಅದು ಕಾರಣ ನನ್ನ ಮನೋದೇವತೆಯು ನನಗೆ ಸೂಚಿಸಿದ್ದನ್ನು ನಾನು ಮಾಡಿದ್ದೇನೆ.” ಮುಂದೆ ಕೆಲವು ದಿವಸಗಳಲ್ಲಿ ಇಂಗ್ಲಿಷರು ಆ ಪಾಷ್ಯನನ್ನು ಸೋಲಿಸಿ, ಅವನಿಗೆ ಕರಿ-ನೀರಿನ ಶಿಕ್ಷೆಯನ್ನು

ಕೊಟ್ಟು, ಅವನನ್ನು ಸಿಲೋನ ದ್ವೀಪಕ್ಕೆ ಕಳುಹಿಸಿದರು. ಈ ಮೇರೆಗೆ ಇಜಿಪ್ತ ದೇಶದಲ್ಲಿ ಇಂಗ್ಲಿಷರ ವರ್ಚಸ್ಸು ಸ್ಥಿರಗೊಂಡಿತು. ಅದಲ್ಲೆಲ್ಲ ಒಳಿತೇ ಆಯಿತು. ಆದರೆ ಈ ಯುದ್ಧದಲ್ಲಿ ತಕ್ಕಷ್ಟು ವ್ಯವಸ್ಥೆ ಇಲ್ಲದ್ದರಿಂದ ಇಂಗ್ಲಿಷರ ಕಡೆಯು ಬಹು ಜನ ಗಟ್ಟಿಗರು ರಣ ಭೂಮಿಯಲ್ಲಿ ಮಡಿದರು. ಈ ಹಾನಿಗೆ ಸರಿಯಾದ ಪ್ರತಿ ಫಲವು ಇಂಗ್ಲಂಡಕ್ಕೆ ದೊರೆಯಲಿಲ್ಲ. ಆದರೂ ಗ್ಲ್ಯಾಡಸ್ಟನ್ನನು ತನ್ನ ಪ್ರಯತ್ನಗಳಿಂದ ಆ ದೇಶದಲ್ಲಾಗತಕ್ಕ ರಕ್ತಪಾತವನ್ನು ಆದಷ್ಟು ಕಡಿಮೆ ಮಾಡಿದನೆಂತಲೂ ಅಲ್ಲಿ ಶಾಂತತೆಯನ್ನು ನೆಲೆಗೊಳಿಸಿದನೆಂತಲೂ ಹೇಳಲಿಕ್ಕೆ ಏನೂ ಸಂದೇಹವಿಲ್ಲ.

ಟ್ರಾನ್ಸವಾಲದ ಪ್ರಕರಣವು. ೧೮೮೫

ಗ್ಲ್ಯಾಡಸ್ಟನ್ನನು ಇನ್ನೊಂದು ಪ್ರಕರಣದಲ್ಲಿ ಕೈಹಾಕಬೇಕಾಯಿತು. ಅದು ಟ್ರಾನ್ಸವಾಲದೊಳಗಿನ ಪ್ರಜಾಸತ್ತಾತ್ಮಕ ರಾಜ್ಯಕ್ಕೆ ಸೇರಿದ್ದು. ಆ ರಾಜ್ಯವು ಅಫ್ರಿಕಾ ಖಂಡದಲ್ಲುಂಟು. ಅದು ಎಷ್ಟೋ ವರ್ಷಗಳಿಂದ ಇಂಗ್ಲಂಡ ದೇಶಕ್ಕೆ ಅಂಕಿತವಾಗಿತ್ತು. ಆದರೆ ಅದು ಇತ್ತಿತ್ತಲಾಗಿ ಆ ಅಂಕಿತವನ್ನು ತಪ್ಪಿಸಿ ಸ್ವತಂತ್ರವಾಗಿತ್ತು. ಅಲ್ಲಿಯ ನಿವಾಸಿಗಳಿಗೆ ಬೋಅರರು ಎಂದೆನ್ನುವರು. ಅವರು ಒಳ್ಳೇ ಎದೆಗಾರರು. ಅವರು ಇಂಗಿಷ್ ಸಾಮ್ರಾಜ್ಯಕ್ಕೆ ಅಧೀನವಾಗಿರಲು ಬಯಸುತ್ತಿರುವರೆಂಬ ಭ್ರಾಂತಿಯು ಇಂಗ್ಲಂಡದ ಸರಕಾರದವರಿಗೆ ಬಿದ್ದಿತ್ತು. ಇದನ್ನು ಪ್ರತ್ಯಕ್ಷವಾಗಿ ವಿಚಾರಿಸುವದಕ್ಕೆ ಅವರು ಸರ್ ಥಿಯೋಫಿಲಸ ಶೆಪ್‌ಸ್ಟೋನನೆಂಬ ಹೆಸರಿನ ಒಬ್ಬ ಅಧಿಕಾರಸ್ಥನನ್ನು ಟ್ರಾನ್ಸವಾಲಕ್ಕೆ ಕಳುಹಿಸಿದರು. ಆದರೆ ಅವನಿಗೆ ಆ ಜನರ ನಿಜಸ್ಥಿತಿಯು ಏನೂ ಗೊತ್ತಾಗಲಿಲ್ಲ. ಅವನ ಬಳಿಗೆ ಕೆಲವು ಜನ ಬೋಅರರು ಬಂದು, ಅವನೊಂದಿಗೆ ಮಿತ್ರತ್ವದ ಒಂದೆರಡು ಮಾತುಗಳನ್ನಾಡಿ ಹೊರಟು ಹೋದರು. ಅಷ್ಟರಿಂದಲೇ ಉಳಿದ ಎಲ್ಲ ಜನರ ಅಭಿಪ್ರಾಯವಾದರೂ ಹಾಗೆಯೇ ಇರಬಹುದೆಂದು ಗ್ರಹಿಸಿ ಅವನು ಒಮ್ಮೆಲೆ ಇಂಗ್ಲಿಷ್ ಸರಕಾರದ ಧ್ವಜವನ್ನು ಅಲ್ಲಿ ನಿಲ್ಲಿಸಿ, ಆ ರಾಜ್ಯವು ಇನ್ನು ಮುಂದೆ ಇಂಗ್ಲಿಷ್ ಸಾಮ್ರಾಜ್ಯದ ಒಂದು ಭಾಗವಾಗಿದೆಂದು ಪ್ರಕಟಿಸಿದನು. ಇದನ್ನು ಕೇಳಿದ ಕೂಡಲೆ, ಬೋಅರ ಜನರು ಸಿಟ್ಟುಬೆಂಕಿಯಾದರು. ಅವರು ಸ್ವಭಾವತಃ ಉಗ್ರರೂ ಅನ್ಯರ ಆಳ್ಕಿಗೊಳಗಾಗದವರೂ ಎಂಬ ಸಂಗತಿಯನ್ನು ಗ್ಲ್ಯಾಡ್‌ಸ್ಟನ್ನನು ತಿಳಿದುಕೊಂಡು, ಈ ಕಾನ್ಸರ್ವೇಟೀವ್ ಅಧಿಕಾರಸ್ಥರು ತಮ್ಮ ತಪ್ಪು ತಿಳುವಳಿಕೆಯಿಂದ ಈ ಅನುಚಿತ ಕೃತ್ಯಗಳನ್ನು ನಡೆಯಿಸಿರುವರು. ಇವುಗಳ ಪರಿಣಾಮವು ಹಿತಕರವಾಗದು ಎಂದು ಮೇಲಿಂದ ಮೇಲೆ ಹೇಳಲಾರಂಭಿಸಿದನು. ಕಟ್ಟಕಡೆಗೆ ಟ್ರಾನ್ಸವಾಲದ ಜನರು ತಾವು ಇಂಗ್ಲಿಷ್ ಸರಕಾರದವರಿಗೆ ಅಂಕಿತನಾಗಿರಲು ಒಪ್ಪುವದಿಲ್ಲೆಂದು ಸಾರಿ ಹೇಳಿ, ಒಮ್ಮಿಂದೊಮ್ಮೆ ಇಂಗಿಷ್ ಸೈನ್ಯದ ಮೇಲೆ ಬಿದ್ದು, ಅದನ್ನು ಸಂಪೂರ್ಣವಾಗಿ

ಸೋಲಿಸಿ ಬಿಟ್ಟರು. ಈ ಸಂಗತಿಗಳು ಅತ್ತ ನಡೆದಿರಲು, ಇತ್ತ ಗ್ಲ್ಯಾಡ್‌ಸ್ಟನ್ನನು ಎರಡನೆಯ ಸಾರೆ ಮುಖ್ಯ ಮಂತ್ರಿಯಾದನು. ಅವನು ಬೋಅರರೊಡನೆ ಒಪ್ಪಂದ ಮಾಡಿಕೊಳ್ಳುವದು ಲೇಸೆಂದೆಣಿಸಿದನು. ಆದರೆ ಅದಕ್ಕೆ ಉಳಿದ ಮುತ್ಸದ್ದಿಗಳು ಒಪ್ಪಲಿಲ್ಲ ಈ ಸಮಯದಲ್ಲಿ ಗ್ಲ್ಯಾಡ್‌ಸ್ಟನ್ನನು 'ನಾವು ಅವರ ರಾಜ್ಯವನ್ನು ತಪ್ಪು ಗ್ರಹಿಕೆಯಿಂದ ನಮ್ಮ ರಾಜ್ಯಕ್ಕೆ ಸೇರಿಸಿಕೊಂಡಿದ್ದೇವೆ ಅದು ಕಾರಣ ಅವರ ರಾಜ್ಯವನ್ನು ಅವರಿಗೆ ಬಿಟ್ಟು ಬಿಡುವದು ನಮ್ಮ ಕ್ರಿಸ್ತೀ ರಾಜ್ಯರೀತಿಗೂ ನಮ್ಮ ರಾಷ್ಟ್ರದ ಉಜ್ವಲ ಕೀರ್ತಿಗೂ ಭೂಷಣವಾದದ್ದು' ಎಂದು ಹೇಳಿ, ಮೊದಲಿನಂತೆ ಅಲ್ಲಿ ಪ್ರಜಾಸತ್ತಾತ್ಮಕ ದೊರೆತನವು ನಡೆಯಬೇಕು, ಅದರ ಮೇಲೆ ಇಂಗ್ಲಂಡದ ಲಕ್ಷವಿರಬೇಕು ಎಂಬ ಕರಾರುಗಳಿಂದ ಅವರ ರಾಜ್ಯವನ್ನು ಅವರಿಗೆ ತಿರುಗಿ ಕೊಟ್ಟನು. ಇಂಗ್ಲಿಷ್ ಸೈನ್ಯವು ಬೋಅರ ಜನರನ್ನು ಸೋಲಿಸಿ, ಅವರ ರಾಜ್ಯವನ್ನು ಕಸುಕೊಳ್ಳುವದು ತಡವಿದ್ದಿಲ್ಲ; ಆದರೆ ಹಾಗೆ ಮಾಡುವದು ಅನ್ಯಾಯವೆಂದು ತಿಳಿದು ಅವನು ಅದನ್ನು ನಿಲ್ಲಿಸಿದನು. ಈ ಸಂಗತಿಯು ಸನ್ ೧೮೮೧ ನೆಯ ಇಸವಿಯಲ್ಲಿ ವರ್ತಿಸಿತು. ಅವನ ಈ ಕೃತ್ಯಕ್ಕೆ ಬಹು ಜನರು ಒಪ್ಪದೆ, ಅವನು ಇಂಗ್ಲಂಡಕ್ಕೆ ದೊಡ್ಡ ಹಾನಿಯನ್ನುಂಟು ಮಾಡಿದನೆಂದು ಗುಣುಗುಟ್ಟಿದರು. ಆದರೂ ಗ್ಲ್ಯಾಡ್‌ಸ್ಟನ್ನನು ತಾನು ಮಾಡಿದ್ದು ಧರ್ಮಕ್ಕೂ ನೀತಿಗೂ ಅನುಗುಣವಾದದ್ದೆಂದೆಣಿಸಿ ಸುಮ್ಮನಾದನು.

ಹಿಂದುಸ್ಥಾನಕ್ಕೆ ರಶಿಯನ್ನರಿಂದುಂಟಾದಭೀತಿಯು ಓರಿಗಾದದ್ದು, ೧೮೮೫.

ಇದೇ ಸಂಧಿಗೆ ಆಸಿಯಾ ಖಂಡದ ಮಧ್ಯಪ್ರದೇಶದಲ್ಲಿ ರಶಿಯನ್ನರು ಹೆಜ್ಜೆ ಹೆಜ್ಜೆ ಮುಂದರಿಸುತ್ತ ಬಂದು, ಪೆಂಜದೇ ಎಂಬ ಸ್ಥಳವನ್ನು ಹಿಡಿದುಕೊಂಡರು. ಒಂದು ವೇಳೆ ಅವರನ್ನು ಈಗಲೇ ಹಣಿದು ಹಿಂದಕ್ಕಟ್ಟದಿದ್ದರೆ ಅವರು ಮತ್ತೂ ಮುಂದಕ್ಕೆ ಬಂದು ಹಿಂದುಸ್ಥಾನದೊಳಗಿನ ಇಂಗ್ಲಿಷ್ ದೊರೆತನಕ್ಕೆ ಮುಳುವಾಗುವ ಲಕ್ಷಣವು ಸ್ಪಷ್ಟವಾಗಿ ಕಂಡು ಬಂತು ಆ ಅರಿಷ್ಟವು ಒಳ್ಳೆಯ ಮಾತಿನಿಂದ ಓರಿಗಾಗದೆಂದು ತಿಳಿದುಕೊಂಡು, ಗ್ಲ್ಯಾಡ್‌ಸ್ಟನ್ನನು ಅದರ ವಿಷಯವಾಗಿ ಪಾರ್ಲಮೆಂಟಿನಲ್ಲಿ ಉತ್ತಮವಾದದ್ದೊಂದು ಭಾಷಣ ಮಾಡಿದನು. ಅವನ ಭಾಷಣಕ್ಕೆ ಇದಿರುತ್ತರ ಕೊಡುವ ಎದೆಯು ಯಾರಿಗೂ ಆಗಲಿಲ್ಲ. ಆ ಮೇಲೆ ಪಾರ್ಲಮೆಂಟಿನವರು ರಶಿಯನ್ನರ ಕೂಡ ಯುದ್ಧವನ್ನು ಹೂಡುವದಕ್ಕಾಗಿ ೧ ಕೋಟಿ ೧೦ ಲಕ್ಷ ಪೌಂಡು ಹಣವನ್ನು ಮಂಜೂರು ಮಾಡಿದರು. ಆದರೆ ಮುಂದೆ ಈ ಉಭಯ ರಾಷ್ಟ್ರಗಳ ಮಧ್ಯದಲ್ಲಿ ಮಿತ್ರತ್ವದ ಮಾತು ಕಥೆಗಳು ನಡೆದು ಈ ಪ್ರಕರಣವು ಅಷ್ಟಕ್ಕೆ ಶಾಂತವಾಯಿತು.



# ೪ನೆಯ ಅಧ್ಯಾಯ.

## ನೇಪಲ್ಸ ಮತ್ತು ಬಲ್ಗೇರಿಯಾ.

ಅಯಂ ನಿಜಃ ಪರೋವೇತಿ ಗಣನಾ ಲಘುಚೇತಸಾಮ್ ।
ಉದಾರ ಚರಿತಾನಾಂತು ವಸುಧೈವ ಕುಟುಂಬಕಮ್ ॥

ಇವನು ನನ್ನವನು, ಅವನು ಪರಕೀಯನವನು ಎಂಬ ಕುತ್ಸಿತ ಬುದ್ಧಿಯು ಸಂಕುಚಿತ ಮನಸ್ಸುಳ್ಳವರದಾಗಿದೆ; ಆದರೆ ಉದಾರ ಮನಸ್ಸಿನವರು ಭೂಮಂಡಲದೊಳಗಿನ ಜನರೆಲ್ಲರೂ ತಮ್ಮ ಆಪ್ತರೆಂದು ತಿಳಿದುಕೊಳ್ಳುವರು.

---

ಮೇಲಿನ ವಚನದಲ್ಲಿ ಹೇಳಿರುವಂತೆ, ಇವರು ಸ್ವದೇಶದವರು ಅವರು ಪರದೇಶದವರು ಎಂಬ ಭೇದಾಭೇದವನ್ನು ಮಾಡದೆ, ಎಲ್ಲರೂ ತಮ್ಮ ಬಂಧುಗಳಾಗಿರುವರೆಂದೆಣಿಸಿ, ಅವರಿಗೆ ಬಂದ ಕಷ್ಟಗಳನ್ನು ಪರಿಹರಿಸುವದು ಸಾಧು ಪುರುಷರ ಹುಟ್ಟುಗುಣವಾಗಿದೆ. ಈ ಗುಣಕ್ಕನುಸರಿಸಿದ ಬಹು ಕೃತ್ಯಗಳನ್ನು ಗ್ಲ್ಯಾಡ್‌ಸ್ಟನ್ನನು ಮಾಡಿರುವನು. ಅವುಗಳನ್ನೆಲ್ಲ ತುದಿ ಮೊದಲ್ಗೊಂಡು ವಿವರಿಸಲು ಇಲ್ಲಿ ಅವಕಾಶವಿಲ್ಲದ್ದರಿಂದ, ಅವುಗಳೊಳಗಿನ ಎರಡನ್ನು ಮಾತ್ರ ಇಲ್ಲಿ ಹೇಳುವೆವು. ಆಕೃತ್ಯಗಳೊಳಗಿನ ಮೊದಲನೆಯದು ಇಟಲೀ ದೇಶದ ದಕ್ಷಿಣಭಾಗದಲ್ಲಿರುವ ನೇಪಲ್ಸವೆಂಬ ಸಣ್ಣ ರಾಜ್ಯದೊಳಗಿನ ರಾಜ್ಯದಾಡಳಿತೆಗೆ ಸಂಬಂಧಿಸಿದ್ದಿರುತ್ತದೆ. ಮತ್ತೊಂದು ತುರ್ಕಸ್ಥಾನದ ಸುಲ್ತಾನನಿಗೆ ಆಧೀನವಾದ ಬಲ್ಗೇರಿಯಾ ಎಂಬ ಪ್ರಾಂತಕ್ಕೆ ಸೇರಿದ್ದಿರುತ್ತದೆ. ಇವುಗಳಲ್ಲಿ ನೇಪಲ್ಸದ ವೃತ್ತಾಂತವನ್ನು ಮೊದಲು ಹೇಳುವೆವು.

ಗ್ಲ್ಯಾಡ್‌ಸ್ಟನ್ನನು ನೇಪಲ್ಸಕ್ಕೆ ಹೋದದ್ದು ೧೮೫೦.

ಸನ್ ೧೮೫೦ ನೆಯ ಇಸವಿಯ ಕೊನೆಯ ಭಾಗದಲ್ಲಿ, ಗ್ಲ್ಯಾಡ್‌ಸ್ಟನ್ನನ ಚಿಕ್ಕ ಮಗಳು ಜಡ್ಡಿನಿಂದ ಮಲಗಿದಳು. ಅವಳ ಜಡ್ಡು ಹಿಂದಕ್ಕೆ ಸರಿದು, ಅವಳು ಸಂಪೂರ್ಣವಾಗಿ ಗುಣಹೊಂದಬೇಕಾದರೆ, ಅವಳನ್ನು ಯುರೋಪಖಂಡದ ದಕ್ಷಿಣಭಾಗದೊಳಗಿನ ಸಮುದ್ರತೀರದ ಯಾವದಾದರೊಂದು ಸ್ಥಳದಲ್ಲಿಡುವದು ಅವಶ್ಯವೆಂದು ವೈದ್ಯರು ಹೇಳಿದರು. ಅವರ ಹೇಳಿಕೆಯಂತೆ ಗ್ಲ್ಯಾಡ್‌ಸ್ಟನ್ನನು ಕು

ಟೆಂಬ ಸಹಿತವಾಗಿ ಇಟಲಿಯ ದಕ್ಷಿಣ ದಿಕ್ಕಿನಲ್ಲಿರುವ ನೇಪಲ್ಸವೆಂಬ ಒಂದು ಸಣ್ಣ ಮಾಂಡಲಿಕ ರಾಜ್ಯಕ್ಕೆ ಹೋಗಿ, ಅದರ ರಾಜಧಾನಿಯಲ್ಲಿ ವಾಸಿಸಿದನು. ಆ ಕಾಲದಲ್ಲಿ ೨ನೆಯ ಫರ್ಡಿನಾಂಡನೆಂಬ ಅರಸು ಆ ರಾಜ್ಯವನ್ನು ಆಳುತ್ತಿದ್ದನು. ಇಂಗ್ಲಂಡದಲ್ಲಿದ್ದಂತೆ ಅಲ್ಲಿಯೂ ಒಂದು ಪಾರ್ಲಮೆಂಟ್ ಸಭೆ ಇತ್ತು. ಆದರೆ ಅಲ್ಲಿಯ ಆಡಳಿತವನ್ನು ಒಂದು ದೂರಿನ ಗುಡ್ಡಕ್ಕೆ ಹೋಲಿಸಬಹುದು. ದೂರದ ಗುಡ್ಡವು ನುಣ್ಣಗೆ ತೋರುವಂತೆ ಅಲ್ಲಿಯ ರಾಜ್ಯಕಾರಭಾರವು ಕಾಯದೆ-ಕಟ್ಟಳೆಗಳಿಗೆ ಸರಿಯಾಗಿ ಸಾಗಿರುವಂತೆ ಪರನಾಡಿನವರಿಗೆ ತೋರುತ್ತಿತ್ತು. ಆದರೆ ಗುಡ್ಡದ ಬಳಿಗೆ ಹೋಗಿ ನೋಡಿದರೆ, ಅಲ್ಲಿ ಕಲ್ಲು-ತುಳ್ಳುಗಳೂ ಹುಳು-ಹುಪ್ಪಡಿಗಳೂ ಕಾಣಿಸುವಂತೆ, ಆ ಆಡಳಿತದ ಒಳಗೆಲ್ಲ ಹುಳುಕುಗಳೇ ತುಂಬಿದ್ದವು. ಅಲ್ಲಿ ತೀರ ಮೊಗಲಾಯಿಯೇ ನಡೆದಿತ್ತೆಂದು ಹೇಳಬಹುದು. ಅಲ್ಲಿಯ ರಾಜ್ಯವ್ಯವಸ್ಥೆಯು ಮೋಸಕ್ಕೆ ತವರ್ಮನೆಯಾಗಿತ್ತು. ಸರಕಾರದ ಉದ್ಯೋಗಸ್ಥರೆಲ್ಲ ಲಂಚಬಡಕರೂ ದುರ್ವ್ಯಸನಿಗಳೂ ದುರಾಚಾರಿಗಳೂ ಆಗಿದ್ದರು. ಅವರು ಪ್ರಜೆಗಳನ್ನು ಪರಿಪರಿಯಿಂದ ಪೀಡಿಸುತ್ತಿದ್ದರು. ಪ್ರಜೆಗಳ ಮೊರೆಯನ್ನು ಕೇಳುವವರು ಯಾರೂ ಇಲ್ಲದಂತಾಗಿತ್ತು. ಅವರು ಈ ಕಾಟಗಳನ್ನು ತಡೆಯಲಾರದೆ ಮೇಲಿಂದಮೇಲೆ ಬಂಡುಗಳನ್ನು ಎಬ್ಬಿಸುತ್ತಿದ್ದರು. ಈ ಬಂಡುಗಳನ್ನು ಅರಸು ಅತಿ ಕ್ರೂರ ಉಪಾಯಗಳಿಂದ ಮುರಿಯುತ್ತಿದ್ದನು. ಇದರಿಂದ ಅರಸನಿಗೂ ಪ್ರಜೆಗಳಿಗೂ ಬದ್ಧದ್ವೇಷ ಉಂಟಾಗಿ ಪ್ರತಿಷ್ಠಿತ ಜನರು ಸಹ ಅಪರಿಮಿತ ಕಷ್ಟಗಳಿಗೆ ಮೇಲಿಂದಮೇಲೆ ಗುರಿಯಾಗುತ್ತಿದ್ದರು. ಈ ಕಷ್ಟಗಳನ್ನು ತುಸು ವಿವರವಾಗಿ ಹೇಳುವದು ಅವಶ್ಯವುಂಟು.

*ನೇಪಲ್ಸದೊಳಗಿನ ನಿರಂಕುಶವಾದ ಪ್ರಭುತ್ವವು.*

ನೇಪಲ್ಸದ ಪಾರ್ಲಮೆಂಟಿನಲ್ಲಿ ಪ್ರಜಾಪಕ್ಷ ಮತ್ತು ರಾಜಪಕ್ಷ ಎಂಬ ಎರಡು ಬಣಗಳಿದ್ದವು. ಅವುಗಳಲ್ಲಿ ಮೊದಲನೆಯದು ಲಿಬರಲ್ ಪಕ್ಷವೂ ಎರಡನೆಯದು ಕಾನ್ಸರ್ವೇಟಿವ್ ಪಕ್ಷವೂ ಆಗಿದ್ದವು. ರಾಜಪಕ್ಷದವರು ರಾಜ್ಯಕಾರಭಾರದ ಕೆಲಸಗಳನ್ನೆಲ್ಲ ತಮ್ಮ ಇಚ್ಛಾನುಸಾರವಾಗಿ ನಡೆಯಿಸಲಪೇಕ್ಷಿಸುತ್ತಿದ್ದದರಿಂದ ಪಾರ್ಲಮೆಂಟಿನಲ್ಲಿ ತಮ್ಮದೇ ಬಹುಮತ ಮಾಡಿಕೊಳ್ಳಲು ಯಾವಾಗಲೂ ಪ್ರಯತ್ನಿಸುತ್ತಿದ್ದರು. ಆದರೆ ಪಾರ್ಲಮೆಂಟಿನಲ್ಲಿ ಪ್ರಜಾಪಕ್ಷದ ಸಭಾಸದರು ಹೆಚ್ಚು ಜನರೂ ಸುಶಿಕ್ಷಿತರೂ ಆಗಿದ್ದರು. ಈ ಕಾರಣಗಳಿಂದ ರಾಜಪಕ್ಷದವರ ಬಯಕೆಯು ಸುಲಭವಾಗಿ ಈಡೇರುತ್ತಿದ್ದಿಲ್ಲ. ಅದುಕಾರಣ ಅವರು, ಪ್ರಜಾಪಕ್ಷದೊಳಗಿನ ಬಹು ಜನರ ಮೇಲೆ ಇಲ್ಲದ್ದೊಂದು ಆರೋಪವನ್ನು ಹೊರಿಸಿ, ಅವರನ್ನು ಹಿಡಿದುಕೊಂಡು ಹೋಗಿ, ಏನೂ ವಿಚಾರಣೆಯನ್ನು ನಡೆಯಿಸದೆ ಕೆಲವರನ್ನು ವರ್ಷಾನುವರ್ಷ ಸೆರೆಮನೆಯಲ್ಲಿ ಹಾಕಿ ಜೀವಿಸುವದಕ್ಕಿಂತ ಸಾಯುವದೇ ಲೇಸೆಂದು ಅನ್ನಿಸುವರೆಗೆ

ಅವರಿಗೆ ತರ ತರದ ಪೀಡೆಗಳನ್ನು ಕೊಡುತ್ತಿದ್ದರು; ಕೆಲವರನ್ನು ಗಡಿದಾಟಿಸಿ ಬಿಡು ತ್ತಿದ್ದರು. ಈ ಮಾದರಿಯ ಹಿಂಸೆಗಳನ್ನು ಅವರು ಪಾರ್ಲಮೆಂಟಿನೊಳಗಿನ ತಮ್ಮ ವಿರುದ್ಧ ಪಕ್ಷದ ಸಭಾಸದರಿಗೆ ಮಾತ್ರವಲ್ಲ ಆದರೆ ತಮ್ಮ ವಿರುದ್ಧವಾಗಿ ವರ್ತಿಸುವಂತೆ ಕಾಣಿಸಿಕೊಂಡವರಿಗೆಲ್ಲ ಕೊಡುತ್ತಿದ್ದರು. ಗ್ಲ್ಯಾಡ್‌ಸ್ಟನ್ನನು ಅಲ್ಲಿಗೆ ಹೋದಾಗ್ಗೆ ರಾಜಪಕ್ಷದವರು ಪಾರ್ಲಮೆಂಟಿನೊಳಗಿನ ೭೬ ಜನ ಸಭಾಸದರ ಮೇಲೆ ಸುಳ್ಳು ಆರೋಪಗಳನ್ನು ಹೊರಿಸಿ, ಅವರೆಲ್ಲರಿಗೂ ಸೆರೆಮನೆಯನ್ನು ಕಾಣಿಸಿದ್ದರು. ಅವರ ಹೊರತು ಸುಮಾರು ೨೦,೦೦೦ ನಿರಪರಾಧಿಗಳನ್ನು ಸೆರೆಮನೆಯಲ್ಲಿಟ್ಟಿದ್ದರು. ಅವರೆಲ್ಲರನ್ನೂ ಹಗಲಿರಳು ಕತ್ತಲೆಯ ಕೋಣೆಗಳಲ್ಲಿಯೇ ಇಟ್ಟುಬಿಟ್ಟಿದ್ದರು. ಆ ಕೋಣೆಗಳಲ್ಲಿ ಗಾಳಿಯು ಅಥವಾ ಬೆಳಕಿನ ಪ್ರವೇಶವೇ ಇದ್ದಿಲ್ಲ. ಅವರ ಕಾಲು ಗಳಲ್ಲಿ ಎತ್ತಲಾರದ ದೊಡ್ಡ ದೊಡ್ಡ ಸಂಕೋಲೆಗಳನ್ನು ಹಾಕಿದ್ದರು. ನೋಡಿದರೆ ವಾಕರಿಕೆ ಬರುವಂಥ ಆಹಾರವನ್ನು ಅವರಿಗೆ ಕೊಡುತ್ತಿದ್ದರು. ಅವರಲ್ಲಿ ಬಹು ಜನರು ರಾಜ್ಯಕಾರ್ಯಧುರಂಧರರೂ ಮಹಾ ಬುದ್ಧಿಶಾಲಿಗಳೂ ಎಂದು ಹೆಸರು ಪಡೆದವರು ಸಹ ಇದ್ದರು. ಆದರೆ ಅವರ ಮೊರೆಗಳನ್ನು ಕೇಳುವವರು ಒಬ್ಬರೂ ಇದ್ದಿಲ್ಲ. ಅಲ್ಲಿಯ ಕಾಯದೆಗಳನ್ನು ನೋಡಿದರೆ ಅವು ಇಂಗ್ಲಂಡದ ಕಾಯದೆಗಳಂತೆಯೇ ಇದ್ದವು. ಆರೋಪಿಗಳನ್ನು ಹಿಡಿದ ೨೪ ತಾಸುಗಳೊಳಗಾಗಿಯೇ ಅವರನ್ನು ನ್ಯಾಯಾಧೀಶರ ಮುಂದೆ ನಿಲ್ಲಿಸಬೇಕೆಂಬ ನಿಯಮವು ಕಾಯದೆಯ ಪುಸ್ತಕದಲ್ಲಿ ಮಾತ್ರವಿತ್ತು. ಆದರೆ ಈ ನಿಯಮಕ್ಕೆ ಯಾರು ಲಕ್ಷಗೊಡುತ್ತಿದ್ದಿಲ್ಲ. ಒಂದುವೇಳೆ ಆರೋಪಿಗಳನ್ನು ನ್ಯಾಯಾಧೀಶರ ಬಳಿಗೆ ಒಯ್ಯುವ ಪ್ರಸಂಗವೇ ಬಂದ ಪಕ್ಷದಲ್ಲಿ, ಅವರನ್ನು ಯಾವುದೊಂದು ನೆವದಿಂದ ನ್ಯಾಯಾಧೀಶರ ಮುಂದೆ ಒಯ್ದಂತೆ ಮಾಡಿ, ಪುನಃ ಅವರನ್ನು ತಂದು ಸೆರೆಮನೆಯಲ್ಲಿ ಹಾಕಿಬಿಡುತ್ತಿದ್ದರು. ಈ ತರದ ಅನಾಯಕತನವು ಬಹು ವರ್ಷಗಳಿಂದ ನಡೆಯುತ್ತ ಬಂದಿತು. ಇದರಿಂದ ಪ್ರಜೆಗಳು ವಿಲಿವಿಲಿಗೊಂಡು, ಎಲ್ಲ ಭಾರವನ್ನು ದೇವರ ಮೇಲೆ ಹಾಕಿ, 'ನೀನೇ ನಮಗೆ ಗತಿಯು, ನಿನ್ನ ಹೊರತು ನಮ್ಮನ್ನು ಈ ಸಂಕಟದೊಳಗಿಂದ ಮುಕ್ತರನ್ನಾಗಿ ಮಾಡುವವರು ಯಾರು ಇಲ್ಲ' ಎಂದು ಹಗಲಿರಳು ಅವನನ್ನು ಪ್ರಾರ್ಥಿಸುತ್ತಿದ್ದನು.

ಗ್ಲ್ಯಾಡ್‌ಸ್ಟನ್ನನು ನೇಪಲ್ಸದ ಅರಸನಿಗೆ ಭೆಟ್ಟಿಯಾದದ್ದು.

ಗ್ಲ್ಯಾಡ್‌ಸ್ಟನ್ನನು ಅಲ್ಲಿಗೆ ಹೋದ ಕೆಲವು ದಿವಸಗಳಲ್ಲಿಯೇ, ಈ ಸಂಗತಿಗಳೆಲ್ಲ ಅವನಿಗೆ ಸಹಜವಾಗಿಯೇ ತಿಳಿದವು. ಈ ಹೃದಯದ್ರಾವಕ ಸುದ್ದಿಗಳನ್ನು ಕೇಳಿದ ಕ್ಷಣವೇ, ಆ ಕರುಣಾಶಾಲಿಯು ವ್ಯಾಕುಳಿತನಾದನು; ಅವನ ಮನಸ್ಸಿನಲ್ಲಿ ಸಿಟ್ಟು ಹುಟ್ಟಿ, ಅದು ಅವನ ಸರ್ವಾಂಗವನ್ನು ವ್ಯಾಪಿಸಿತು; ತುಸು ಹೊತ್ತಿನ ಮೇಲೆ, ಅವನು ಶಾಂತ ಚಿತ್ತನಾಗಿ, ತಾನು ಕೇಳಿದ ಸುದ್ದಿ

ಗಳೆಲ್ಲ ನಿಜವಾದವುಗಳೋ ಅಥವಾ ಅವುಗಳಲ್ಲಿ ಏನಾದರು ಅತಿಶಯೋಕ್ತಿಯು ಉಂ
ಟೋ ಎಂಬದನ್ನು ಮನವರಿಕೆ ಮಾಡಿಕೊಳ್ಳುವದು ತನ್ನ ಮೊದಲನೆಯ ಕೆಲಸವಾಗಿ
ದೆಂದು ತಿಳಿದುಕೊಂಡನು. ಆ ಮೇಲೆ ಅವನು ಒಂದು ದಿವಸ ಅಲ್ಲಿಯ ಅರಸನ
ದರ್ಶನಕ್ಕೆ ಹೋದನು. ಶಿಷ್ಟಾಚಾರದ ಮಾತು-ಕಥೆಗಳಾದ ಮೇಲೆ, ಅವನು ಅ
ರಸನಿಗೆ, ತಮ್ಮ ಸೆರೆಮನೆಯನ್ನು ನೋಡುವ ಅಪೇಕ್ಷೆಯು ನನಗುಂಟು, ಅದನು
ದಯವಿಟ್ಟು ಪೂರ್ಣ ಮಾಡಬೇಕೆಂದು ಬೇಡಿಕೊಂಡನು. ಅದಕ್ಕೆ ಅರಸನು ಕೂಡ
ಲೆ ಸಮ್ಮತಿಸಿದನು. ಈ ಸಮ್ಮತಿಯು ತನ್ನ ರಾಜ್ಯದಾಡಳಿತಕ್ಕೆ ಕುಂದು ತರಬಹು
ದೆಂಬ ವಿಚಾರವು ಆ ಸರಳ ಸ್ವಭಾವದ ಅರಸನ ಕನಸುಮನಸುಗಳಲ್ಲಿ ಸಹ ಬರಲಿ
ಲ್ಲ. ಒಂದು ವೇಳೆ ಅವನು ತನ್ನ ರಾಜ್ಯದಲ್ಲಿದ್ದಂತೆಯೇ ಅಲ್ಪ ಸ್ವಲ್ಪ ಪ್ರಮಾಣದಿಂ
ದ ಫ್ರಾನ್ಸ್, ಜರ್ಮನಿ, ರಶಿಯಾ ಮುಂತಾದ ದೊಡ್ಡ ದೊಡ್ಡ ರಾಜ್ಯಗಳಲ್ಲಿಯೂ
ಉಂಟು. ಹೀಗಿರುವಲ್ಲಿ ಗ್ಲ್ಯಾಡಸ್ಟನ್ನನಿಗೆ ತನ್ನ ಸೆರೆಮನೆಯನ್ನೂ ಅದರಲ್ಲಿದ್ದ ರಾಜಕೀ
ಯ ಕೈದಿಗಳನ್ನೂ ನೋಡಗೊಡಲು ಏನೂ ಅಡ್ಡಿ ಇಲ್ಲವೆಂದು ನೆನಸಿದರೂ ನೆನಸಿ
ರಬಹುದು. ಈ ಮೇರೆಗೆ ಅತಿ ಸುಲಭದಿಂದ ಅರಸನ ಅಪ್ಪಣೆಯು ದೊರೆದಮೇ
ಲೆ, ಗ್ಲ್ಯಾಡಸ್ಟನ್ನನು ಆ ಸೆರೆಮನೆಗೆ ಹೋಗಿ, ಅಲ್ಲಿಯ ಸ್ಥಿತಿಯನ್ನು ಪ್ರತ್ಯಕ್ಷವಾ
ಗಿ ನೋಡಿ, ತಾನು ಕೇಳಿದ ಸುದ್ದಿಗಳೆಲ್ಲ ಅಕ್ಷರಶಃ ನಿಜವಿರುತ್ತವೆಂದು ಮನಗಂ
ಡನು. ಆವೊತ್ತಿನಿಂದ ಅವನು ಆ ಕ್ರೂರ ಕೃತ್ಯಗಳನ್ನು ನಿಲ್ಲಿಸುವ ಉದ್ಯೋಗಕ್ಕೆ
ಹತ್ತಿದನು. ಒಂದು ಬಗೆಯಿಂದ ನೋಡಿದರೆ, ಗ್ಲ್ಯಾಡಸ್ಟನ್ನನು ಒಂದು ದೇಶದ
ವನು, ನೇಪಲ್ಸದ ಜನರು ಒಂದು ದೇಶದವರು; ಅವರ ನಡುವೆ ಯಾವುದೊಂದು
ಸಂಬಂಧವಿದ್ದಿಲ್ಲ; ಅವನು ತನ್ನ ಸ್ವಂತ ಕೆಲಸಕ್ಕಾಗಿ ಅಲ್ಲಿಗೆ ಹೋದವನು; ಹೀಗಿ
ದ್ದರೂ ಅವನು ತನಗೆ ಏನೂ ಸಂಬಂಧವಿಲ್ಲದ ಕೆಲಸಗಳಲ್ಲಿ ಕೈ ಹಾಕಿ ಕಷ್ಟಪಡ
ಲು ಕಾರಣವೇನೆಂ [illegible] ಕೆಲವರ ಮನಸ್ಸಿನಲ್ಲಿ ಬರಬಹುದು. ಈ ತರದ
ವಿಚಾರಗಳು ಸಂಕುಚಿ [illegible] ಅಗದ್ದವು. [illegible] ರಗಳಾಗಿವೆ. ಆದರೆ ಈ ಅಧ್ಯಾಯದ ಶಿ
ರೋ ಭಾಗದಲ್ಲಿ ಹೇಳಿ [illegible] ಸುಸಾರವಾಗಿ [illegible] ಭೂಮಂಡಲದೊಳಗಿನ ಜನರೆಲ್ಲರೂ ತಮ
ಗೆ ಆಪ್ತರೆಂದೆಣಿಸುವ [illegible] ಮತ [illegible] ಸನ ಪುರುಷರು ಅವರು ಇವರೆಂಬ ಭೇದ
ಭಾವವನ್ನು ತಮ್ಮ ಮನಸ್ಸಿನ [illegible] ದಾದರು ತರುವದುಂಟೇ? ಅವರು ಎಲ್ಲರೂ ತ
ಮ್ಮವರೇ ಎಂದೆಣಿಸುವರು. ಈ ರೀತಿಯಿಂದ ವಿಚಾರಮಾಡಿದರೆ, ಗ್ಲ್ಯಾಡಸ್ಟನ್ನ
ನು ಪರದೇಶದವರಾದ ನೇಪಲ್ಸದ ಜನರ ದುಃಖನಿವಾರಣಾರ್ಥವಾಗಿ ಪ್ರಯತ್ನಿಸಿ
ದ್ದು ಏನೂ ಆಶ್ಚರ್ಯವಲ್ಲೆಂದು ಪ್ರತಿ ಒಬ್ಬನು ಒಪ್ಪಬೇಕಾಗುವದು.

ಮೇಲೆ ಹೇಳಿದ ಮೇರೆಗೆ ನೇಪಲ್ಸದೊಳಗಿನ ಅನ್ಯಾಯಗಳನ್ನು ನಿಲ್ಲಿಸುವ
ಇಚ್ಛೆಯು ಗ್ಲ್ಯಾಡಸ್ಟನ್ನನಲ್ಲಂತೂ ಹುಟ್ಟಿತು. ಇದು ವಿಹಿತವಾದದ್ದೇ ಸರಿ. ಆ
ದರೆ ಅವನು ಮುಂದೇನು ಮಾಡಬೇಕು? ಅವನೊಬ್ಬ ದೊಡ್ಡ ಅರಸನಾಗಿದ್ದನೋ?

ಅವನ ಬಳಿಯಲ್ಲಿ ದಂಡು ಮಾರ್ಬಲ ಮುಂತಾದ ಸಂಗ್ರಾಮಸಾಧನಗಳೇನಾದರೂ ಇದ್ದುವೋ? ಇಲ್ಲ. ಇವುಗಳಲ್ಲದೆ ನೇಪಲ್ಸದ ಅರಸನಿಗೂ ಅವನಿಗೂ ವಿಶೇಷವೇನಾದರೂ ಸಂಬಂಧವಿತ್ತೋ? ಅದೂ ಇಲ್ಲ. ಹೀಗಿರುವಲ್ಲಿ, ತಾನು ಮಾಡಬೇಕೆಂದೆಣಿಸಿರುವ ಕಾರ್ಯವನ್ನು ಹೇಗೆ ನೆರವೇರಿಸಬೇಕೆಂಬ ವಿಚಾರವು ಅವನ ಮನಸ್ಸಿನಲ್ಲಿ ಬಂದಿರಬಹುದೆಂದು ವಾಚಕರು ಸಹಜವಾಗಿಯೇ ನೆನೆಸಬಹುದು. ಆದರೆ ಮಹಾ ಬುದ್ಧಿಶಾಲಿಯಾದ ಪುರುಷನಿಗೆ ಅಸಾಧ್ಯವಾದ ಕೆಲಸವು ಈ ಜಗತ್ತಿನಲ್ಲಿ ಯಾವುದೂ ಇಲ್ಲೆಂಬ ಹಿರಿಯರ ನುಡಿಯು ಸುಳ್ಳಲ್ಲ. ಅವನು ತತ್‌ಕ್ಷಣದಲ್ಲಿಯೇ ಒಂದು ಉಪಾಯವನ್ನು ಹುಡುಕಿ ತೆಗೆದನು. ಆದರಿಂದ ಅವನ ಉದ್ದೇಶವು ಸುಲಭವಾಗಿ ಈಡೇರಿತು. ಈ ಸಂಗತಿಯನ್ನು ಉದ್ದೇಶಿಸಿ ಒಬ್ಬ ಪ್ರಸಿದ್ಧ ಗ್ರಂಥಕಾರನು ‘ ದಂಡು-ಗುಂಡು-ಮದ್ದು-ಕೋವಿಗಳ ಸಹಾಯದಿಂದ ಒಬ್ಬ ಅರಸನು ಮಾಡಲಾರದ ಕೆಲಸವನ್ನು ಗ್ಲ್ಯಾಡ್‌ಸ್ಟನ್ನನು ತನ್ನ ಲೇಖಣಿಯ ಸಹಾಯದಿಂದ ಹೂ ಹೂ ಅನ್ನುವದರೊಳಗಾಗಿಯೇ ಮಾಡಿ ಬಿಟ್ಟನು ’ ಎಂದು ಬರೆದಿರುವನು. ಇದು ದಿಟವಿರುತ್ತದೆ. ಗ್ಲ್ಯಾಡ್‌ಸ್ಟನ್ನನು ಈ ಕಠಿಣವಾದ ಕೆಲಸವನ್ನು ಕಡೆಹಾಯಿಸಿದ್ದು ಹೇಗೆಂದರೆ:—

ಗ್ಲಾಡ್‌ಸ್ಟನ್ನನು ನೇಪಲ್ಸದೊಳಗಿನ ಕ್ರೂರಕೃತ್ಯಗಳ ವಿಷಯವಾಗಿ ಬರೆದ ಮೊದಲನೆಯ ಪತ್ರವು, ೧೮೫೧ ಎಪ್ರಿಲ ೭.

ಆ ಸಮಯದಲ್ಲಿ (Duke of Aberdeen) ಡ್ಯೂಕ್-ಆಫ್-ಅಬರ್ಡೀನ್ನನು ಮಹಾರಾಣಿ ಸಾಹೇಬ ಮುಖ್ಯ ಮಂತ್ರಿಯಾಗಿದ್ದನು. ಗ್ಲ್ಯಾಡ್‌ಸ್ಟನ್ನನು ನೇಪಲ್ಸದಲ್ಲಿ ನಡೆದಿದ್ದ ಕ್ರೂರಕೃತ್ಯಗಳನ್ನೂ ಅನ್ಯಾಯಗಳನ್ನೂ ಅಲ್ಲಿಯ ಜನರ ಗೋಳಾಟವನ್ನೂ ಎರಡು ಪತ್ರಗಳಲ್ಲಿ ಬರೆದು, ಅವುಗಳನ್ನು ಆ ಮುಖ್ಯ ಮಂತ್ರಿಯ ಕಡೆಗೆ ಕಳುಹಿಸಿದನು. ಅವು ಓದಲು ತಕ್ಕವುಗಳಾಗಿವೆ. ಅವನು ಆ ಪತ್ರಗಳಲ್ಲಿ ಬರೆದ ಸಂಗತಿಗಳ ಪುಷ್ಟೀಕರಣಾರ್ಥವಾಗಿ ಕೆಲವು ಭಯಂಕರವಾದ ಉದಾಹರಣಗಳನ್ನು ಕೊಟ್ಟಿರುವನು. ಅವುಗಳನ್ನು ಓದಿದರೆ, ಮೈಮುಳ್ಳಿಟ್ಟು, ರೋಮಾಂಚನಗಳು ಎದ್ದು ನಿಲ್ಲುವವು. ಆ ಎರಡು ಪತ್ರಗಳಲ್ಲಿ ಮೊದಲನೆಯದನ್ನು ಅವನು ಸನ್ ೧೮೫೧ನೇ ಇಸವಿಯ ಎಪ್ರಿಲ ೭ನೆಯ ತಾರೀಖಿನ ದಿವಸ ಬರೆದನು.

ಅವನು ಆ ಪತ್ರದ ಆದಿಯಲ್ಲಿ ಈ ವಿಷಯವನ್ನು ಕೈಕೊಳ್ಳಲು ತನಗೆ ಅಧಿಕಾರವಿರುತ್ತದೆಂದು ಸ್ಥಾಪಿಸಲಿಕ್ಕೆ ಸಾಧಾರಣವಾದ ಮೂರು ಸಿದ್ಧಾಂತಗಳನ್ನು ಹೇಳಿರುವನು. ಅವುಗಳ ತಾತ್ಪರ್ಯವೇನೆಂದರೆ:—೧. ನಿಜವಾಗಿ ತಪ್ಪುಮಾಡಿದ ಅಥವಾ ಸುಳ್ಳು ಆರೋಪಗಳಿಗೊಳಗಾದ ರಾಜಕೀಯ ಅಪರಾಧಿಗಳನ್ನು ನೇಪಲ್ಸದ ಸರಕಾರದವರು ನಡೆಯಿಸಿಕೊಳ್ಳುವ ಈಗಿನ ಪದ್ಧತಿಗಳು ಧರ್ಮಕ್ಕೂ ವಿದ್ಯಾಚಾರಸಂಪನ್ನತೆಗೂ ಮನುಷ್ಯತ್ವಕ್ಕೂ ತೀರ ವಿರುದ್ಧವಾಗಿರುತ್ತವೆ. ೨. ಈ ದೇಶದಲ್ಲಿ

ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯ ಅಂಕುರವು ಮೂಲತಃ ಇಲ್ಲದಿದ್ದರೂ ಈಕ್ರೂರ ನಡತೆಗಳು ಅದರ ಬೀಜಾರೋಪಣೆಗೂ ಅದರ ಅಭಿವೃದ್ಧಿಗೂ ಕಾರಣವಾಗಿವೆ. ೩. ಯುರೋಪ ಖಂಡದೊಳಗಿನ ಸಂಸ್ಥಾಪಿತ ರಾಜ್ಯಗಳಿಗೆಲ್ಲ ಬೆನ್ನುಬಲವಾಗಿರುವ ಕಾನ್ಸರ್ವೇಟೀವ್ ಪಕ್ಷಕ್ಕೆ ನಾನು ಸೇರಿದವನಾಗಿರುತ್ತೇನೆ. ಒಂದುವೇಳೆ ಅವುಗಳೊಳಗಿನ ಯಾವುದೊಂದು ರಾಜ್ಯಕ್ಕೆ ಕೇಡುಂಟಾದರೆ, ಅದು ನಮ್ಮ ಕಾನ್ಸರ್ವೇಟೀವ್ ಪಕ್ಷಕ್ಕೂ ಉಂಟಾಗುವದೆಂಬ ಮಾತು ಸ್ಪಷ್ಟವೇ. ಅದುಕಾರಣ ನೇಪಲ್ಸದೊಳಗಿನ ಈ ಅವ್ಯವಸ್ಥೆಯಿಂದ ಆಗುತ್ತಿರುವ ಹಾನಿಯಿಂದ ನಮ್ಮ ದೇಶಕ್ಕೂ, ಪರ್ಯಾಯದಿಂದ ನಮ್ಮ ದೇಶದಲ್ಲಿರುವ ಪ್ರಜೆಗಳಿಗೂ ಹಾನಿಯುಂಟಾಗುವದೆಂದು ಗ್ರಹಿಸಿ ಅದನ್ನು ನಿವಾರಿಸುವ ಪ್ರಯತ್ನಕ್ಕೆ ನಮ್ಮೊಳಗಿನ ಪ್ರತಿ ಒಬ್ಬನು ಹತ್ತುವದು ಅವನ ಕರ್ತವ್ಯವಾಗಿದೆ ಎಂದು ಹೇಳಿ, ಆಮೇಲೆ ಅಲ್ಲಿ ನಡೆದಿದ್ದ ಕ್ರೂರಕೃತ್ಯಗಳನ್ನು ವರ್ಣಿಸಿರುವನು. ಅವುಗಳೊಳಗಿನ ಒಂದೆರಡು ಕೃತ್ಯಗಳನ್ನು ಮಾತ್ರ ನಾವು ಇಲ್ಲಿ ಹೇಳುತ್ತೇವೆ.

ಪೊಯಿರಿಯೋನ ಶೋಚನೀಯ ವೃತ್ತಾಂತವು.

"(Carlo Poerio) ಕಾರ್ಲೋಪೊಯಿರಿಯೋ ಎಂಬ ಹೆಸರಿನ ಗೃಹಸ್ಥನು ನೇಪಲ್ಸದಲ್ಲಿದ್ದನು. ಅವನು ಸುಶಿಕ್ಷಿತನೂ ಸದ್ಗುಣಗಳಿಂದ ಪರಿಪೂರ್ಣನೂ ವಾಕ್ಕೋವಿದನೂ ನಿರ್ಮಲಾಚರಣೆಗಳುಳ್ಳವನೂ ಆಗಿದ್ದನು. ಆದರೆ ಅವನು ಸರಳ ಸ್ವಭಾವದವನಾಗಿದ್ದದರಿಂದ ಯಾರ ಭಿಡೆಯನ್ನು ಕಾಯದೆ, ನಿಜವಿದ್ದದ್ದನ್ನು ಯಾವಾಗಲು ಮಾತನಾಡುತ್ತಿದ್ದನು. ರಾಜ್ಯದಾಡಳಿತದಲ್ಲಿ ತನಗೆ ಅನ್ಯಾಯವಾಗಿ ತೋರಿದ್ದನ್ನು ಅವನು ಎತ್ತಿ ಆಡದೆ ಎಂದೂ ಬಿಡುತ್ತಿದ್ದಿಲ್ಲ. ಇದನ್ನು ರಾಜಪಕ್ಷದವರು ಕೇಳಿ, ಸೈರಿಸದೆ, ಅವನ ಮೇಲೆ ಸುಳ್ಳು ಸುಳ್ಳೇ ರಾಜದ್ರೋಹದ ತಪ್ಪು ಹೊರಿಸಿ, ಅವನನ್ನು ಹಿಡಿದು, ನ್ಯಾಯಾಧೀಶನ ಮುಂದೆ ನಿಲ್ಲಿಸಿ ಹಾಗೂಹೀಗೂ ವಿಚಾರಣೆ ನಡೆಯಿಸಿದಂತೆ ಮಾಡಿ, ಅವನಿಗೆ ಹತ್ತು ವರ್ಷಗಳ ಕಾರಾಗೃಹದ ಶಿಕ್ಷೆಯನ್ನು ಕೊಡಿಸಿ ಸೆರೆಮನೆಯಲ್ಲಿ ನಾನಾತರದ ಪೀಡೆಗಳನ್ನು ಕೊಡುತ್ತಿದ್ದರು. ಈ ಗೃಹಸ್ಥನ ಅಪರಾಧದ ವಿಷಯವಾಗಿ ನಾನು ಬಹು ಸೂಕ್ಷ್ಮ ರೀತಿಯಿಂದ ವಿಚಾರ ಮಾಡಿದರೂ ಅವನಕಡೆಗೆ ಒಂದು ಎಳ್ಳುಕಾಳಷ್ಟುಸುದ್ಧಾ ದೋಷವಿದ್ದಂತೆ ನನಗೆ ಕಂಡು ಬರಲಿಲ್ಲ ಇಂಥ ದೊಡ್ಡ ಮನುಷ್ಯನ ಮೇಲೆ ರಾಜದ್ರೋಹದ ತಪ್ಪು ಹೊರಿಸುವದು ಸತ್ಯಕ್ಕೂ ನ್ಯಾಯಕ್ಕೂ ಶಿಷ್ಟಾಚಾರಕ್ಕೂ ಕುಂದು ತರುವ ಸಂಗತಿಯಾಗಿದೆ. ಅವನ ಮೇಲೆ ದೋಷಾರೋಪವನ್ನು ಹೊರಿಸಿದರೆ ನಮ್ಮಲ್ಲಿಯ ದೇಶಸೇವಾತತ್ಪರರಾದ (Lord John Russell) ಲಾರ್ಡ್ ಜಾನ್ ರಸೆಲ್, (Lord Lansdowne) ಲಾರ್ಡ್ ಲ್ಯಾನ್ಸ್ ಡಾವುನ್, (Sir James Graham) ಸರ್ ಜೇಮ್ಸ್ ಗ್ರಹ್ಯಾ

ವು ಇವರ ಮೇಲೆ ಅಥವಾ ಸ್ವತಃ ತಮ್ಮ ಮೇಲೆ ರಾಜದ್ರೋಹದ ಆರೋಪನ್ನು ಹೊರಿಸಿದಂತೆಯೋ ಆಗುವದು. ತಮ್ಮೆಲ್ಲರ ಹೆಸರುಗಳು ಇಂಗ್ಲಂಡದ ಪ್ರಜೆಗಳಿಗೆ ಪ್ರಿಯವಾಗಿರುವಂತೆ ಪೊಯಿರಿಯೋನ ಹೆಸರು ನೇಪಲ್ಸದ ಜನರಿಗೆ ಪ್ರಿಯವಾಗಿತ್ತು. ಆತನು ಅಪರಾಧಿಗಳ ನೀಚ ತೊಡಪುಗಳನ್ನು ಧರಿಸಿಕೊಂಡು, ಸುತ್ತಲಿನ ಪಾತಕಿಗಳ ನಡುವೆ ನನ್ನೆದುರಿಗೆ ನಿಂತುಕೊಂಡು ನನ್ನೊಡನೆ ಕೆಲವು ಮಾತುಗಳನ್ನಾಡಿದಾಗ್ಗೆ, ಅವನು ನಿರಪರಾಧಿಯೆಂತಲೂ ತನ್ನ ದೇಶದ ಕಾಯದೆ-ಕಟ್ಟಳೆಗಳನ್ನು ಪಾಲಿಸುವದರಲ್ಲಿ ದಕ್ಷನೆಂತಲೂ ಸ್ವದೇಶಭಕ್ತನೆಂತಲೂ ನನ್ನ ಮನವರಿಕೆಯಾಯಿತು. ಇಂಥ ಸುಶಿಕ್ಷಿತನೂ ಸಜ್ಜನನೂ ಬುದ್ಧಿಶಾಲಿಯೂ ಆದ ಪುರುಷನ ಕೂಡ ಇನ್ನೊಮ್ಮೆ ಮಾತನಾಡುವದು ಅಸಾಧ್ಯವಾಯಿತೆಂದು ನೋಡಿ ನನಗೆ ಬಹು ದುಃಖವಾಗುತ್ತಿದೆ. ಯಾಕೆಂದರೆ ಆ ದೊಡ್ಡ ಮನುಷ್ಯನು ಸೆರೆಮನೆಯಲ್ಲಿಯ ಯಾತನೆಗಳನ್ನು ತಡೆಯಲಾರದೆ ಸತ್ತು ಹೋದನು! ಅವನಂಥ ಇನ್ನೂ ನಾಲ್ವತ್ತೊಂದು ಜನರನ್ನು ರಾಜಪಕ್ಷದವರು ಹಿಡಿದು, ಅವರ ಮೇಲೆ ಬೇರೆ ಬೇರೆ ಸುಳ್ಳು ಆರೋಪಗಳನ್ನು ಹೊರಿಸಿ, ಅವರು ಅಪರಾಧಿಗಳೆಂದು ನಿರ್ಣಯಿಸಿ, ಅವರನ್ನು ಸರೆಮನೆಯಲ್ಲಿ ಹಾಕಿ, ತಮ್ಮಿಂದಾದಷ್ಟು ಕ್ರೂರತನದಿಂದ ನಡಿಸಹತ್ತಿರುವರು. ಅವರ ಮೊರೆಯನ್ನು ಕೇಳುವವರು ಯಾರೂ ಇಲ್ಲ. ಈ ನಾಲ್ವತ್ತೊಂದು ಜನರಲ್ಲಿ (Settembrini) ಸೆಟೆಂಬ್ರೀನಿ ಎಂಬ ಗೃಹಸ್ಥನಿಗೆ ಗಲ್ಲಿನ ಶಿಕ್ಷೆಯನ್ನು ವಿಧಿಸಿರುವರು. ಆದರೆ ಅವನನ್ನು ಗಲ್ಲಿಗೇರಿಸದೆ, ಸೆರೆಮನೆಯಲ್ಲಿಯೇ ಇಟ್ಟು ಹೇಳಕೂಡದಷ್ಟು ಹಿಂಸೆಪಡಿಸುತ್ತಿರುವರು. ಅವನ ಉಗುರುಗಳ ಕಣ್ಣುಗಳಲ್ಲಿ ದಬ್ಬಣಗಳನ್ನು ಚುಚ್ಚಿಟ್ಟು, ದಿನಂಪ್ರತಿ ಹೆಚ್ಚು ಹೆಚ್ಚಾಗಿ ಒಳಗೆ ಸೇರಿಸುತ್ತಿರುವರೆಂದು ಕೇಳುತ್ತೇನೆ!’’

ನೇಪಲ್ಸದೊಳಗಿನ ಬಂದಿವಾನರ ಕಷ್ಟಗಳು.

“ಪ್ರತಿ ಒಬ್ಬ ಬಂದಿವಾನನ ಕಾಲುಗಳಲ್ಲಿ ಮೂವತ್ತೆರಡು ಪೌಂಡು ತೂಕದ ಬೇಡಿಗಳನ್ನು ಹಾಕಿರುವರು. ಒಬ್ಬನ ಬೇಡಿಯೊಳಗಿನ ಕಡೆಯ ಕಳಿಗಿಯನ್ನು ಮತ್ತೊಬ್ಬನ ನಡುವಿನಲ್ಲಿರುವ ತೊಗಲಿನ ಜಾರಿಗೆ ಜೋಡಿಸಿರುವರು. ಒಬ್ಬನಿಂದೊಬ್ಬನು ಎರಡು ಇಲ್ಲವೆ ಮೂರು ಮೊಳಗಳಿಗಿಂತ ಹೆಚ್ಚು ದೂರ ಹೋಗಲಿಕ್ಕೆ ಬರುವಂತಿಲ್ಲ. ಈ ಬೇಡಿಗಳು ರಾತ್ರಿಹಗಲು ಅವರ ಕಾಲುಗಳಲ್ಲಿರುವವು. ಇದರಿಂದ ಏಳುವಾಗ, ಕೂಡ್ರುವಾಗ, ನಡದಾಡುವಾಗ, ಬಹಿರ್ದೇಶಕ್ಕೆ ಹೋಗುವಾಗ ಮತ್ತು ತಿರುಗಿ ಬರುವಾಗ ಅವರಿಗೆ ಎಷ್ಟು ತೊಂದರೆಯಾಗುತ್ತಿರಬಹುದು, ಎಷ್ಟು ನಾಚಿಕೆ ಬರುತ್ತಿರಬಹುದು, ಎಂಬದನ್ನು ನೀವೇ ಸುಲಭವಾಗಿ ಊಹಿಸಬಹುದು. ಒಂದುವೇಳೆ ಅವರಿಗೆ ಮನುಷ್ಯತ್ವವು ಇಲ್ಲದಂತೆ ಮಾಡಿರುವರೆಂದು ಹೇಳಿದರೂ ಸಲ್ಲುವದು!’’

“ ಈ ರಾಜ್ಯದಲ್ಲಿ ಪ್ರೊಸೀಡಾ ಎಂಬ ಹೆಸರಿನದೊಂದು ತಾಲೂಕು ಇರುತ್ತದೆ. ಈ ತಾಲೂಕಿನ ಸೆರೆಮನೆಯಲ್ಲಿ ರಾಜಪಕ್ಷದವರು ಬಹುಜನ ಬಂದಿವಾನರನ್ನು ಇಟ್ಟಿದ್ದರು. ಈ ಬಂದಿವಾನರು ತಮಗಾಗುತ್ತಿದ್ದ ಕಷ್ಟಗಳನ್ನು ತಾಳಲಾರದೆ ಎಲ್ಲರೂ ಒಂದುಗೂಡಿ ದೊಡ್ಡ ಬಂಡನ್ನೆಬ್ಬಿಸಿ, ಆ ಸೆರೆಮನೆಯನ್ನು ಹಾಳು ಮಾಡಿದರು. ಈ ಸಮಯದಲ್ಲಿ ಸರಕಾರದವರು ಅವರ ಮೇಲೆ ಜ್ವಾಲಾಗ್ರಾಹಿ ಪದಾರ್ಥಗಳನ್ನು ತುಂಬಿದ ಗುಂಡುಗಳನ್ನು ಹಾರಿಸಿ ಒಂದು ನಿಮಿಷ ಮಾತ್ರದಲ್ಲಿ ಅವರನ್ನು ಕೊಂದುಹಾಕಿ ತಮ್ಮ ಸಿಟ್ಟನ್ನು ತೀರಿಸಿಕೊಂಡರು.”

“ಇಲ್ಲಿಯ ಸೆರೆಮನೆಯಲ್ಲಿ ಒಬ್ಬ ವೈದ್ಯನಿರುವನು. ಅವನು ಯಾವಾಗಲೂ ಅದರ ಮೂರನೆಯ ಅಂತಸ್ತಿನಲ್ಲಿ ವಾಸಿಸುವನು. ಬಂದಿವಾನರು ತಮಗೆ ಔಷಧ ಬೇಕಾದರೆ, ಆ ಎರಡು ಉಪ್ಪರಿಗೆಗಳನ್ನು ಹತ್ತಿ ಹೋಗಿ ವೈದ್ಯನನ್ನು ಕೇಳಿ, ಔಷಧವನ್ನು ಪಡೆಯಬೇಕು. ಇಷ್ಟು ತ್ರಾಣ ವಿಲ್ಲದವರು ಬಿದ್ದಲ್ಲಿಯೇ ಬಿದ್ದು ಪ್ರಾಣ ಬಿಡಬೇಕು. ವೈದ್ಯನು ಬೇನೆಬಿದ್ದವರಿದ್ದಲ್ಲಿಗೆ ಎಂದೂ ಹೋಗುವದಿಲ್ಲ. ಯಾಕಂದರೆ ಅವರು ಇರತಕ್ಕ ಸ್ಥಳವು ಪ್ರತ್ಯಕ್ಷ ನರಕಕುಂಡವೇ ಆಗಿರುವದು” ಈ ಮಾದರಿಯ ಎಷ್ಟೋ ಉದಾಹರಣೆಗಳನ್ನು ಗ್ಲ್ಯಾಡಸ್ಟನ್ನನು ತನ್ನ ಪತ್ರದಲ್ಲಿ ಬರೆದಿರುವನು. ಈ ಪತ್ರವನ್ನು ಓದಿ ಎಂಥಾ ಕಲ್ಲು ಮನಸ್ಸಿನವನಾದರೂ ನೇಪಲ್ಸದ ಬಂದಿವಾನರ ವಿಷಯವಾಗಿ ಮರ ಮರುಗದೆ ಇರಲಿಕ್ಕಿಲ್ಲ.

ಗ್ಲ್ಯಾಡಸ್ಟನ್ನನು ನೇಪಲ್ಸದೊಳಗಿನ ಅನ್ಯಾಯಗಳ ವಿಷಯವಾಗಿ ಬರೆದ ಎರಡನೆಯ ಪತ್ರವು, ೧೮೫೧ ಜುಲಾಯಿ ೧೪.

ಗ್ಲ್ಯಾಡಸ್ಟನ್ನನು ತನ್ನ ಎರಡನೆಯ ಪತ್ರವನ್ನು ಸನ್ ೧೮೫೧ನೆಯ ಇಸವಿಯ ಜುಲಾಯಿ ತಿಂಗಳಿನ ೧೪ನೆಯ ತಾರೀಖಿನ ದಿವಸ ಬರೆದಿರುವನು. ಅವನು ಅದರಲ್ಲಿಯೂ ಈ ರಾಜ್ಯದೊಳಗಿನ ಎಷ್ಟೋ ಅನ್ಯಾಯದ ಸಂಗತಿಗಳನ್ನು ವಿವರಿಸಿ, ಕಡೆಯಲ್ಲಿ ಇಲ್ಲಿಯ ‘ ರಾಜ ಪಕ್ಷದವರು ಚಿಕ್ಕಂದಿನಲ್ಲಿಯೇ ಹುಡುಗರ ಮನಸ್ಸನ್ನು ತಮ್ಮ ಕಡೆಗೆ ತಿರುಗಿಸಿಕೊಳ್ಳುವಪ್ರಯತ್ನಗಳನ್ನು ಎಡೆಬಿಡದೆ ಮಾಡುತ್ತಿರುವರು. ಅವರು ತಮ್ಮ ಅಭಿಪ್ರಾಯಕ್ಕನುಗುಣವಾದ ಪುಸ್ತಕಗಳನ್ನು ರಚಿಸಿ, ಅವುಗಳನ್ನು ಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ಕಲಿಸುವದು ಆ ಪ್ರಯತ್ನಗಳಲ್ಲಿ ಒಂದಾಗಿದೆ. ಈ ಪುಸ್ತಕಗಳಲ್ಲಿ ಅರಸನೇ ಪರಮೇಶ್ವರನು; ಅವನ ಆಜ್ಞೆಗಳನ್ನು ಪಾಲಿಸುವದೇ ಪ್ರಜೆಗಳ ಧರ್ಮವು; ಎಂದು ಪರ್ಯಾಯದಿಂದ ಸ್ಥಾಪಿಸಿರುವರು. ಇದರಿಂದ ಪ್ರಜಾಸತ್ತಾತ್ಮಕ ರಾಜ್ಯ-ಕಲ್ಪನೆಯ ಅಂಕುರಗಳು ಒಂದುವೇಳೆ ಜನರ ಮನಸ್ಸಿನಲ್ಲಿದ್ದರೆ ಅವುಗಳನ್ನು ಸಂಪೂರ್ಣವಾಗಿ ನಾಶಮಾಡಬೇಕೆಂಬದು ರಾಜಪಕ್ಷದವರ ಉದ್ದೇಶವಾಗಿದೆ, ಎಂದು ಕಾಣಿಸಿರುವನು; ಮತ್ತು ಈ ಮಾತಿನ

ಪುಷ್ಟೀಕರಣಾರ್ಥವಾಗಿ ಆ ಪುಸ್ತಕಗಳೊಳಗಿನ ಕೆಲವು ಉದಾಹರಣೆಗಳನ್ನು ಹೇಳಿರುವನು.

ಗ್ಲ್ಯಾಡಸ್ಟನ್ನನು ತನ್ನ ಇವೆರಡೂ ಪತ್ರಗಳನ್ನು ಹಿಂದೆ ಹೇಳಿದ ಮೇರೆಗೆ ಇಂಗ್ಲಂಡದ ಮುಖ್ಯ ಮಂತ್ರಿಯಾದ ಡ್ಯೂಕ್ ಆಫ್ ಅಬರ್ಡೀನನ ಕಡೆಗೆ ಕಳುಹಿಸಿದನು. ಆ ಶಿರಃ ಪ್ರಧಾನಿಯು ಅವುಗಳನ್ನು ಓದಿಕೊಂಡು ಕಳವಳಪಟ್ಟು, ಪರರಾಷ್ಟ್ರಗಳ ಸಂಬಂಧದ ಮಂತ್ರಿಯಾದ ಲಾರ್ಡಪಾಮರ್‌ಸ್ಟನ್ನನ ಕೈಯಲ್ಲಿ ಕೊಟ್ಟನು. ಅವನು ಅವುಗಳನ್ನು ಕೂಡಲೆ ಮುದ್ರಿಸಿ, ಅವುಗಳ ಸಾವಿರಾರು ಪ್ರತಿಗಳನ್ನು ಇಂಗ್ಲಂಡದ ತುಂಬ ಹಂಚಿಸಿದ್ದಲ್ಲದೆ, ಇಂಗ್ಲಿಷ ಸರಕಾರದ ಪಕ್ಷದಿಂಡ ಪರದೇಶಗಳ ದರಬಾರುಗಳಲ್ಲಿದ್ದ ವಕೀಲರ ಕಡೆಗೆ ಸಹ ಅವುಗಳನ್ನು ಕಳುಹಿಸಿ ನೇಪಲ್ಸದಲ್ಲಿ ನಡೆದಿದ್ದ ಅನ್ಯಾಯಗಳು ಎಲ್ಲ ಜನರಿಗೂ ತಿಳಿಯುವಂತೆ ಮಾಡಿದನು. ಇದರಿಂದ ಯುರೋಪ ಖಂಡದ ತುಂಬ ಪ್ರತಿ ಒಬ್ಬರ ಬಾಯಿಂದ ಇದೇ ವಿಷಯವು ಹೊರಡ ಹತ್ತಿತು. ವರ್ತಮಾನ ಪತ್ರಗಳಲ್ಲಿಯೂ ಮಾಸಿಕ ಪುಸ್ತಕಗಳಲ್ಲಿಯೂ ಈ ವಿಷಯದ ಮೇಲೆ ಚರ್ಚೆಗಳು ನಡೆಯಲಾರಂಭಿಸಿದವು. ಸಮಂಜಸ ಜನರು ನೇಪಲ್ಸದ ಅರಸನ ಮೇಲೆ ದೋಷ ಹೊರಿಸ ಹತ್ತಿದರು. ಗ್ಲ್ಯಾಡ್‌ಸ್ಟನ್ನನ ಈ ಪತ್ರಗಳ ವಿಷಯವಾಗಿ ಇಂಗ್ಲಂಡದ ಪಾರ್ಲಮೆಂಟಿನಲ್ಲಿ ವಾದಪವಾದಗಳು ನಡೆದಾಗ್ಗೆ ಲಾಡ್‌ಪಾಮರ್‌ಸ್ಟನ್ನನು ಹೇಳಿದ್ದೇನಂದರೆ:—"ಈ ಪತ್ರಗಳ ವಿಷಯವು ನೇಪಲ್ಸಕ್ಕೆ ಮಾತ್ರ ಸಂಬಂಧಿಸುತ್ತದೆ. ಇದರಲ್ಲಿ ಇಂಗ್ಲಂಡದ ಸರಕಾರದವರು ಕೈಹಾಕಲು ಆಸ್ಪದವಿಲ್ಲ. ಗ್ಲ್ಯಾಡ್‌ಸ್ಟನ್ ದೊರೆಗಳು ಬ್ರಿಟಿಷ್ ಪಾರ್ಲಮೆಂಟಿನ ಒಬ್ಬ ಸಭಾಸದರಂತೆ ಅಲ್ಲಿಗೆ ಹೋಗದಿದ್ದರೂ, ಅವರು ಅಲ್ಲಿ ಎಸಗಿರುವ ಕೃತ್ಯಗಳು ಜಗಮಾನ್ಯವಾದವುಗಳಾಗಿವೆ. ಯಾಕೆಂದರೆ, ಚಳಿಗಾಲವನ್ನು ಕಳೆಯುವ ಉದ್ದೇಶದಿಂದಲೂ ತಮ್ಮ ಸ್ವಂತ ಕೆಲಸಕ್ಕಾಗಿಯೂ ನೇಪಲ್ಸಕ್ಕೆ ಹೋದ ಆ ಇಂಗ್ಲಿಷ ಸದ್ಗೃಹಸ್ಥರು, ಆ ಪಟ್ಟಣದಲ್ಲಿ ತುಂಬಿರುವ ತರತರದ ವಿನೋದಗಳ ಕಡೆಗೆ ಹಣಿಕಿ ಸಹ ನೋಡದೆ, ಅಲ್ಲಿರುವ ಜ್ವಾಲಾಗ್ರಾಹಿ ಪರ್ವತಗಳ ಅತ್ಯಾಶ್ಚರ್ಯಕರವಾದ ಸಂಗತಿಗಳನ್ನು ನೋಡುವದರಲ್ಲಿ ಹೊತ್ತುಗಳೆಯದೆ, ಭೂಗರ್ಭಸ್ಥಿತ ಅಂದವಾದ ನಗರಗಳನ್ನು ಪರಿಶೋಧಿಸುವದರಲ್ಲಿ ಮಗ್ನರಾಗದೆ, ಅಲ್ಲಿಯ ನ್ಯಾಯಸ್ಥಾನಗಳನ್ನು ಲಕ್ಷಗೊಟ್ಟು ನೋಡುವದರಲ್ಲಿಯೂ ಸೆರೆಮನೆಗಳಿಗೆ ಹೋಗಿ, ಅಲ್ಲಿರುವ ಬಂದಿವಾನರಿಗೆ ದರ್ಶನಕೊಟ್ಟು ಅವರ ಸ್ಥಿತಿಗಳನ್ನು ತಿಳಿದುಕೊಳ್ಳುವದರಲ್ಲಿಯೂ, ಅಲ್ಲಿರುವ ಕತ್ತಲೆಕೊಂಡಗಳಲ್ಲಿಯೂ ಸೆರೆಮನೆಗಳಲ್ಲಿಯೂ ಇಳಿದು, ಅವುಗಳ ಇರವನ್ನು ಪ್ರತ್ಯಕ್ಷವಾಗಿ ನೋಡು

ಗ್ಲ್ಯಾಡಸ್ಟನ್ನನ ಪತ್ರಗಳಿಗೆ ಇಂಗ್ಲಂಡದ ದರಬಾರಿನಲ್ಲಿ ಜನ್ನಾಶ್ರಯವು ದೊರೆದದ್ದು.

ಪದರಲ್ಲಿಯೂ ಕಾಯದೆಗಳ ವಿರುದ್ಧವಾಗಿಯೂ ಅನ್ಯಾಯವಾಗಿಯೂ ಹಿಡಿದು ಹಾಕಲ್ಪಟ್ಟ ದುರ್ದೈವಿಗಳ ಗೋಳಾಟಗಳನ್ನು ಕೇಳಿಕೊಳ್ಳುವದರಲ್ಲಿಯೂ ತಮ್ಮ ಹೊತ್ತನ್ನೆಲ್ಲ ಕಳೆದು, ಈಗ ಆ ಕ್ರೂರತನಗಳನ್ನೂ ಆ ಅನ್ಯಾಯಗಳನ್ನೂ ಬೈಲಿಗೆ ಹಾಕಿ ಲೋಕಮತವನ್ನು ಜಾಗ್ರತ ಪಡಿಸಿ, ಅದರ ಸಹಾಯದಿಂದ ಅವುಗಳನ್ನು ನಿವಾರಿಸಲು ಬದ್ಧಕಂಕಣರಾಗಿರುವರು. ಇವೆಲ್ಲ ಕೃತ್ಯಗಳು ನಮ್ಮೆಲ್ಲರ ಸ್ತುತಿಗೆ ಪಾತ್ರವಾದವುಗಳಾಗಿರುತ್ತವೆಂದು ನೀವು ಒಪ್ಪಿಕೊಳ್ಳದಿರಲಾರಿರಿ. ಮಹಾ ಧೈರ್ಯಶಾಲಿಗಳೂ ಕರುಣಾಸಾಗರರೂ ಆದ ಆ ನನ್ನ ಇಷ್ಟ ಮಿತ್ರರ ಸ್ತುತ್ಯ ಉದ್ದೇಶವು ಈಡೇರಬೇಕೆಂಬ ಹೇತುವಿನಿಂದ ನಾನು ಅವರ ಪತ್ರಗಳನ್ನು ಮುದ್ರಿಸಿ, ಅವುಗಳ ಪ್ರತಿಗಳನ್ನು ಯುರೋಪ ಖಂಡದೊಳಗಿನ ರಾಷ್ಟ್ರಗಳಿಗೆಲ್ಲ ಕಳುಹಿಸಿ ಕೊಟ್ಟಿದ್ದೇನೆ. ಇದರಿಂದ ನನ್ನ ಪ್ರಿಯ ಮಿತ್ರರ ಇಚ್ಛೆಯು ಈಡೇರಿದರೆ, ಅವರ ಉಜ್ವಲ ಕೀರ್ತಿಯೂ ಇಂಗ್ಲಂಡದ ಘನತೆಯೂ ಮತ್ತಿಷ್ಟು ಬೆಳೆಯುವವೆಂದು ನಾನು ಎಣಿಸುತ್ತೇನೆ.” ಈ ಭಾಷಣವನ್ನು ಕೇಳಿ ಸಭೆಯೊಳಗಿನ ಜನರು ಪರಮ ಸಂತೋಷಬಟ್ಟು ತಮ್ಮ ಆನಂದದ ಉದ್ಗಾರಗಳನ್ನು ಹೊರಗೆಡವಿದರು.

ಗ್ಲ್ಯಾಡ್‌ಸ್ಟನ್ನನ ಪತ್ರಗಳು ತಿರುತಿರುಗಿ ಮುದ್ರಿಸಲ್ಪಟ್ಟು ಅವುಗಳ ಪ್ರತಿಗಳು ಯುರೋಪ ಖಂಡದಲ್ಲಿ ಹಂಚಲ್ಪಟ್ಟದ್ದು, ಮತ್ತು ಅವುಗಳಿಂದಾದ ಪರಿಣಾಮವು.

ನೇಪಲ್ಸದ ಈ ಪ್ರಕರಣವು ಬೇಗನೆ ಮುಗಿಯದೆ ಕೆಲವು ವರ್ಷಗಳವರೆಗೆ ಸಾಗಿತು. ಗ್ಲ್ಯಾಡ್‌ಸ್ಟನ್ನನು ತಾಳ್ಮೆಯಿಂದಲೂ ದೃಢನಿಶ್ಚಯದಿಂದಲೂ ಕೈಕೊಳಕೊಂಡು ಅದರ ಬೆನ್ನು ಹತ್ತಿದನು. ಅವನು ತನ್ನ ಪತ್ರಗಳನ್ನು ತಿರುತಿರುಗಿ ಮುದ್ರಿಸಿ, ಅವುಗಳ ಪ್ರತಿಗಳನ್ನು ಯುರೋಪ ಖಂಡದ ತುಂಬ ಕಳುಹಿಸುವ ಉದ್ಯೋಗವನ್ನು ತೆರಪಿಲ್ಲದೆ ನಡೆಯಿಸಿದನು. ಅವನು ಆ ಪತ್ರಗಳ ೧೧ನೆಯ ಆವೃತ್ತಿಗೆ ಒಂದು ಪರಿಶಿಷ್ಟವನ್ನು ಜೋಡಿಸಿ, ಅದರಲ್ಲಿ ಒಂದು ಹೊಸ ಉದಾಹರಣೆಯನ್ನು ಕೊಟ್ಟನು ಅದರ ತಾತ್ಪರ್ಯವೇನಂದರೆ:—“ಸನ್ ೧೮೫೮ ನೆಯ ಇಸವಿಯ ಡಿಸೆಂಬರ ತಿಂಗಳಿನ ೨೭ನೆಯ ತಾರೀಖಿನ ದಿವಸ ನೇಪಲ್ಸದ ಅರಸನು ೯೧ ಜನ ರಾಜಕೀಯ ಕೈದಿಗಳನ್ನು ಆ ಜನ್ಮ ಸಿಸಿಲೀ ನಡುಗಡ್ಡೆಯಿಂದ ಗಡಿದಾಟಿಸಬೇಕೆಂಬ ಅಪ್ಪಣೆಯನ್ನು ಕೊಟ್ಟನು. ಆ ಮೇಲೆ ಅವನ ದರಬಾರಿನೊಳಗಿನ ಅಧಿಕಾರಸ್ಥರು ಅವರೆಲ್ಲರನ್ನು ಅಮೇರಿಕೆಗೆ ಒಯ್ಯಬೇಕೆಂಬ ಅಭಿಪ್ರಾಯದ ಅಪ್ಪಣೆಯನ್ನು ಸನ್ ೧೮೫೯ ನೆಯ ಜಾನುವಾರಿ ೯ನೆಯ ತಾರೀಖಿನ ದಿವಸ ಮಾಡಿದರು. ಆದರೆ ಈ ಎರಡು ಅಪ್ಪಣೆಗಳು ಹೊರಬೀಳುವ ಮೊದಲೇ ಆ ೯೧ ಜನ ಕೈದಿಗಳೊಳಗಿನ ೧೪ ಜನರು ಸೆರೆಮನೆಯಲ್ಲಿಯೇ ಸತ್ತು ಹೋಗಿದ್ದರು; ಅವರಲ್ಲಿ ಒಬ್ಬನು ೧೮೫೧ರಲ್ಲಿ

ಇಬ್ಬರು ೧೮೫೪ರಲ್ಲಿ, ಒಬ್ಬನು ೧೮೫೫ರಲ್ಲಿ, ಉಳಿದ ಹತ್ತು ಜನರು ಬೇರೆ ಬೇರೆ ವರ್ಷಗಳಲ್ಲಿ ಜೀವ ಬಿಟ್ಟಿದ್ದರು. ಈ ಸುದ್ದಿಗಳು ಅರಸನಿಗೂ ಅವನ ಮುಖ್ಯ ಅಧಿಕಾರಸ್ಥರಿಗೂ ತಿಳಿಯದೇ ಇದ್ದದ್ದು ಪರಮ ಆಶ್ಚರ್ಯಕರವಾದ ಸಂಗತಿಯಾಗಿದೆ. ಜೀವದಿಂದಿದ್ದ ೬೬ ಜನ ಕೈದಿಗಳನ್ನಾದರೂ ಅಮೇರಿಕೆಗೆ ಕಳುಹಿಸಿಕೊಡಬೇಕಾಗಿತ್ತು. ಆದರೆ ಹಾಗೆ ಮಾಡದೆ, ೬೬. ಜನರನ್ನು ನಾಕ್ಸ ಸನ್ ೧೮೫೯ನೆಯ ಇಸವಿಯ ಜಾನುವರಿ ೧೬ನೆಯ ತಾರೀಖಿನ ದಿವಸ ಹಡಗದ ಮೇಲೆ ಕುಳ್ಳಿರಿಸಿದರು. ಅವರನ್ನು ನೆಟ್ಟಗೆ ಅಮೇರಿಕೆಗೆ ಒಯ್ಯದೆ, ನಡುವೆ ತಮ್ಮ ಹಡಗವನ್ನು ಕಾರ್ಕ ಬಂದರದಲ್ಲಿ ನಿಲ್ಲಿಸಿ, ಅವರೊಳಗಿನ ೧೧ ಜನ ಕೈದಿಗಳನ್ನು ಅಲ್ಲಿಯೇ ಇಳಿಸಿ, ಉಳಿದ ೫೫ ಜನರನ್ನು ಮಾತ್ರ ಅಮೇರಿಕೆಗೆ ಮುಟ್ಟಿಸಿದರು ಹಿಂದೆ ನೇಪಲ್ಸದಲಿ ೧೧ ಜನರನ್ನೂ ಮತ್ತೆ ಕಾರ್ಕದಲ್ಲಿ ೧೧ಜನರನ್ನೂ ಬಿಟ್ಟ ಕಾರಣವೇನಂದರೆ:—ನೇಪಲ್ಸದೊಳಗಿನವರು ಬೇನೆಯಿಂದ ತೀರ ನೆಲ ಹಿಡಿದಿದ್ದರು. ಅವರನ್ನು ಸ್ಥಳಾಂತರ ಮಾಡಲಿಕ್ಕೆ ಬರುವಂತಿದ್ದಿಲ್ಲ. ಕಾರ್ಕದಲ್ಲಿ ಇಳಿಸಿದ ೧೧ ಜನರು ಸಹ ತೀರ ಸಾಯಲಿಕ್ಕಾಗಿದ್ದರು ಈ ಕಾರಣಗಳಿಂದ ಅವರನ್ನು ಅಲ್ಲಿಯೇ ಬಿಟ್ಟರು.” ನೇಪಲ್ಸದ ಅರಸನು ತನ್ನ ರಾಜ್ಯದಲ್ಲಿ, ತನಗೇ ತಿಳಿಯದಂತೆ ನಡೆದಿರುವ ಕ್ರೂರ ಕೃತ್ಯಗಳನ್ನೆಲ್ಲ ನೋಡಿ, ಬಹು ಖಿನ್ನನಾಗಿ, ಅವುಗಳನ್ನು ತನ್ನಿಂದಾದಷ್ಟು ಕಡಿಮೆ ಮಾಡಿದನು. ತಪ್ಪಿಲ್ಲದೆ ಸೆರೆಮನೆಯಲ್ಲಿರಿಸಿದವರನ್ನು ಬಂಧಮುಕ್ತರನ್ನಾಗಿ ಮಾಡಿದನು. ಅಪರಾಧಿಗಳಿಗೆ ತಕ್ಕ ಶಿಕ್ಷೆಗಳನ್ನು ವಿಧಿಸಿದನು. ಈ ರೀತಿಯಾಗಿ ನೇಪಲ್ಸದೊಳಗಿನ ಅನ್ಯಾಯಗಳನ್ನು ಗ್ಲ್ಯಾಡ್‌ಸ್ಟನ್ನನ ಎರಡು ಪತ್ರಗಳು ಸಾಕಷ್ಟು ಕಡಿಮೆ ಮಾಡಿದವು.

ನೇಪಲ್ಸದ ಪ್ರಕರಣದಿಂದ ಗ್ಲ್ಯಾಡ್‌ಸ್ಟನ್ನನಿಗುಂಟಾದ ಎಡರುಗಳು.

ಗ್ಲ್ಯಾಡ್‌ಸ್ಟನ್ನನ ಪತ್ರಗಳಿಂದ ಬಹು ಪ್ರಯೋಜನವಾಯಿತು ಸರಿ. ಆದರೆ ಗ್ಲ್ಯಾಡ್‌ಸ್ಟನ್ನನು ಮಾತ್ರ ತೊಂದರೆಗಳಿಗೀಡಾದನು. ಅವನಿಗೆ ಆಗದವರು, ಅವನ ಮೇಲೆ ಇಲ್ಲದ್ದೊಂದು ಆರೋಪವನ್ನು ಹೊರಿಸಿದರು. ಗ್ಲ್ಯಾಡ್‌ಸ್ಟನ್ನನು ನೇಪಲ್ಸದೊಳಗಿನ ಬಂಡುಗಾರರ ಮತ್ತು ದುಷ್ಟ ಜನರ ಬೆನ್ನು ಕಟ್ಟಿರುವನೆಂದು ಅವರು ಹೇಳಲಾರಂಭಿಸಿದರು ಇಂಗ್ಲಂಡದಲ್ಲಿ ಕೆಲವು ವರ್ಷಗಳ ಹಿಂದೆ ಅಂದರೆ ಮಹಾರಾಣಿ ಸಾಹೇಬರು ಸಿಂಹಾಸನಾರೂಢರಾದ ಕೆಲವು ದಿವಸಗಳಲ್ಲಿಯೇ “ಚಾರ್ಟಿಸ್ಟರು” ಎಂಬ ಹೆಸರಿನ ಜನರು ಪ್ರಬಲಿಗೆ ಬಂದಿದ್ದರು. ಅವರು, ದುಃಖ ಪೀಡಿತರ ದುಃಖಗಳನ್ನು ನಿವಾರಿಸುವದು ತಮ್ಮ ಕರ್ತವ್ಯವಾಗಿದೆಂದು ಹೇಳುತ್ತಿದ್ದರು. ಆವರ ವಿಷಯವಾಗಿ ಜನರು ಸದಭಿಪ್ರಾಯವುಳ್ಳವರಾಗಿದ್ದಿಲ್ಲ. ಯಾಕೆಂದರೆ ಅವರಲ್ಲಿ ಎಲ್ಲ ತರದ ಜನರು ಸೇರಿದ್ದರು. ಆ ಜನರ ಅವ

ಶೇಷವು ಇಂಗ್ಲಂಡದಲ್ಲಿ ಈಗೂ ಇರುತ್ತದೆಂದು ಕೆಲವರು ಹೇಳುತ್ತಾರೆ. ಅವರಲ್ಲಿ ಗ್ಲ್ಯಾಡ್‌ಸ್ಟನ್ನನು ಸೇರಿಕೊಂಡಿರುವನೆಂದು ಹೇಳಲು ಸುದ್ಧಾ ಜನರು ಹಿಂದಾಗಲಿಲ್ಲ. ಇದಲ್ಲದೆ ಗ್ಲ್ಯಾಡ್‌ಸ್ಟನ್ನನ ಪ್ರಯತ್ನಗಳು ನೇಪಲ್ಸದ ಪ್ರಜೆಗಳನ್ನು ಬಲಾತ್ಕಾರಗಳಿಂದ ಬಿಡುಗಡೆ ಮಾಡಿದ ಸುದ್ದಿಯನ್ನು ಕೇಳಿ, ನೇಪಲ್ಸದ ಜನರಂತೆ ಅನ್ಯಾಯಕ್ಕೂ ಕಟುಕತನಕ್ಕೂ ಒಳಗಾಗಿದ್ದ ಪೋಲಂಡ, ಹಂಗರಿ, ಇಟಲಿ, ಸಾಕ್ಸನಿ, ಫ್ರಾನ್ಸ ಮುಂತಾದ ದೇಶಗಳ ಜನರು ಗುಂಪು ಗುಂಪಾಗಿ ಇಂಗ್ಲಂಡಕ್ಕೆ ಬಂದು, ತಮ್ಮ ಮೇಲಾಗುತ್ತಿದ್ದ ಬಲಾತ್ಕಾರಗಳನ್ನು ನಿಲ್ಲಿಸಬೇಕೆಂದು ಗ್ಲ್ಯಾಡ್‌ಸ್ಟನ್ನನಿಗೆ ಬೇಡಿಕೊಳ್ಳ ಹತ್ತಿದರು. ಇದರಿಂದ ಅವನಿಗೆ ಬಲು ತೊಂದರೆಯುಂಟಾಯಿತು. ಆದರೂ ಅವನು ಧೈರ್ಯ ಬಿಡದೆ ಅವರಿಗೆ ನಾಲ್ಕು ಬುದ್ಧಿಯ ಮಾತುಗಳನ್ನು ಹೇಳಿ, ಅವರೊಳಗಿನ ಬಡವರಿಗೆ ಅಲ್ಪಸ್ವಲ್ಪ ಹಣವನ್ನು ಕೊಟ್ಟು, ಅವರನ್ನು ಹಾದಿಗೆ ಹಚ್ಚಿದನು.

ನೇಪಲ್ಸದ ಪ್ರಕರಣದಿಂದ ಗ್ಲ್ಯಾಡ್‌ಸ್ಟನ್ನನಿಗುಂಟಾದ ಗೌರವವು.

ಮುಂದೆ ಬರಬರುತ್ತ ನೇಪಲ್ಸದಲ್ಲಿ ತಿದ್ದುಪಾಟು ಉಂಟಾಗಲಿಕ್ಕೂ ಅಲ್ಲಿಯ ಜನರ ಸುಖಶಾಂತಿಗಳು ಬೆಳೆಯಲಿಕ್ಕೂ ಕೆಲವು ವರ್ಷಗಳಲ್ಲಿಯೇ ಆ ರಾಜ್ಯವು ಇಟಲಿಯ ರಾಜ್ಯದಲ್ಲಿ ಸೇರ್ಪಡೆಯಾಗಲಿಕ್ಕೂ ಗ್ಲ್ಯಾಡ್‌ಸ್ಟನ್ನನ ಪ್ರಯತ್ನಗಳೇ ವಿಶೇಷ ಕಾರಣವಾದವೆಂದು ಬಹು ಜನ ಗ್ರಂಥಕರ್ತರ ಅಭಿಪ್ರಾಯವುಂಟು. ಇಟಲಿಯ ದೇಶದಲ್ಲಿ (Garibaldi) ಗ್ಯಾರಿಬಾಲ್ಡಿ ಎಂಬ ಹೆಸರಿನ ಮಹಾ ಶೂರನೂ ಸ್ವದೇಶಾಭಿಮಾನಿಯೂ ಆದ ಪ್ರಸಿದ್ಧ ಪುರುಷನು ಇತ್ತೀಚಿಗೆ ಆಗಿ ಹೋದನು. ಅವನು ನೇಪಲ್ಸದ ಅರಸನನ್ನು ಗೆದ್ದು, ಅವನ ರಾಜ್ಯವನ್ನು ಇಟಲಿಯ ರಾಜ್ಯಕ್ಕೆ ಕೂಡಿಸಿದನು. ಅವನು, ಗ್ಲ್ಯಾಡ್‌ಸ್ಟನ್ನನ ಪ್ರಯತ್ನಗಳನ್ನು ಉದ್ದೇಶಿಸಿ "ಗ್ಲ್ಯಾಡ್‌ಸ್ಟನ್ನನ ಆ ದುಃಖನಿವಾರಕ ಪತ್ರಗಳೇ ಇಟಲಿಯ ಸ್ವಾತಂತ್ರ್ಯದ ಶುಭಸೂಚಕ ದುಂದುಭಿಗಳಾಗಿವೆ" ಎಂದು ಬಣ್ಣಿಸಿರುವನು. ಇದರಿಂದ ಗ್ಲ್ಯಾಡ್‌ಸ್ಟನ್ನನ ಕೀರ್ತಿಯು ಮತ್ತಿಷ್ಟು ಬೆಳೆಯಲನುವಾಯಿತು. ಲಾರ್ಡ ಪಾಮರ್‌ಸ್ಟನ್ನನು 'ನೇಪಲ್ಸದ ಪ್ರಕರಣದಿಂದ, ಗ್ಲ್ಯಾಡ್‌ಸ್ಟನ್ ದೊರೆಗಳು ತಮ್ಮ ದೇಶಬಾಂಧವರಿಂದಲೂ, ಜಗತ್ತಿನೊಳಗಿನ ಎಲ್ಲ ನ್ಯಾಯಪಕ್ಷಪಾತಿಗಳಿಂದಲೂ ಎಲ್ಲ ಸ್ವತಂತ್ರ ಪ್ರಿಯರಾದ ಪುರುಷರಿಂದಲೂ ವರ್ತಮಾನ ಕಾಲದಲ್ಲಿಯೂ ಭವಿಷ್ಯತ್ಕಾಲದಲ್ಲಿಯೂ ನಿಶ್ಚಯವಾಗಿ ಮನ್ನಣೆಯನ್ನು ಹೊಂದುವರು ಮತ್ತು ಅವರ ಆಯುಷ್ಯ ಕ್ರಮದೊಳಗಿನ ಅತ್ಯುತ್ತಮ ಕಾರ್ಯಗಳಲ್ಲಿ ಈ ಪ್ರಕರಣವು ಒಂದೆಂದು ಎಣಿಸಲ್ಪಡುವದು" ಎಂದು ಪಾರ್ಲಮೆಂಟಿನಲ್ಲಿ ಹೇಳಿದನು. ಈ ಅಭಿಪ್ರಾಯವು ಯಥಾರ್ಥವಾದದ್ದೇ.

---

## ಬಲ್ಗೇರಿಯಾ.

—÷(೦)÷—

ಕದರ್ಥಿತಸ್ಯಾಪಿಚ ಧೈರ್ಯ ವೃತ್ತೇರ್ನಶಕ್ಯತೇಧೈರ್ಯಗುಣಃ ಪ್ರಮಾಷ್ಟುರ್ಮ್।
ಅಧಃಕೃತಸ್ಯಾಪಿ ತನೂನಪಾತೋ ನಾಧಃಶಿಖಾಯಾತಿ ಕದಾಚಿದೇವ॥
(ನೀತಿ ಶತಕ)

ಗಂಭೀರವಾದ ಮನಸ್ಸುಳ್ಳವರು ತಮ್ಮನ್ನೆಲ್ಲರು ಅವಮಾನ ಒಡಿಸಿದರೂ ಎಂದೂ ಧೈರ್ಯಗುಂದುವದಿಲ್ಲ. ನೋಡಿರಿ, ಉರಿಯನ್ನು ಬುಡಮೇಲಾಗಿ ಹಿಡಿದರೂ ಅದು ತನ್ನ ತಲೆಯನ್ನು ಮೇಲಕ್ಕೆತ್ತೇತೀರುತ್ತದೆ.

---

ಬಲ್ಗೇರಿಯಾ ಪ್ರಾಂತದ ಸ್ಥಿತಿಯು; ಮತ್ತು ಅಲ್ಲಿಯ ಅನಾಯಕತ್ವನವು, ೧೮೭೫.

ಯುರೋಪ ಖಂಡದೊಳಗೆ ತುರ್ಕಸ್ಥಾನವೆಂಬದೊಂದು ಮುಸಲ್ಮಾನರ ರಾಜ್ಯವಿರುತ್ತದೆ. ಅಲ್ಲಿಯ ಅರಸನಿಗೆ ಸುಲ್ತಾನನೆಂದೆನ್ನುವರು. ಆ ರಾಜ್ಯದಲ್ಲಿ ಬಲ್ಗೇರಿಯಾ ಎಂಬ ಹೆಸರಿನದೊಂದು ಪ್ರಾಂತವಿರುತ್ತದೆ. ಅದು ೨೪, ೩೬೦ ಚದರ ಮೈಲು ಕ್ಷೇತ್ರವುಳ್ಳದ್ದು. ಸನ್ ೧೮೭೫ನೆಯ ವರ್ಷದಲ್ಲಿ ಸುಮಾರು ೩೧, ೫೪, ೩೭೫ ಜನರು ಅಲ್ಲಿ ವಾಸಿಸುತ್ತಿದ್ದರು. ಅವರು ಸುಶಿಕ್ಷಿತರಾಗಿದ್ದಿಲ್ಲ; ಆದರೆ ಸಶಕ್ತರಾಗಿದ್ದರು. ಅವರಲ್ಲಿ ಕ್ರಿಸ್ತೀ ಜನರ ಸಂಖ್ಯೆಯು ವಿಶೇಷವಾಗಿತ್ತು. ತುರ್ಕಸ್ಥಾನದ ಸರಕಾರದವರು ಆ ಪ್ರಾಂತದ ಮೇಲೆ ಪಾಛ್ಯಾ ಎಂಬ ಹೆಸರಿನ ಒಬ್ಬ ಅಧಿಕಾರಸ್ಥನನ್ನು ನಿಯಮಿಸಿ, ಅವನ ಮುಖಾಂತರವಾಗಿ ಅಲ್ಲಿಯ ಆಡಳಿತವನ್ನು ಅತಿ ಕ್ರೂರತನದಿಂದ ಸಾಗಿಸುತ್ತಿದ್ದರು ಇದರಿಂದ ಅಲ್ಲಿ ಮೇಲಿಂದ ಮೇಲೆ ಬಂಡುಗಳೇಳುತ್ತಿದ್ದವು. ಆವುಗಳನ್ನು ಸರಕಾರದವರು ಬಹು ನಿರ್ದಯದ ಉಪಾಯಗಳನ್ನು ಯೋಜಿಸಿ, ಮುರಿಯುತ್ತಿದ್ದರು. ಪ್ರಜೆಗಳ ವಸ್ತು-ಒಡವೆಗಳು ಮೂರಾಬಟ್ಟೆಯಾಗುತ್ತಿದ್ದದ್ದಲ್ಲದೆ, ಬಹು ಜನರು ತಮ್ಮ ಜೀವಗಳನ್ನು ಸಹ ಕಳಕೊಳ್ಳುತ್ತಿದ್ದರು. ಇದರಿಂದ ಸರಕಾರದವರಿಗೂ ಪ್ರಜೆಗಳಿಗೂ ತೀರ ಒಡಕು ಹುಟ್ಟಿತ್ತು. ಈ ಸ್ಥಿತಿಯು ಬಹು ವರ್ಷಗಳಿಂದ ಇದ್ದೇಯಿತ್ತು. ಇತ್ತಿತ್ತಲಾಗಿ ಅಲ್ಲಿ ಎಣಿಕೆದಪ್ಪಿ ಅನ್ಯಾಯಗಳೂ ಕಟುಕತನಗಳೂ ನಡೆಯ ಹತ್ತಿದ್ದವು. ಇದನ್ನು ಆಸ್ಟ್ರಿಯಾ ದೇಶದ ಮಂತ್ರಿಯಾದ (Count Andrassy) ಕೌಂಟ್ ಆಂಡ್ರಾಸೀ ಎಂಬುವವನು ನೋಡಿ, ಸನ್ ೧೮೭೫ ನೆಯ ಇಸವಿಯ ಡಿಶಂಬರ ೩೦ ನೆಯ ತಾರೀಖಿನ ದಿವಸ, ಈ ಅನ್ಯಾಯಗಳನ್ನು ನಿಲ್ಲಿಸುವ ಉದ್ದೇಶದಿಂದ ಒಂದು ಸೂಚನಾ ಪತ್ರವನ್ನು ಬರೆದು, ಅದರ ಮೇಲೆ ಆಸ್ಟ್ರಿಯಾ, ಜರ್ಮನಿ, ಮತ್ತು ರಶಿಯಾ ಈ ಮೂರು ಸರಕಾರದವರ

ಸಹಿಗಳನ್ನು ಮಾಡಿಸಿ, ಅದನ್ನು ಸುಲ್ತಾನನ ಕಡೆಗೆ ಕಳುಹಿಸಿದನು. ಈ ಸೂಚ ನಾಪತ್ರದ ತಾತ್ಪರ್ಯವೇನೆಂದರೆ:—ನೀವು ನಿಮ್ಮ ರಾಜ್ಯದೊಳಗಿನ ಅನಾಯಕತನವನ್ನು ನಿಲ್ಲಿಸುತ್ತೇವೆಂತಲೂ ರಾಜ್ಯವನ್ನು ನ್ಯಾಯವಾಗಿ ಆಳುತ್ತೇವೆಂತಲೂ ಮೇಲಿಂದ ಮೇಲೆ ಕೊಡುತ್ತ ಬಂದಿರುವ ಅಭಿವಚನಗಳನ್ನು ಈವರೆಗೆ ಪೂರ್ಣ ಮಾಡಿರುವದಿಲ್ಲ. ಈಗ ನೀವು ಅವುಗಳನ್ನು ಪೂರ್ಣ ಮಾಡಲಿಕ್ಕೆ ಬೇಕು. ಒಂದು ವೇಳೆ ಹಾಗೆ ಮಾಡದಿದ್ದರೆ, ಯುರೋಪ ಖಂಡದ ಶಾಂತತೆಗೆ ಭಂಗ ಬರದಂತೆ ಎಲ್ಲ ರಾಷ್ಟ್ರಗಳು ಕೂಡಿ ಈ ಸಮಯದಲ್ಲಿ ಆ ವಚನಗಳನ್ನು ಪೂರ್ಣ ಮಾಡಲು ನಿಮಗೆ ಒತ್ತಾಯ ಮಾಡಬೇಕಾಗುವದು.'' ಈ ಸೂಚನಾ ಪತ್ರದ ಮೇಲೆ ಇಂಗ್ಲಂಡದ ಸರಕಾರದವರ ಸಹಿಯು ಇಲ್ಲದ್ದನ್ನು ಸುಲ್ತಾನನು ನೋಡಿ ಅವರು ತನಗೆ ಬಹು ವರ್ಷಗಳಿಂದ ಸಹಾಯ ಮಾಡುತ್ತ ಬಂದಿರುವದನ್ನೂ ತನ್ನ ಮೇಲೆ ಅವರ ಕೃಪೆಯು ಸಂಪೂರ್ಣವಾಗಿರುವದನ್ನೂ ಲಕ್ಷ್ಯದಲ್ಲಿ ತಂದು ಒಂದು ವೇಳೆ ಅವರು ಈ ಪ್ರಕರಣದಲ್ಲಿ ಕೈ ಹಾಕಿದರೆ, ಅವರ ವರ್ಚಸ್ಸಿನಿಂದ ತನ್ನ ಮೇಲೆ ಅಷ್ಟೊಂದು ಬಲಾತ್ಕಾರವು ಅನ್ಯರಾಷ್ಟ್ರದವರಿಂದಾಗಲಿಕ್ಕಿಲ್ಲೆಂದು ಊಹಿಸಿ, ಈ ಪ್ರಕರಣದಲ್ಲಿ ತಾವೂ ಸೇರಬೇಕೆಂದು ಇಂಗ್ಲಂಡದ ಸರಕಾರದವರಿಗೆ ಬೇಡಿಕೊಂಡನು. ಅವನ ಮಾತನ್ನು ಮನ್ನಿಸಿ, ಅವರು ಇದರಲ್ಲಿ ಸೇರಿದರು. ಆ ಮೇಲೆ ಸುಲ್ತಾನನು ಆ ಸೂಚನಾ ಪತ್ರವನ್ನು ಬಹು ಆದರದಿಂದ ಸ್ವೀಕರಿಸಿ, ಅದರಂತೆ ನಡೆಯುತ್ತೇನೆಂದು ಸನ್ ೧೮೭೬ನೆಯ ಇಸವಿಯ ಫೆಬ್ರುವರಿ ತಿಂಗಳಿನ ೬ನೆಯ ತಾರೀಖಿನ ದಿವಸ ಒಡಂಬಟ್ಟನು. ಆದರೆ ಅವನು ಒಡಂಬಟ್ಟಂತೆ ನಡೆಯಲಿಲ್ಲ. ಮುಂದೆ ಮೇ ತಿಂಗಳಿನ ಆರಂಭದಲ್ಲಿಯೇ ಬಲ್ಗೇರಿಯಾ ಪ್ರಾಂತಕ್ಕೆ ಸೇರಿದ ಕೆಲವು ಹಳ್ಳಿಗಳಲ್ಲಿ ದೊಡ್ಡದೊಂದು ಬಂಡು ಎದ್ದಿತು. ಈ ಸಮಯದಲ್ಲಿ ಸುಲ್ತಾನನು ಹೇಳಲಸಾಧ್ಯವಾದಷ್ಟು ಕ್ರೂರತನದಿಂದ ಆ ಬಂಡನ್ನು ಅಣಗಿಸಿದನು. ಈ ಪ್ರಸಂಗದಲ್ಲಿ ಸಾವಿರಾರು ಜನರು ನಿರ್ದಯದಿಂದ ಕೊಲ್ಲಲ್ಪಟ್ಟರು. ಈ ಸುದ್ದಿಯನ್ನು ಕೇಳಿ, ಯುರೋಪಖಂಡದೊಳಗಿನ ರಾಷ್ಟ್ರಗಳೆಲ್ಲ ದಿಗಿಲುಗೊಂಡವು.

ಬಲ್ಗೇರಿಯಾದಲ್ಲಿ ನಡೆದ ಕ್ರೂರ ಕೃತ್ಯಗಳ ಸುದ್ದಿಯನ್ನು ಕೇಳಿ ಇಂಗ್ಲಂಡದವರು ಮಾಡಿದ ಪ್ರಯತ್ನಗಳು.

ಮೇಲೆ ಹೇಳಿದ ಮೇರೆಗೆ ಬಲ್ಗೇರಿಯಾದಲ್ಲಿ ಬಹು ಅನರ್ಥಗಳು ನಡೆದಿರುವವೆಂಬ ಸುದ್ದಿಗಳು ಬಂದರ ಮೇಲೊಂದಾಗಿ ಇಂಗ್ಲಂಡಕ್ಕೆ ಬಂದು ಮುಟ್ಟಿದವು. ಈ ಸಮಯದಲ್ಲಿ (Lord Beacons- field) ಲಾರ್ಡ ಬೀಕನ್ಸ್-ಫೀಲ್ಡ ಎಂಬ ಪದವಿಯನ್ನು ಪಡೆದಂಥ ಬೆಂಜಾಮಿನ್ ಡಿಝುರಾಯಲಿಯು ಮಹಾರಾಣೀ ಸರಕಾರದ ಮುಖ್ಯ ಮಂತ್ರಿಯಾಗಿದ್ದನು. ಅವನು ಈ ಸುದ್ದಿಗಳೆಲ್ಲ ನಿರಾಧಾರವಾದವುಗಳೆಂತಲೂ ಇವುಗಳಲ್ಲಿ ಅತಿಶಯೋಕ್ತಿಯು ವಿಶೇಷವಾಗಿರಬಹುದೆಂತಲೂ ಗ್ರ

ಹಿಸಿ ಅವುಗಳಿಗೆ ಏನೂ ಲಕ್ಷ್ಯಗೊಡಲಿಲ್ಲ. ಇಷ್ಟರಲ್ಲಿಯೇ 'ಡೇಲೀನ್ಯೂಜ್' (Daily News) ಎಂಬ ಪ್ರಸಿದ್ಧ ವರ್ತಮಾನ ಪತ್ರದ ಒಡೆಯನು, ಬಲ್ಗೇರಿಯಾದಲ್ಲಿ ನಡೆದಿದ್ದ ಸಂಗತಿಗಳನ್ನು ಪ್ರತ್ಯಕ್ಷವಾಗಿ ನೋಡಿ, ಅವುಗಳ ಸುದ್ದಿಯನ್ನು ಪತ್ರಮುಖದಿಂದ ತನಗೆ ತಿಳಿಸುವದಕ್ಕಾಗಿ 'ಮಾಕ್‌ಗಹಾನ್' ಎಂಬ ಗೃಹಸ್ಥನನ್ನು ಅಲ್ಲಿಗೆ ಕಳುಹಿಸಿದ್ದನು. ಈ ಗೃಹಸ್ಥನು ಕಾನಸ್ಟಂಟಿನೋಪಲ್ ಪಟ್ಟಣದಿಂದ ಬರೆದು ಕಳುಹಿಸಿದ ಪತ್ರದ ತಾತ್ಪರ್ಯವೇನಂದರೆ:—"ಮುಸಲ್ಮಾನರು ಬಲ್ಗೇರಿಯಾದೊಳಗಿನ ಸಾವಿರಾರು ಜನ ನಿರಪರಾಧಿಗಳಾದ ಗಂಡಸರನ್ನೂ ಹೆಂಗಸರನ್ನೂ ಹುಡುಗರನ್ನೂ ಕನಿಕರವಿಲ್ಲದೆ ಕಡಿದು ಹಾಕಿದ್ದಾರೆ; ಅರುವತ್ತು ಹಳ್ಳಿಗಳನ್ನು ಬಡಿದು ಹಾಳುಗೆಡವಿದ್ದಾರೆ. ಈ ರಾಜ್ಯದಲ್ಲಿ ಅತ್ಯಧಿಕ ಫಲವತ್ತಾದದ್ದೆಂಬ ಕೀರ್ತಿಯನ್ನು ಪಡೆದಿದ್ದ ನಾಡಿನಲ್ಲಿ ನೋಡಿದಲ್ಲೆಲ್ಲ ಈಗ ಹಾಳೇ ಸುರಿಯುತ್ತದೆ; ನಾಲ್ವತ್ತು ಹುಡಿಗಿಯರನ್ನು ಒಂದು ಹುಲ್ಲು ಗುಡಿಸಲಿನಲ್ಲಿ ಹೊಗಿಸಿ, ಅದಕ್ಕೆ ಬೆಂಕಿ ಹಚ್ಚಿ ಅವರನ್ನೆಲ್ಲ ಹುರುಪಳಿಸಿ ಕೊಂದಿದ್ದಾರೆ; ನೂರಾರು ಜನರನ್ನು ಸೆರೆ ಹಿಡಿದು ಅವರನ್ನು ಪರಿಪರಿಯಿಂದ ಪೀಡಿಸಿದ್ದಾರೆ." ಇದಲ್ಲದೆ ಸ್ವತಃ ಇಂಗ್ಲಂಡದ ಸರಕಾರದವರು ಅಲ್ಲಿಯ ಸ್ಥಿತಿಯನ್ನು ಕಣ್ಣಿನಿಂದ ನೋಡಿ ತಮಗೆ ಪತ್ರ ಬರೆದು ತಿಳಿಸುವದಕ್ಕಾಗಿ (W. Baring) ಡಬ್ಲಿಯು ಬೇರಿಂಗನೆಂಬ ಅಧಿಕಾರಸ್ಥನನ್ನು ಕಳಿಸಿದ್ದರು. ಅವನು ತನ್ನ ಪತ್ರದಲ್ಲಿ ಬರೆದದ್ದೇನಂದರೆ:—"ತುರ್ಕೀ ದಂಡಾಳುಗಳು ೧೨,೦೦೦ ಜನರನ್ನು ಹಿಡಿದು ಬಿಡುಕದೆ ಕೊಂದು ಹಾಕಿದ್ದಾರೆ. ಈ ಬಂಡನ್ನು ಅಣಗಿಸುವಾಗ್ಗೆ (Batak) ಬಟಕ್ ಎಂಬ ಊರಿನಲ್ಲಿ ಅತಿ ಭಯಂಕರವಾದ ಕೊಲೆಯಾಗಿದೆ. ಈ ಗದ್ದಲದಲ್ಲಿ ಸುಮಾರು ೧,೨೦೦ ಜನರು ತಮ್ಮ ಜೀವಕ್ಕೆ ಅಂಜಿಕೊಂಡು, ಓಡಿ ಹೋಗಿ, ಅತಿ ಭದ್ರವಾದದ್ದೊಂದು ಕಲ್ಲಿನ ಗುಡಿಯಲ್ಲಿ ಆಶ್ರಯ ತೆಗೆದುಕೊಂಡಿರಲು, ದಂಡಾಳುಗಳು ಅದನ್ನು ಮುತ್ತಿ, ಕಿಟಕಿಗಳೊಳಗಿಂದ ಗುಂಡುಗಳನ್ನು ಹೊಡಿದು, ಮೇಲಿನ ಹಂಚುಗಳನ್ನು ತೆಗೆದು, ಉರಿಯುವ ಕೊರಡುಗಳನ್ನೂ ಕಕ್ಕಡಗಳನ್ನೂ ಒಳಗೆ ಚೆಲ್ಲಿ, ಅಲ್ಲಿಯ ಬಹು ಜನರನ್ನು ಕೊಂದರೂ ಸಹ ತೃಪ್ತರಾಗದೆ, ಆ ಗುಡಿಯ ಬಾಗಿಲವನ್ನು ಮುರಿದು, ಒಳಗೆ ಹೊಕ್ಕು, ಉಳಿದವರನ್ನೆಲ್ಲ ನುಚ್ಚು ನುಚ್ಚಾಗಿ ಕಡಿದು ಹಾಕಿದ್ದಾರೆ. ಈ ದಂಡಾಳುಗಳ ಮುಖ್ಯಸ್ಥನ ಈ ಕಟುಕುತನವನ್ನು ನೋಡಿ, ಸರಕಾರದವರು ಮೆಚ್ಚಿ, ಅವನಿಗೆ ಒಂದು ದೊಡ್ಡ ಪದವಿಯನ್ನು ಕೊಟ್ಟಿದ್ದಾರೆ." ಈ ಭಯಂಕರವಾದ ಸುದ್ದಿಗಳನ್ನು ಕೇಳಿ, ಇಂಗ್ಲಂಡದ ಜನರ ಪಿತ್ತವು ತಲೆಗೇರಿತು. ಅವರೊಳಗಿನ ಧರ್ಮನಿಷ್ಠರೂ ಸಜ್ಜನರೂ ಬಲ್ಗೇರಿಯಾ ಪ್ರಾಂತದ ಪ್ರಜೆಗಳು ತಮ್ಮ ಧರ್ಮಬಂಧುಗಳೆಂದೆಣಿಸಿ, ಅವರನ್ನು ಈ ಅನರ್ಥಗಳಿಂದ ಮುಕ್ತರನ್ನಾಗಿ ಮಾಡುವದು ಇಂಗ್ಲಂಡದ ಕರ್ತವ್ಯವಾಗಿದೆಂ

ದು ಹೇಳತೊಡಗಿದರು. ಬಹು ಜನರು ಈ ವಿಷಯವಾಗಿ ತಮ್ಮ ತಮ್ಮೊಳಗೆ ಮಾತನಾಡಲಿಕ್ಕೂ ವರ್ತಮಾನ ಪತ್ರಗಳಲ್ಲಿ ದೊಡ್ಡ ದೊಡ್ಡ ಲೇಖಗಳನ್ನು ಬರೆಯಲಿಕ್ಕೂ ಹತ್ತಿದರು. ಆದರೂ ಡಿಸ್ರೇಲಿಯು ಅವುಗಳ ಕಡೆಗೆ ಕಣ್ಣೆತ್ತಿ ಸಹ ನೋಡಲಿಲ್ಲ. ಡಿಸ್ರೇಲಿಯು ಒಬ್ಬ ಯಹೂದಿಯ ಜಾತಿಯವನಾಗಿರುವದರಿಂದ ಹೀಗೆ ದುರ್ಲಕ್ಷ್ಯ ಮಾಡುತ್ತಿರುವನೆಂದು ಗ್ರಹಿಸಿ, ಅವನ ಮೇಲೆ ಜನರು ಮುತ್ತಿಪ್ಪಟ್ಟ ಸಿಟ್ಟಾದರು. ಲಿಬರಲ್ ಪಕ್ಷದ ಮುಂದಾಳಾದ (Lord Hartington) ಲಾರ್ಡ್‌ಹಾರ್ಟಿಂಗ್‌ಟನ್ನನು ಬಹು ಶಾಂತ ಸ್ವಭಾವದವನೂ ಚಟುವಟಿಕೆ ಇಲ್ಲದವನೂ ಆಗಿದ್ದದರಿಂದ, ಸುಮ್ಮನೆ ಕುಳಿತು ಬಿಟ್ಟನು. ಈ ಸಂಗತಿಗಳನ್ನೆಲ್ಲ ಗ್ಲ್ಯಾಡ್‌ಸ್ಟನ್ನನು ನೋಡಿ, ಇನ್ನು ಮೇಲೆ ತಾನು ಧರ್ಮ ವಿಷಯದ ಮೇಲೆ ವಾದವಿವಾದ ಮಾಡುತ್ತಲೂ ರೋಮದ ಇತಿಹಾಸವನ್ನು ಓದುತ್ತಲೂ ಕುಳಿತುಕೊಳ್ಳುವದು ತಕ್ಕದ್ದಲ್ಲೆಂದೆಣಿಸಿ, ಈ ಬಲ್ಗೇರಿಯಾದ ಪ್ರಕರಣವನ್ನು ಕೈಕೊಂಡನು. ಅವನು ಈ ವಿಷಯದ ಮೇಲೆ ಬಳ್ಳೇ ಹುರುಪಿನಿಂದ ತೆರಪಿಲ್ಲದೆ ಅಲ್ಲಲ್ಲಿ ವ್ಯಾಖ್ಯಾನಗಳನ್ನು ಕೊಟ್ಟು, ಸಹಸ್ರಾವಧಿ ಹಸ್ತಪತ್ರಿಕೆಗಳನ್ನು ಮುದ್ರಿಸಿ, ಸಣ್ಣ ದೊಡ್ಡ ಪುಸ್ತಕಗಳನ್ನು ಬರೆದು, ಅವುಗಳನ್ನು ಪ್ರಕಟಿಸಿ ಎಲ್ಲರ ಲಕ್ಷ್ಯವನ್ನು ಇದರ ಕಡೆಗೆ ತಿರುಗಿಸಿದನು. ಅವನ ಈ ಕೃತಿಗಳಿಂದ ಇಂಗ್ಲಂಡದ ಜನರಲ್ಲಿ ಏಕಕಾಲಕ್ಕೆ ಆವೇಶವು ಹುಟ್ಟಿತು. ಗ್ಲ್ಯಾಡ್‌ಸ್ಟನ್ನನ ಈ ದೀರ್ಘ ಪ್ರಯತ್ನಗಳಿಗೆ ರಸೇಲನೆಂಬ ಗ್ರಂಥಕಾರನು ಕೆಲವು ಕಾರಣಗಳನ್ನು ಹೇಳಿರುವನು. ಅವು ಯಾವವೆಂದರೆ.—"ಗ್ಲಾಡ್‌ಸ್ಟನ್ನನು ದಯಾಸಾಗರನು, ತುರ್ಕರು ನಿರ್ದಯರು; ಇವನು ಸ್ವತಂತ್ರ ದೇವಿಯ ಭಜಕನು, ಅವರು ಆ ದೇವಿಯ ಭಂಜಕರು; ಇವನು ಶಾಂತಿಪ್ರಿಯನು, ಅವರು ಶಾಂತಿನಾಶಕರು; ಇವನು ವಿದ್ಯಾಭಿಮಾನಿಯು, ಅವರು ಅವಿದ್ಯಾಭಿಮಾನಿಗಳು; ಇವನು ಕ್ರಿಸ್ತೀಧರ್ಮದ ನಿಸ್ಸೀಮ ಭಕ್ತನು, ಅವರು ಆಧರ್ಮಾನುಯಾಯಿಗಳನ್ನು ಹಿಂಸಿಸುವದು ತಮ್ಮ ಕರ್ತವ್ಯವೆಂದೆಣಿಸುವವರು ಆಗಿರುವರು." ಗ್ಲ್ಯಾಡ್‌ಸ್ಟನ್ನನು ತನ್ನದೊಂದು ಭಾಷಣದಲ್ಲಿ "ನಿಲ್ಲಲು ಸಹ ಆಸ್ಪದ ಕೊಡಬಾರದಂಥ ಸ್ಥಳದಲ್ಲಿ ತುರ್ಕರು ಅರಸಾಗಿ ಈಗ ತಮ್ಮ ನಿರಂಕುಶವಾದ ಅಧಿಕಾರವನ್ನು ಅಲ್ಲಿ ನಡಿಸುತ್ತಿರುವರು ಮಾತ್ರವಲ್ಲ, ಆದರೆ ನಮ್ಮ ಕ್ರಿಸ್ತ ಭಕ್ತರನ್ನು ಪರಿಪರಿಯಿಂದ ಗೋಳಾಡಿಸುತ್ತಿರುವರು. ಇದನ್ನು ನಾವು ಕೇಳಿ, ಇನ್ನು ಮೇಲೆ ಸುಮ್ಮನಿರದೆ, ಅವರಿಗೆ ಒಳಿತಾಗಿ ಕೈತೋರಿಸಲಿಕ್ಕೆ ಬೇಕು," ಎಂದು ಹೇಳಿದನು. ಆಮೇಲೆ ಕೇಳುವದೇನದೆ, ಅವನೂ ಅವನ ಜೊತೆಗಾರರೂ ಈ ಕೆಲಸಕ್ಕೆ ಬದ್ಧಕಂಕಣರಾಗಿ ನಿಂತು, ಲಂಡನ್‌ಪಟ್ಟಣದಲ್ಲಿರುವ "ಸೇಂಟ್ ಜೇಮ್ಸ ಹಾಲ್" ಎಂಬಲ್ಲಿ ಒಂದು ದೊಡ್ಡ ಸಭೆಯನ್ನು ನೆರೆಯಿಸಿದರು. ಈ ಸಭೆಯಲ್ಲಿ ಬಹು ಜನ

ವಾಕ್ಯೋವಿದರು ಭಾಷಣ ಮಾಡಿದರು. ಅವುಗಳಲ್ಲಿ ಗ್ಲ್ಯಾಡ್‌ಸ್ಟನ್ನನ ಭಾಷಣವೇ ಅತ್ಯುತ್ತಮವಾಯಿತು. ಜಸ್ಟಿನ್ ಮೆಕಾರ್ಥಿ ಎಂಬುವವನು ಗ್ಲ್ಯಾಡ್‌ಸ್ಟನ್ನನ ಇಷ್ಟು ಉತ್ತಮವಾದ ಭಾಷಣವನ್ನು ನಾನೆಂದೂ ಕೇಳಿದ್ದಿಲ್ಲೆಂದು ಬರೆದಿರುವನು. (Carlyle) ಕಾರ್ಲಾಯಿಲನೆಂಬ ವಿದ್ವಾನ್ ಗೃಹಸ್ಥನು ರಾಜಕೀಯ ಪ್ರಕರಣಗಳಲ್ಲಿ ಎಂದೂ ಸೇರುತ್ತಿದ್ದಿಲ್ಲ. ಈ ಹೊತ್ತಿಗೆ ಅವನು ಸಹ ಮುಂದಾದನು. ಅವನು ಈ ದೊಡ್ಡ ಸಭೆಗೆ ಬರೆದು ತಿಳಿಸಿದ್ದೇನಂದರೆ:—"ತುರ್ಕೀ ಸರಕಾರವು ತನ್ನ ರಾಜ್ಯದೊಳಗಿನ ಆಗ್ನೇಯ ದಿಕ್ಕಿನಲ್ಲಿರುವ ಪ್ರಜೆಗಳನ್ನು ಅತಿ ಕ್ರೂರತನದಿಂದ ನಡೆಯಿಸಹತ್ತಿರುವದು. ಆ ಕ್ರೂರತನವನ್ನು ನಿಲ್ಲಿಸಲು ಅದರ ಕೈಯೊಳಗಿನ ಅಧಿಕಾರವನ್ನು ಕಸುಕೊಳ್ಳುವದೇ ಮೇಲಾದ ಉಪಾಯವು." ಇದೇ ಮೇರೆಗೆ ಪ್ರತಿಪಕ್ಷದವರನ್ನು ಉದ್ದೇಶಿಸಿ, ಪ್ರೊಫೇಸರ್ ಫ್ರೀಮನ್ನನು "ಅನ್ಯಾಯವ ಬೆನ್ನು ಕಟ್ಟಿ, ನ್ಯಾಯದ ವಿರುದ್ಧವಾಗಿ ಒಂದೇ ನುಡಿಯನ್ನು ನಾವು ನಮ್ಮ ಬಾಯಿಂದಾಡಿದ ಕೂಡಲೆ ಅಥವಾ ಒಂದೇ ಕೃತ್ಯವನ್ನು ನಾವು ಎಸಗಿದ ಕ್ಷಣವೆ, ಇಂಗ್ಲಂಡದ ಸರ್ವಸ್ವ ಹಾನಿಯಾಯಿತೆಂತಲೇ ತಿಳಿಯಬೇಕು." ಎಂದು ಹೇಳಿದನು.

ಕಾನ್‌ಸರ್ವೇಟೀವ್ ಪಕ್ಷದ ದೊರೆತನಕ್ಕೆ ಇಂಗ್ಲಂಡದ ಜನರು ಮುನಿಸು ಗೊಂಡದ್ದು.

ಮೇಲೆ ಹೇಳಿದ ಮೇರೆಗೆ ಇಂಗ್ಲಂಡದಲ್ಲಿ ಬಲ್ಗೇರಿಯಾ ಪ್ರಾಂತದ ವಿಷಯವಾಗಿ ಗದ್ದಲು ನಡೆದಿರಲು, ಪಾರ್ಲಮೆಂಟಿನ ಸಭಾಸದರನ್ನು ಹೊಸದಾಗಿ ಆರಿಸಿಕೊಳ್ಳುವ ಸಮಯವು ಬಂತು. ಈ ವೇಳೆಯಲ್ಲಿ ಪ್ರತಿ ಒಬ್ಬರ ಬಾಯಿಂದ 'ಡಿಝುರಾಯಲಿ' ಸಾಹೇಬರು 'ಲಾರ್ಡ್ ಬೀಕನ್ಸಫೀಲ್ಡ' ಎಂಬ ಪದವಿಯನ್ನು ಪಡೆದು ಉಬ್ಬಿರುವದು; ಪರರಾಜ್ಯಗಳ ಸಂಬಂಧದ ಅವರ ಆಡಳಿತೆಯು ನಿಮ್ಮ ಮನಸಿಗೆ ಬರುವದೋ? ಬಲ್ಗೇರಿಯಾ ಪ್ರಾಂತದಲ್ಲಿ ನಡೆದಿರುವ ಕ್ರೂರತನಗಳನ್ನೂ ಕೊಲೆಗಳನ್ನೂ ಕೇಳಿ, ಅವರು ಕನಿಕರ ಪಡುವದರ ಬದಲು ಉಪಹಾಸ ಮಾಡುತ್ತಿರುವದು ನ್ಯಾಯವೋ? ಎಂಬ ಉದ್ಗಾರಗಳು ಹೊರಡಲಾರಂಭಿಸಿದವು. ಈ ಹೊತ್ತಿಗೆ ಇಂಗ್ಲಂಡದ ಸರಕಾರದವರು ಬಲ್ಗೇರಿಯಾ ಪ್ರಾಂತದಲ್ಲಿ ನಡೆದಿರುವ ಅನ್ಯಾಯಕತನವನ್ನು ಸುಲ್ತಾನನಿಗೆ ತಿಳಿಸಿ, ಅದನ್ನು ನಿಲ್ಲಿಸುವ ಉದ್ದೇಶದಿಂದ ಲಾರ್ಡ್ ಸಾಲಿಸಬರಿಯನ್ನು ಕಾನಸ್ಟಂಟಿನೋಪಲ್ಲಕ್ಕೆ ಕಳುಹಿಸಿದರು. ಇದರಂತೆ ರಶಿಯಾದ ಸರಕಾರದವರು ಸಹ ತಮ್ಮ ರಾಯಭಾರಿಯನ್ನು ಅದೇ ಕೆಲಸದ ಸಲುವಾಗಿ ಅಲ್ಲಿಗೆ ಕಳುಹಿಸಿದರು. ಆದರೆ ಅವರ ಮಾತುಗಳನ್ನು ಸುಲ್ತಾನನು ತನ್ನ ಕಿವಿಯ ಮೇಲೆ ಸಹ ಹಾಕಿಕೊಳ್ಳಲಿಲ್ಲ. ಈ ಸುದ್ದಿಯನ್ನು ಕೇಳಿದ ಕೂಡಲೆ ಯುರೋಪಖಂಡದೊಳಗಿನ ರಾಷ್ಟ್ರಗಳು ತುರ್ಕಸ್ಥಾನದ ಮೇಲೆ ಕಡುಸಿಟ್ಟಾದವು. ರಶಿಯಾದ ಸರಕಾರದವರು

ಒಮ್ಮೆಲೆ ತಮ್ಮ ಸೈನ್ಯವನ್ನು ತುರ್ಕಸ್ಥಾನದ ವಿರುದ್ಧವಾಗಿ ಕಳುಹಿಸಿದರು. ಒಂ
ದು ವೇಳೆ ಸುಲ್ತಾನನು ತನ್ನ ಹಟವನ್ನು ಬಿಟ್ಟು ಹಾದಿಗೆ ಬಂದರೆ, ಅವನಿಗೆ ಸ
ಹಾಯ ಮಾಡುವ ಉದ್ದೇಶದಿಂದ ಇಂಗ್ಲಂಡದ ದೊರೆತನದವರು ತಮ್ಮ ಹಡಗುಪ
ಡೆಯನ್ನು ತುರ್ಕಸ್ಥಾನಕ್ಕೆ ಕಳುಹಿಸಿದರು. ಈ ಮೇರೆಗೆ ಎರಡು ಸೈನ್ಯಗಳ ನಡು
ವೆ ಸುಲ್ತಾನನು ಸಿಕ್ಕು, ಮೆತ್ತಗಾಗಿ, ಬೇರೆ ಉಪಾಯಗಾಣದೆ ರಶಿಯಾದವರು
ಬೇಡಿದ ಸೀಮೆಯನ್ನು ಅವರಿಗೂ ಸೈಪ್ರಸ್ ನಡುಗಡ್ಡೆಯನ್ನು ಇಂಗ್ಲಿಷರಿಗೂ
ಕೊಟ್ಟು, ಅವರನ್ನು ಸಮಾಧಾನಪಡಿಸಿದನು. ಇಷ್ಟಾದರೂ ಸುಲ್ತಾನನು ತನ್ನ
ಕಾಯಕವನ್ನು ಬಿಡಲಿಲ್ಲ. ಅವನು ಯಥಾಪ್ರಕಾರ ಬಲ್ಗೇರಿಯಾದ ಪ್ರಜೆಗಳನ್ನು
ಕ್ರೂರತನದಿಂದಲೇ ನಡೆಯಿಸ ಹತ್ತಿದನು. ಇದಕ್ಕೆಲ್ಲ ಅಧಿಕಾರದಲ್ಲಿದ್ದ ಕಾನ್ಸ
ರ್ವೇಟೀವ್ ಪಕ್ಷದವರ ಉದಾಸೀನವೇ ಕಾರಣವೆಂದು ಇಂಗ್ಲಂಡದ ಜನರು ತಿಳಿ
ದುಕೊಂಡು ಅವರ ಮೇಲೆ ಮತ್ತಿಷ್ಟು ಮುನಿದರು. ಇದರಿಂದ ಮುಂದಿನ ಪಾರ್ಲ
ಮೆಂಟಿನ ಆಯುವಿಕೆಯಲ್ಲಿ ಆ ಪಕ್ಷವು ತೀರ ಹಿಮ್ಮೋಡಾಗಿ ಲಿಬರಲ್ ಪಕ್ಷದವ
ರು ಹೆಚ್ಚು ಬರುವ ಲಕ್ಷಣವು ಸ್ಪಷ್ಟವಾಗಿ ತೋರಹತ್ತಿತು.

ಗ್ಲ್ಯಾಡ್‌ಸ್ಟನ್ನನಲ್ಲಿದ್ದ ವಿವಾದ ಶಕ್ತಿಯು.

ಈ ಕಾಲದಲ್ಲಿ ಬಲ್ಗೇರಿಯಾ-ಪ್ರಕರಣದ ವಿಷಯವಾಗಿ ನಿಕರದ ವಾಗ್ವಾದ
ಗಳು ಪಾರ್ಲಮೆಂಟಿನಲ್ಲಿ ಮೇಲಿಂದ ಮೇಲೆ ನಡೆಯು
ತ್ತಲೇ ಇದ್ದವು. ಈ ಹೊತ್ತಿಗೆ ಗ್ಲ್ಯಾಡ್‌ಸ್ಟನ್ನನು
ವಾದವಿವಾದಗಳಲ್ಲಿಯೂ ಮಿಕ್ಕಿದವನೆಂಬ ಸಂಗತಿಯು
ಎಲ್ಲರ ನಿದರ್ಶನಕ್ಕೆ ಬಂತು. ಅದನ್ನು ಇಲ್ಲಿ ಸಾರಾಂಶವಾಗಿ ಹೇಳುವೆವು. ಒಂದು
ಸಾರೆ ಮಿಸ್ಟರ್ ಚಾಪ್ಲೀನನೆಂಬೊಬ್ಬ ತರುಣ ಸಭಾಸದನು ಗ್ಲ್ಯಾಡ್‌ಸ್ಟನ್ನನ ವಿರು
ದ್ಧವಾಗಿ ಪಾರ್ಲಮೆಂಟಿನಲ್ಲಿ ದೊಡ್ಡದೊಂದು ಭಾಷಣ ಮಾಡಿ, ಅದರ ಅಂತ್ಯದಲ್ಲಿ
'ಗ್ಲ್ಯಾಡ್‌ಸ್ಟನ್ ದೊರೆಗಳು ಕೆಲವು ಜನ ಲಿಬರಲ್ ಪಕ್ಷದವರನ್ನು ಒಂದು ಮಾಡಿ
ಕೊಂಡು, ಪರರಾಷ್ಟ್ರಗಳ ಸಂಬಂಧದ ಕಾಯಿದೆಗಳನ್ನು ತಿದ್ದುವ ಘನವಾದ ಕಾ
ರ್ಯವನ್ನು ಸರಕಾರದವರ ಕೈತಪ್ಪಿಸಿ, ಸ್ವತಃ ಸಣ್ಣಪುಟ್ಟ ಪುಸ್ತಕಗಳನ್ನು ಬರೆಯು
ವದರಿಂದಲೂ ಸಾರ್ವಜನಿಕ ವ್ಯಾಖ್ಯಾನಗಳನ್ನು ಕೊಡುವದರಿಂದಲೂ ಅಲ್ಲಲ್ಲಿ ಸಭೆ
ಗಳನ್ನು ನೆರೆಯಿಸುವದರಿಂದಲೂ ಅದನ್ನು ತಾವೇ ಕೈಕೊಳ್ಳುವ ಹವ್ಯಾಸಕ್ಕೆ ಬಿದ್ದಿ
ರುವರು. ಈಗ ಅವರು ಆ ಕಾರ್ಯವನ್ನು ಮಾಡಿಯೇ ತೀರಬೇಕು ಇಲ್ಲವೆ ಹಾ
ಗೆ ವರ್ತಿಸಿದ್ದು ತಪ್ಪೆಂದು ಒಪ್ಪಿಕೊಳ್ಳಲಿಕ್ಕೆ ಬೇಕು' ಎಂದು ಹೇಳಿದನು. ಇದ
ನ್ನು ಕೇಳಿ ಸ್ಪೀಕರನು (Speaker) ಅಂದರೆ ಪ್ರತಿನಿಧಿಗಳ ಸಭೆಯ ಅಧ್ಯಕ್ಷ
ನು ಚಾಪ್ಲೀನನಿಗೆ 'ನಿಮ್ಮ ಭಾಷಣದೊಳಗಿನ ಕಡೆಯ ವಾಕ್ಯವು ಪಾರ್ಲಮೆಂಟಿನ

ನಿಯಮಗಳಿಗೆ ವಿರುದ್ಧವಾಗಿದೆ; ಅದು ಕಾರಣ ಅದನ್ನು ನೀವು ಹಿಂದಕ್ಕೆ ತೆಗೆದು
ಕೊಳ್ಳಬೇಕು' ಎಂದು ಆಜ್ಞಾಪಿಸಿದನು ಆ ಮೇಲೆ ಚೇಂಪ್ಲೀನನು ಆ ವಾಕ್ಯವ
ನ್ನು ತಿರುಗಿ ತೆಗೆದುಕೊಳ್ಳುವಾಗ್ಗೆ 'ಗ್ಲ್ಯಾಡ್‌ಸ್ಟನ್ ದೊರೆಗಳು ಈಗಿನ ತಮ್ಮ ಕೃ
ತ್ಯಗಳಿಂದ ಪಾರ್ಲಮೆಂಟಿನಲ್ಲಿ ತಮಗಿದ್ದ ಮಾನವನ್ನೂ ಆ ಸಭೆಯ ಪ್ರೀತಿಯನ್ನೂ
ಕಳೆದುಕೊಂಡದ್ದಲ್ಲದೆ, ನಮ್ಮ ದೇಶದಲ್ಲಿ ಈವೊತ್ತಿನವರೆಗೆ ಆಗಿ ಹೋದ ಉತ್ತ
ಮೋತ್ತಮ ಪುರುಷರಲ್ಲಿ ತಾವೊಬ್ಬರೆಂದು ಎಲ್ಲರಿಂದಲೂ ಹೊಗಳಿಸಿಕೊಳ್ಳುತ್ತಿದ್ದದ್ದ
ನ್ನೂ ಪರಮಪ್ರತಾಪಶಾಲಿಗಳೂ ಮಹಾತೇಜಸ್ವಿಗಳೂ ಎಂದು ಇಷ್ಟು ದಿವಸಗಳವ
ರೆಗೆ ಇಂಗ್ಲಂಡದಿಂದ ಮನ್ನಣಿ ಹೊಂದುತ್ತಿದ್ದದ್ದನ್ನೂ ಈಗ ಸಂಪೂರ್ಣವಾಗಿ ಕಳೆ
ದುಕೊಂಡರು. ಇದನ್ನು ನೋಡಿ ನನಗೆ ಖೇದವಾಗುತ್ತದೆ' ಎಂದು ಹೇಳಿದನು.
ಈ ತರದ ಬಿರಸು ಮಾತನ್ನು ಗ್ಲ್ಯಾಡ್‌ಸ್ಟನ್ನನು ಎಂದಾದರೂ ಸೈರಿಸುವದುಂಟೇ? ಬ
ಡಿದೆಬ್ಬಿಸಿದ ಹೆಬ್ಬುಲಿಯಂತೆ ಅವನು ಒಮ್ಮೆಲೆ ಎದ್ದು ನಿಂತು ಹೇಳಿದ್ದೇನಂದರೆ:—
ಈ ಅರ್ಧ ಶತಮಾನಕ್ಕಿಂತ ಹೆಚ್ಚು ಕಾಲಾವಧಿಯಲ್ಲಿ ಸಾರ್ವಜನಿಕ ವ್ಯಾಖ್ಯಾನಗಳು
ನಡೆವಾಗ್ಗೆ, ನನ್ನೊಂದಿಗೆ ವಾದಿಸಲು ಬಂದವರಿಗೆ ಸಮರ್ಪಕವಾದ ಉತ್ತರಗಳನ್ನು
ಕೊಡಲು ಹಿಂಜರಿಯುತ್ತೇನೆಂಬ ಆರೋಪವನ್ನು ಹೊರಿಸಿದ್ದು ಇದೇ ಮೊದಲನೆಯ
ಸಾರೆಯು. ಈ ಮೇರೆಗೆ ಗುರುಗುಟ್ಟುವ ಗೃಹಸ್ಥರು ಆಯಾ ಸಾರ್ವಜನಿಕ ಸಭೆ
ಗಳಿಗೆ ಬಂದು ಅಲ್ಲಿ ವರ್ತಿಸಿದ ಸಂಗತಿಗಳನ್ನು ಕಣ್ಣುಮುಟ್ಟ ನೋಡಿದ್ದರೆ, ಕಿವಿಮು
ಟ್ಟ ಕೇಳಿದ್ದರೆ, ಅವರಿಗೆ ಚೆನ್ನಾಗಿ ತಿಳಿಯುತ್ತಿತ್ತು. ಆದರೆ ಅವರು ಹಾಗೆ ಏಕೆ
ಮಾಡಲಿಲ್ಲವೋ ನಾನರಿಯೆನು. ಸಾರ್ವಜನಿಕ ವಾದವಿವಾದಗಳಲ್ಲಿ ನಾನು ಹಿಂದ
ಕ್ಕೆ ಸರಿಯತಕ್ಕವನೇ ಎಂಬ ಸಂಗತಿಯನ್ನು ಲಿಬರಲ್ ಪಕ್ಷದವರೂ ಕಾನ್‌ಸರ್ವೇ
ಟೀವ್ ಪಕ್ಷದವರೂ ಈ ಗೃಹಸ್ಥರಿಗಿಂತ ಹೆಚ್ಚು ಚೆನ್ನಾಗಿ ಬಲ್ಲರು! ಅದು ಕಾರಣ
ನಾನು ಆ ವಿಷಯವಾಗಿ ಹೆಚ್ಚಿಗೆ ಹೇಳುವದಿಲ್ಲ. ಬಲ್ಗೇರಿಯಾದಲ್ಲಿ ನಡೆದಿರುವ
ಕ್ರೂರ ಕೃತ್ಯಗಳೂ ಅನ್ಯಾಯಗಳೂ ಇಂಗ್ಲಿಷ್ ಜನಾಂಗದ ಸರ್ವಾಂಗವನ್ನು ವ್ಯಾಪಿ
ಸಿಕೊಂಡಿವೆ. ನಾನೂ ಆ ಜನಾಂಗಕ್ಕೆ ಸೇರಿದವನಾಗಿರುವದರಿಂದ, ಅವುಗಳ ಸಂ
ಬಂಧದ ನನ್ನ ಅಭಿಪ್ರಾಯಗಳನ್ನು ಹೊರಗೆಡವದೆ ಬಿಡುವದು ನನ್ನಿಂದಾಗಲಿಲ್ಲ. ಈ
ಗೃಹಸ್ಥರು ನಾನು ಹೊರಗೆ ಬಹಳ ಮಾತನಾಡುತ್ತೇನೆಂತಲೂ ಪಾರ್ಲಮೆಂಟಿನಲ್ಲಿ
ಮೌನವಾಗಿರುತ್ತೇನೆಂತಲೂ ಹೇಳುತ್ತಾರೆ! ಆದರೆ ಈಗ ನಡೆದಿರುವ ವಾದವಿವಾ
ದಗಳು ಮುಗಿಯುವ ಪೂರ್ವದಲ್ಲಿಯೇ ನಾನು ಈ ಸಭೆಯಲ್ಲಿ ಮಾಡಿರುವ ಪ್ರಯತ್ನ
ಗಳ ಫಲವು ಇವರ ಲಕ್ಷ್ಯದಲ್ಲಿ ಬರದೆ ಇರಲಿಕ್ಕಿಲ್ಲ. ಒಂದು ವೇಳೆ ಇವತ್ತಿನ ರಾತ್ರಿ
ಯೇ ಬಂದರೂ ಬರಬಹುದು. ಈ ತರುಣರು ನನಗೆ ಕೆಲವು ಪ್ರಶ್ನೆಗಳನ್ನು ಅತ್ಯಾ
ತುರದಿಂದ ಮಾಡಿರುವರು: ಆದರೆ ಅವುಗಳಿಗೆ ಪ್ರತ್ಯುತ್ತರ ಕೊಟ್ಟು ನಾನು ನನ

ಗುಟ್ಟನ್ನು ಈಗಲೇ ಒಡೆಯುವದಿಲ್ಲ. ಯಾಕೆಂದರೆ ಹಾಗೆ ಮಾಡುವದರಿಂದ ಯಾವುದೊಂದು ಸಾರ್ವಜನಿಕ ಹಿತವು ನಿಶ್ಚಯವಾಗಿ ಆಗುವದೆಂದು ನಂಬುವಷ್ಟು ನಾನು ಅನುಭವಶೂನ್ಯನಲ್ಲ. ಇವರು ನನ್ನಷ್ಟು ವಯಸ್ಸಿನವರಾದ ಬಳಿಕ, ಈಗ ನನ್ನ ಮೇಲೆ ಹೊರಿಸಿರುವ ಆರೋಪವನ್ನೇ ಮುಂದಿನ ಸಂತತಿಯವರು ಇವರ ಮೇಲೂ ಹೊರಿಸುವರು. ಅದು ಕಾರಣ ಈಗ ನಾನು ಕೊಡುವ ಉತ್ತರವನ್ನು ಇವರು ತಮ್ಮ ಹೃತ್ಪಟಲದ ಮೇಲೆ ಬರೆದುಕೊಂಡರೆ ಅದು ಮುಂದೆ ತಮ್ಮ ಮೇಲೆ ಆರೋಪ ಹೊರಿಸುವವರನ್ನು ಸೋಲಿಸಲಿಕ್ಕೆ ಇವರಿಗೆ ಚೆನ್ನಾಗಿ ಸಹಾಯ ಮಾಡುವದು. ಇವರನ್ನುವಂತೆ, ನಾನು ಬರೆದ ಲೇಖಗಳೂ ನಾನು ಮಾಡಿದ ಭಾಷಣಗಳೂ ನಿರ್ದಯಕ್ಕೊಳಪಟ್ಟು ಗೋಳಾಡುತ್ತಿರುವ ಪೂರ್ವನಿಟ್ಟಿನ ಪ್ರಜೆಗಳ ವಿಷಯವಾಗಿ ಇಂಗ್ಲಂಡದ ಜನರ ಮನಸ್ಸಿನಲ್ಲಿ ದಯಾರಸವನ್ನು ಹುಟ್ಟಿಸಲಿಕ್ಕೂ ಪೃಥ್ವಿಯ ಪ್ರತಿ ಒಂದು ಭಾಗದಲ್ಲಿರುವ ಜನರ ಮನಸ್ತಾಪವನ್ನು ಹೆಚ್ಚಿಸಲಿಕ್ಕೂ, ಆ ಮನಸ್ತಾಪದಿಂದ ದುಷ್ಪರಿಣಾಮಗಳುಂಟಾಗಲಿಕ್ಕೂ ಕಾರಣವಾಗಿದ್ದ ಪಕ್ಷದಲ್ಲಿ ಸ್ವತಃ ವಿರುದ್ಧ ಲೇಖಗಳನ್ನು ಬರೆದು ವಿರುದ್ಧ ಭಾಷಣಗಳನ್ನು ಮಾಡಿ ಆ ಭಾವೀ ದುಷ್ಪರಿಣಾಮಗಳ ಮೂಲವನ್ನೇ ಯಾಕೆ ಕಡಿದು ಹಾಕಲಿಲ್ಲವೆಂದು ನಾನು ಇವರನ್ನು ಕೇಳುತ್ತೇನೆ. ಇವೆಲ್ಲ ಇವರ ಮನಸ್ಸಿನ ಭ್ರಾಂತಿಯ ಪರಿಣಾಮಗಳು. ನಿಜವಿದ್ದದ್ದನ್ನು ಹೇಳಬೇಕಾದಲ್ಲಿ, ಮೊದಲು ಕೂಡು ಹಾಕಿಟ್ಟ ಒಣಹುಲ್ಲಿಗೆ ಉರಿಹಚ್ಚಿದಂತೆ ಮಾತ್ರ ನನ್ನ ಕೃತಿಯಾಗಿದೆ. ಇದಕ್ಕಿಂತ ಹೆಚ್ಚಿನ ಕಾರ್ಯವನ್ನೇನು ನಾನು ಮಾಡಿರುವದಿಲ್ಲ. ಬಲ್ಗೇರಿಯಾ ಪ್ರಾಂತದೊಳಗಿನ ಕ್ರೂರ ಕೃತ್ಯಗಳ ಸಂಬಂಧದ ನನ್ನ ಪುಸ್ತಕಗಳು ಹೊರಬೀಳುವ ಪೂರ್ವದಲ್ಲಿಯೇ, ಅಲ್ಲಿ ನಡೆದಿರುವ ಭಯಂಕರವಾದ ಕೊಲೆ-ಕಟುಕತನಗಳ ಸುದ್ದಿಗಳನ್ನು ಕೇಳಿ, ಇಂಗ್ಲಿಷ್ ಜನಾಂಗವು ಸಿಟ್ಟಿನಿಂದ ಕಂಗೆಟ್ಟ ಸಂಗತಿಯು ಎಲ್ಲರಿಗೂ ಗೊತ್ತುಂಟು. ಈ ಸಂಗತಿಯನ್ನು ಲಕ್ಷದಲ್ಲಿ ತಂದರೆ, ಇಂಗ್ಲಿಷ್ ಜನಾಂಗವು ತನ್ನಲ್ಲಿರುವ ಮುಂದಾಳುಗಳಿಗೂ ಕಾರ್ಯದಕ್ಷರಿಗೂ ತಾನೇ ಕಿಡಿ ಹಾಕಿ ಅವರನ್ನು ಪ್ರೋತ್ಸಾಹ ಪಡಿಸಿತೇ ಹೊರತು, ಆ ಜನಾಂಗವನ್ನು ಸಿಟ್ಟಿಗೆಬ್ಬಿಸಿದವರು ಆ ಮುಂದಾಳುಗಳೂ ಆ ಕಾರ್ಯದಕ್ಷರೂ ಅಲ್ಲವೆಂದು ಸುಲಭವಾಗಿ ತಿಳಿಯುವದು. ನಾನು ಈಗ ಹೇಳುವ ಕಡೆಯ ಮಾತೇನೆಂದರೆ:—ಬಲ್ಗೇರಿಯಾದ ಪ್ರಕರಣವು ಮುಗಿಯುವ ವರೆಗೆ ಈ ತರುಣರು ತಮ್ಮ ನಾಲಿಗೆಯನ್ನು ಬಿಗಿಹಿಡಿಯಬೇಕು. ಅಲ್ಲಿಯವರೆಗೆ ನಾನು ಇವರ ಪ್ರಶ್ನಗಳಿಗೆ ಉತ್ತರ ಕೊಡುವದಿಲ್ಲ. ಈ ಪ್ರಕರಣವು ಮುಗಿದಾಗ್ಗೆ, ನಾನು ಈಗ ಧಾರಣ ಮಾಡಿದ ಮೌನವೃತ್ತಿಯ ವಿರುದ್ಧವಾಗಿ ಗುಣಗುಟ್ಟಲು, ಇವರಿಗೆ ಎಳ್ಳುಕಾಳಷ್ಟು ಸಹ ಆಸ್ಪದ ದೊರೆಯಲಿಕ್ಕಿಲ್ಲ. ಅವನ ಈ ಗಂಭೀರವಾದ, ತೊಡಕಿನ, ಗರ್ಭಿತಾರ್ಥವುಳ್ಳ ಮತ್ತು ನಿರುತ್ತರವಾ

ದ ಭಾಷಣವನ್ನು ಕೇಳಿ, ಸಭಿಕರೆಲ್ಲರೂ ಸೈ ಸೈ ಎಂದು ನುಡಿದು ಕರತಾಡನಂಗೈದರು.

*ಬರ್ಲಿನ್ ಪಟ್ಟಣದಲ್ಲಿ ನೆರೆದ ರಾಷ್ಟ್ರೀಯ ಸಭೆಯು, ೧೮೭೮, ಜೂನ ೩೦.*

ಇತ್ತ ಈ ಸಂಗತಿಗಳು ನಡೆದಿರಲು, ಅತ್ತ ಜರ್ಮನಿಯ ಬಾದಶಹನ ಮುಖ್ಯ ಮಂತ್ರಿಯಾದ (Prince Bismark)ಪ್ರಿನ್ಸ್ ಬಿಸ್ಮಾರ್ಕನು, 'ಯುರೋಪಖಂಡದ ಶಾಂತತೆಗೆ ಭಂಗ ಬರುವ ಲಕ್ಷಣವು ಈಗ ಸ್ಪಷ್ಟವಾಗಿ ತೋರಹತ್ತಿದೆ; ಅದುಕಾರಣ ಈ ಖಂಡದೊಳಗಿನ ಎಲ್ಲ ರಾಷ್ಟ್ರಗಳ ಪ್ರತಿನಿಧಿಗಳು ಒಂದು ಸ್ಥಳದಲ್ಲಿ ನೆರೆದು, ಚೆನ್ನಾಗಿ ವಿಚಾರ ಮಾಡಿ, ಈ ಶಾಂತತೆಯನ್ನು ಕಾಪಾಡಿಕೊಳ್ಳುವ ಉಪಾಯವನ್ನು ಸರ್ವಾನುಮತದಿಂದ ಹುಡುಕಿ, ಅದಕ್ಕೆ ಅನುಗುಣವಾದ ಕೆಲವು ನಿಯಮಗಳನ್ನು ಮಾಡಿ, ಅವುಗಳಂತೆ ಎಲ್ಲರೂ ವರ್ತಿಸುವದು ಅವಶ್ಯವುಂಟೆಂದು ನಾನು ಎಣಿಸುತ್ತೇನೆ. ಒಂದು ವೇಳೆ ನೀವು ಇದಕ್ಕೆ ಒಪ್ಪಿದರೆ, ಆ ಸಭೆ ನೆರೆಸತಕ್ಕ ಸ್ಥಳವನ್ನೂ ಅದರ ಅಧ್ಯಕ್ಷಸ್ಥಾನಕ್ಕೆ ತಕ್ಕವರಾದವರ ಹೆಸರನ್ನೂ ದಯವಿಟ್ಟು ತಿಳಿಸಬೇಕು' ಎಂಬ ಅಭಿಪ್ರಾಯದ ಸೂಚನಾ ಪತ್ರವನ್ನು ಮುದ್ರಿಸಿ, ಅದರ ಪ್ರತಿಗಳನ್ನು ಎಲ್ಲ ರಾಷ್ಟ್ರಗಳಿಗೂ ಕಳುಹಿಸಿದನು. ಆ ಕಾಲದಲ್ಲಿ ಪ್ರಿನ್ಸ್ ಬಿಸ್ಮಾರ್ಕನ ವರ್ಚಸ್ಸು ಯುರೋಪಖಂಡದಲ್ಲಿ ವಿಶೇಷವಾಗಿದ್ದದರಿಂದ, ಅವನ ಈ ಸೂಚನೆಯನ್ನು ಅಲ್ಲಗಳೆಯುವ ಧೈರ್ಯವು ಯಾರಿಗೂ ಆಗಲಿಲ್ಲ. ಆದರೂ ಅವರು ಅವನ ಸೂಚನೆಯ ಬಗ್ಗೆ ಎಷ್ಟೋ ವಾದವಿವಾದಗಳನ್ನು ನಡಿಸಿ, ಕಟ್ಟಕಡೆಗೆ ಅವನ ಮಾತಿಗೆ ಒಪ್ಪಿ, ಆ ಸಭೆಯನ್ನು ಸನ್ ೧೮೭೮ ನೆಯ ಇಸವಿಯ ಜೂನ ತಿಂಗಳಿನ ೩೦ ನೆಯ ತಾರೀಖಿನ ದಿವಸ ಬರ್ಲಿನ್ ಪಟ್ಟಣದಲ್ಲಿ ನೆರೆಸಬೇಕೆಂತಲೂ ಅದರ ಅಧ್ಯಕ್ಷಸ್ಥಾನವನ್ನು ಅವನೇ (ಪ್ರಿನ್ಸ್ ಬಿಸ್ಮಾರ್ಕನೇ) ಸ್ವೀಕರಿಸಬೇಕೆಂತಲೂ ಸರ್ವಾನುಮತದಿಂದ ನಿರ್ಣಯಿಸಿ ಸಭೆಯಲ್ಲಿ ಕೆಳಗಿನ ವಿಷಯಗಳನ್ನು ಚರ್ಚಿಸಬೇಕೆಂದು ಗೊತ್ತು ಮಾಡಿದರು.

೧. ಹೆಸರಿಗೆ ಮಾತ್ರ ತುರ್ಕಸ್ಥಾನದ ಆಡಳಿತಕ್ಕೊಳಪಟ್ಟಿರುವ ಪ್ರಾಂತಗಳ ಸ್ಥಿತಿಯನ್ನು ಕುರಿತು ವಿಚಾರಿಸುವದು.

೨. ಸಂಪೂರ್ಣವಾಗಿ ತುರ್ಕಸ್ಥಾನದ ಅಧಿಕಾರಕ್ಕೊಳಪಟ್ಟ ಪ್ರಾಂತಗಳಲ್ಲಿ ವಾಸಿಸುವ ಪರಧರ್ಮದ ಮತ್ತು ಪರದೇಶಗಳ ಜನರ ವಿಷಯವಾಗಿ ವಿಚಾರ ಮಾಡುವದು.

೩. ಬೆಳೆಯುತ್ತ ನಡೆದಿರುವ ಗ್ರೀಸ ದೇಶದ ಮೇರೆಗಳನ್ನು ಗೊತ್ತು ಪಡಿಸುವದು.

೪. ತುರ್ಕಸ್ಥಾನದ ಆಡಳಿತಕ್ಕೆ ಒಳಪಟ್ಟಿರುವ ಗ್ರೀಕ ಜನರ ವಿಷಯವಾಗಿ ವಿಚಾರ ಮಾಡುವದು.

೫. ಆಸಿಯಾಖಂಡದೊಳಗಿರುವ ತುರ್ಕಸ್ಥಾನದ ನಾಡುಗಳ ಬಗ್ಗೆ ವಿಚಾರ ಮಾಡುವದು.

ಮೇಲಿನ ವಿಷಯುಗಳ ಮುಖ್ಯ ಉದ್ದೇಶವು ಯುರೋಪಖಂಡದ ಆಗ್ನೇಯ ದಿಕ್ಕಿನಲ್ಲಿದ್ದ ಕ್ರಿಸ್ತೀ ಪ್ರಜೆಗಳ ಸುರಕ್ಷಿತೆಯನ್ನು ಹೆಚ್ಚಿಸುವದೂ ಅವರನ್ನು ಊರ್ಜಿತ ಸ್ಥಿತಿಗೆ ತರುವದೂ ಆಗಿತ್ತು.

ನೇಮಕವಾದ ಮೇರೆಗೆ ಈ ಸಭೆಯು ಬರ್ಲಿನ್ ಪಟ್ಟಣದಲ್ಲಿ ಕೂಡಿತು. ಪ್ರಿನ್ಸ್ ಬಿಸ್ಮಾರ್ಕನು ಆ ಪಟ್ಟಣದೊಳಗಿನ ಒಂದು ಮಂದಿರದಲ್ಲಿ ಇಳಿದುಕೊಂಡಿದ್ದನು. ಅದೇ ಮಂದಿರದಲ್ಲಿ ಸಭೆಯು ನೆರೆಯಿತು. ಈ ಸಭೆಗೆ ಇಂಗ್ಲಂಡದ ಮುಖ್ಯ ಮಂತ್ರಿಯಾದ ಲಾರ್ಡ ಬೀಕನ್ಸಫೀಲ್ಡನು ಪ್ರತಿನಿಧಿಯಾಗಿ ಹೋಗಿದ್ದನು. ಅವನನ್ನು ಲಾರ್ಡ ಸಾಲಿಸಬರಿಯೂ ಹಿಂಬಾಲಿಸಿದ್ದನು. ಈ ಉಭಯತರು ಇಂಗ್ಲಂಡದಿಂದ ಆಸ್ಟ್ರಿಯಾಕ್ಕೆ ಹೋಗುವಾಗ್ಗೆ, ದಾರಿಯಲ್ಲಿ ಎಲ್ಲ ದೇಶದವರು ಇವರಿಗೆ ಬಹುಮಾನಗಳನ್ನು ಕೊಟ್ಟರು. ಪಾರ್ಲಮೆಂಟಿನ ಕೆಲಸಗಳು ನಡೆದಿರುವ ಸಮಯದಲ್ಲಿ ಮುಖ್ಯ ಮಂತ್ರಿಯು ಪರದೇಶಗಳಿಗೆ ಹೋಗಕೂಡದೆಂಬ ನಿಯಮವು ಇಂಗ್ಲಂಡದಲ್ಲುಂಟು. ಇದನ್ನು ಲಾರ್ಡ ಬೀಕನ್ಸಫೀಲ್ಡನು ಈ ಹೊತ್ತಿಗೆ ಮುರಿದನು. ಬರ್ಲಿನ್ನಿನ ಸಭೆಯಲ್ಲಿ ಮೇಲೆ ಹೇಳಲ್ಪಟ್ಟ ವಿಷಯುಗಳ ಬಗ್ಗೆ ಚರ್ಚೆಗಳು ನಡೆದವು. ಅವುಗಳೊಂದಿಗೆ ಬಲ್ಗೇರಿಯಾದ ಪ್ರಕರಣವೂ ಹೊರಟಿತು. ಆದರೆ ಈ ಪ್ರಕರಣದ ವಿಷಯವಾಗಿ ಗ್ಲ್ಯಾಡ್ಸ್ಟನ್ನನು ಬರೆದ ಲೇಖಗಳನ್ನು ಎಲ್ಲ ಸಭಾಸದರು ಈ ಮೊದಲೇ ಓದಿದ್ದರು; ಮತ್ತು ಈ ವಿಷಯದ ಮೇಲೆ ಅವನು ಮಾಡಿದ ಭಾಷಣಗಳನ್ನು ಅವರೊಳಗಿನ ಬಹು ಜನರು ಕೇಳಿದ್ದರು. ಇವುಗಳನ್ನು ಓದಿದವರ ಮತ್ತು ಕೇಳಿದವರ ಮನಸಿನಲ್ಲಿ ಬಲ್ಗೇರಿಯಾ ಪ್ರಾಂತದಲ್ಲಿ ನಡೆದಿರುವ ಅನ್ಯಾಯಕತನವನ್ನು ಒಮ್ಮೆಲೆ ನಿಲ್ಲಿಸಿ ಬಿಡಬೇಕೆಂದು ಬಂದಿತ್ತು. ಅದು ಕಾರಣ ಈ ವಿಷಯದ ಬಗೆ ಸಭೆಯವರು ವಿಶೇಷ ಚರ್ಚೆ ಮಾಡಿ ಸರ್ವಾನುಮತದಿಂದ ನಿರ್ಣಯಿಸಿದ್ದೇನಂದರೆ:—೧. ಬಲ್ಗೇರಿಯಾ ಪ್ರಾಂತವು ಇನ್ನು ಮುಂದೆ ಒಂದು ಸ್ವತಂತ್ರ ರಾಜ್ಯವೆಂದು ಮತ್ತು ಅದು ತುರ್ಕಸ್ಥಾನದ ಸುಲ್ತಾನನ ಮಾಂಡಲಿಕ ರಾಜ್ಯಗಳಲ್ಲಿ ಒಂದೆಂದು ಎಣಿಸಲ್ಪಡಬೇಕು. ೨. ಅಲ್ಲಿಯ ಅರಸನು ಕ್ರಿಸ್ತೀ ಧರ್ಮದವನಾಗಿರತಕ್ಕದ್ದು, ಅವನು ಸ್ವತಂತ್ರ ಸೈನ್ಯವನ್ನು ಇಟ್ಟುಕೊಳ್ಳಲು ಅಡ್ಡಿ ಇಲ್ಲ. ೩. ಬಲ್ಗೇರಿಯಾದ ಅರಸನನ್ನು ಆರಿಸಿಕೊಳ್ಳುವ ಅಧಿಕಾರವು ಅಲ್ಲಿಯ ಪ್ರಜೆಗಳಿಗುಂಟು; ಆದರೆ ಆ ಆಯುವಿಕೆಗೆ ತುರ್ಕಸ್ಥಾನದ ಸುಲ್ತಾನನ ಒಪ್ಪಿಗೆಯೂ ಆ ಒಪ್ಪಿಗೆಗೆ ಯುರೋಪಖಂಡದೊಳಗಿನ ಅರಸರ ಸಮ್ಮತಿಗಳೂ ಬೇಕು. ೪. ಯುರೋಪಖಂಡದೊಳಗಿನ ರಾಜ್ಯಗಳನ್ನು ಆಳುತ್ತಿರುವ ಅರಸು ಮನೆತನಗಳಿಗೆ ಸೇರಿ

ದವನನ್ನು ಮಾತ್ರ ಅವರು ಆರಿಸಿಕೊಳ್ಳಬಾರದು. ಈ ರೀತಿಯಾಗಿ ಬಲ್ಗೇರಿಯಾದ ಪ್ರಕರಣವು ಸಮಾಪ್ತಿಯಾಯಿತು. ಆ ಮೇಲೆ ಅಲ್ಲಿಯ ಪ್ರಜೆಗಳು ಸ್ವಸ್ಥಚಿತ್ತದಿಂದ ತಮ್ಮ ತಮ್ಮ ಉದ್ಯೋಗ ವ್ಯವಹಾರಗಳನ್ನು ಮಾಡುತ್ತ, ಆನಂದದಿಂದ ಕಾಲಕಳೆಯಲಾರಂಭಿಸಿದರು. ಈ ಶ್ರೇಯಸ್ಸಿಗೆ ಗ್ಲ್ಯಾಡ್‌ಸ್ಟನ್ನನು ವಿಶೇಷ ಪಾತ್ರನಾಗಿರುವನು.

ಈ ಸಭೆಯಲ್ಲಿ ಇಂಗ್ಲಿಷ್ ರಾಷ್ಟ್ರಕ್ಕೆ ಭೂಷಣಪ್ರದವಾದದ್ದೊಂದು ಸಂಗತಿಯು ವರ್ತಿಸಿತು. ಅದೇನೆಂದರೆ:—ಈ ಮಾದರಿಯ ರಾಷ್ಟ್ರೀಯ ಸಭೆಗಳಲ್ಲಿ ಆರಂಭದಿಂದ ಕಡೆಯತನಕ ಫ್ರೆಂಚ್ ಭಾಷೆಯನ್ನು ಮಾತನಾಡುವ ಸಂಪ್ರದಾಯವಿತ್ತು. ಆದರೆ ಈ ಸಮಯದಲ್ಲಿ ಸಭೆಯ ಅಧ್ಯಕ್ಷನಾದ ಪ್ರಿನ್ಸ್ ಬಿಸ್ಮಾರ್ಕನು ಇಂಗ್ಲಿಷ್ ಭಾಷೆಯಲ್ಲಿ ತನ್ನ ಸ್ವಾಗತ ಭಾಷಣ ಮಾಡಿದನು. ಲಾರ್ಡ್ ಬೀಕನ್ಸಫೀಲ್ಡನಿಗೆ ಫ್ರೆಂಚ್ ಭಾಷೆಯ ಜ್ಞಾನವು ಚೆನ್ನಾಗಿ ಇಲ್ಲದ್ದರಿಂದ, ತಾನು ನುಡಿದದ್ದು ಅವನಿಗೆ ಸಂಪೂರ್ಣವಾಗಿ ತಿಳಿಯಬೇಕೆಂಬಪೇಕ್ಷೆಯಿಂದ ಅಧ್ಯಕ್ಷನು ಇಂಗ್ಲಿಷ್ ಭಾಷೆಯಲ್ಲಿ ಮಾತನಾಡಿರಬಹುದೆಂದು ಬಹು ಜನರು ಗ್ರಹಿಸಿದರು. ಅದು ಹೇಗೇ ಇರಲಿ, ಈ ಸಂಗತಿಯಿಂದ ಇಂಗ್ಲಂಡವು ಗೌರವತ್ವವನ್ನು ಪಡೆಯಿತೆಂಬಲ್ಲಿ ಸಂಶಯವಿಲ್ಲ. ಸಭೆಯ ಕೆಲಸಗಳು ತೀರಿದ ಬಳಿಕ ಎಲ್ಲರು ತಮ್ಮ ತಮ್ಮ ದೇಶಗಳಿಗೆ ತಿರುಗಿ ಹೋದಂತೆ, ಲಾರ್ಡ್ ಬೀಕನ್ಸಫೀಲ್ಡನೂ ಲಾರ್ಡ್ ಸಾಲಿಸಬರಿಯೊಡನೆ ಇಂಗ್ಲಂಡಕ್ಕೆ ತಿರುಗಿ ಬಂದನು. ಈ ಸಮಯದಲ್ಲಿ ಲಂಡನ್ ಪಟ್ಟಣದವರು ಅವನನ್ನು ಬಗೆಬಗೆಯಿಂದ ಸತ್ಕರಿಸಿದರು. ಇದನ್ನು ಕಂಡು, ಸ್ವತಃ ಲಾರ್ಡ್ ಬೀಕನ್ಸಫೀಲ್ಡನು 'ನಾನು ಈವೊತ್ತಿಗೆ ಕೃತಕೃತ್ಯನಾದೆನು' ಎಂದು ಎಣಿಸಿರಬಹುದು. ಪಾರ್ಲಮೆಂಟಿನ ಮಂದಿರದ ಮುಂದೆ ನೆರೆದ ಸಾವಿರಾರು ಜನರನ್ನು ನೋಡಿ, ಅವನು ಉತ್ತಮವಾದದ್ದೊಂದು ಭಾಷಣ ಮಾಡಿದನು. ಅವನು ಅದರಲ್ಲಿ "ನಾವು ಬರ್ಲಿನ್ ಪಟ್ಟಣದಿಂದ ಶಾಂತತೆಯನ್ನೂ ಸನ್ಮಾನಗಳನ್ನೂ ತಂದಿದ್ದೇವೆ" ಎಂದು ಹೇಳಿದನು. ಈ ನುಡಿಯು ಅಕ್ಷರಶಃ ನಿಜವಿತ್ತು. ಯಾಕೆಂದರೆ ಆ ಮಹಾ ಸಭೆಯಲ್ಲಿ ಲಾರ್ಡ್ ಬೀಕನ್ಸಫೀಲ್ಡನ ನುಡಿಗಳಿಗೆ ಮನ್ನಣೆ ಸಿಕ್ಕಷ್ಟು ಮತ್ತಾರ ನುಡಿಗಳಿಗೂ ಸಿಕ್ಕಿದ್ದಿಲ್ಲ. ಇಷ್ಟು ಮನ್ನಣೆಯನ್ನು ಅವನು ಹಿಂದಕ್ಕೆ ಎಂದೂ ಹೊಂದಿದ್ದಿಲ್ಲ. 'ರಾಜಕಾರ್ಯಗಳಲ್ಲಿ ಪ್ರಿನ್ಸ್ ಬಿಸ್ಮಾರ್ಕನ ತರುವಾಯ ಲಾರ್ಡ್ ಬೀಕನ್ಸಫೀಲ್ಡನೇ' ಎಂಬ ಉದ್ಗಾರಗಳು ಎಲ್ಲರ ಬಾಯಿಂದ ಹೊರಟದ್ದವು. ಇದಲ್ಲದೆ 'ಬರ್ಲಿನ್ನದ ಸಭೆಗೆ ಬಂದಿರುವ ರಾಜಕಾರ್ಯ ಧುರಂಧರರಲ್ಲಿ ಮಿಕ್ಕಿದವರು ಯಾರು?' ಎಂದು ಒಬ್ಬನು ಪ್ರಿನ್ಸ್ ಬಿಸ್ಮಾರ್ಕನನ್ನು ಕೇಳಿದಾಗ್ಗೆ, ಅವನು ಅದಕ್ಕೆ ಪ್ರತ್ಯುತ್ತರವಾಗಿ 'ಇವರಲ್ಲಿ ಮಿಕ್ಕಿದವನು ಯಾರೆಂಬದನ್ನು ನಾನು ಹೇಳುವದಿಲ್ಲ; ಆದರೆ ಲಾ

ರ್ಡ್ ಬೀಕನ್ಸಫೀಲ್ಡನು ಆ ವಿಕ್ಕಿದವನ ತರುವಾಯದವನಾಗಿರುವನೆಂದು ನಾನು ಸ್ಪಷ್ಟವಾಗಿ ಹೇಳುತ್ತೇನೆ" ಎಂದು ನುಡಿದಿದ್ದನು.

ಗ್ಲ್ಯಾಡ್‌ಸ್ಟನ್ನನು ಎರಡನೆಯುಸಾರೆ ಇಂಗ್ಲಂಡದ ಮುಖ್ಯ ಮಂತ್ರಿಯಾದದ್ದು, ೧೮೮೦ ಎಪ್ರಿಲ ೨೩.

ಮುಂದೆ ಕೆಲವು ದಿವಸಗಳಲ್ಲಿಯೇ ಪಾರ್ಲಮೆಂಟಿನ ಸಭಾಸದರನ್ನು ಆರಿಸಿಕೊಳ್ಳುವ ಕೆಲಸವು ನಡೆಯಿತು. ಈ ಮೊದಲೇ ಗ್ಲ್ಯಾಡ್‌ಸ್ಟನ್ನನು ತನ್ನ ದೀರ್ಘಪ್ರಯತ್ನಗಳಿಂದ ಜನರ ಮನಸ್ಸುಗಳನ್ನು ಲಿಬರಲ್ ಪಕ್ಷದ ಕಡೆಗೆ ತಿರುಗಿಸಿಕೊಂಡದ್ದರಿಂದ, ಈ ಆಯುಯಿಕೆಯಲ್ಲಿ ಲಿಬರಲ್ ಪಕ್ಷದ ಸಭಾಸದರು ಹೆಚ್ಚು ಆರಿಸಲ್ಪಟ್ಟರು. ಇದರಿಂದ ಪಾರ್ಲಮೆಂಟ ಸಭೆಯೊಳಗಿನ ಲಾರ್ಡ್ ಬೀಕನ್ಸಫೀಲ್ಡನ ಪಕ್ಷವು ತೀರ ನಿರ್ಬಲವಾಯಿತು. ಇದನ್ನು ಕಂಡು, ಅವನು ಹೊಸ ಪಾರ್ಲಮೆಂಟು ನೆರೆಯುವ ಪೂರ್ವದಲ್ಲಿಯೇ ಬಹು ಜಾಣತನದಿಂದ ತನ್ನ ಮುಖ್ಯ ಮಂತ್ರಿಯ ಸ್ಥಳವನ್ನು ಬಿಟ್ಟುಕೊಟ್ಟನು. ಆ ಮೇಲೆ ಮಹಾರಾಣೀ ಸಾಹೇಬರು ಪದ್ಧತಿಯಂತೆ ಲಾರ್ಡ್ ಹಾರ್ಟಿಂಗಟನ್ನನನ್ನು ಕರಿಸಿಕೊಂಡು, ಅವನಿಗೆ ಮುಖ್ಯ ಮಂತ್ರಿಯ ಸ್ಥಳವನ್ನು ಸ್ವೀಕರಿಸಬೇಕೆಂದು ಹೇಳಿದರು. ಅದಕ್ಕೆ ಅವನು, ಈ ವಿಷಯವಾಗಿ ಲಾರ್ಡ್ ಗ್ರಾನ್‌ವ್ಹಿಲ್ಲನನ್ನು ಕೇಳಿಕೊಂಡು ಬಂದು, ತಮಗೆ ತಿಳಿಸುವೆನೆಂದು ಹೇಳಿ ಹೊರಟುಹೋದನು. ಆ ಮೇಲೆ ಅವನೂ ಲಾರ್ಡ್ ಗ್ರಾನ್‌ವ್ಹಿಲ್ಲನೂ ಕೂಡಿ ಎಪ್ರಿಲ ೨೩ನೆಯ ತಾರೀಖಿನ ದಿವಸ ಮಹಾರಾಣೀಸಾಹೇಬರ ಬಳಿಗೆ ಹೋಗಿ, "ಈ ಸಮಯದಲ್ಲಿ ತಮ್ಮ ರಾಜ್ಯದಲ್ಲೆಲ್ಲ ಗ್ಲ್ಯಾಡ್‌ಸ್ಟನ್ ದೊರೆಗಳ ಹೆಸರು ಕೀರ್ತಿಗೊಂಡಿದೆ; ಗ್ಲ್ಯಾಡ್‌ಸ್ಟನ್ ದೊರೆಗಳೇ ತಮ್ಮ ಮುಂದಾಳಾಗಬೇಕೆಂದು ಲಿಬರಲ್ ಪಕ್ಷದವರು ಹಾರೈಸುತ್ತಾರೆ; ಅದು ಕಾರಣ ಮುಖ್ಯ ಮಂತ್ರಿಗಳು ಅವರೇ ಆಗುವದು ಎಲ್ಲ ಮಾತಿನಿಂದಲೂ ಹಿತಕರವು" ಎಂದು ಅವರಿಗೆ ವಿಜ್ಞಾಪನೆ ಮಾಡಿಕೊಂಡರು. ಆ ಮೇಲೆ ಅವರೀರ್ವರು ಮಹಾರಾಣೀಸಾಹೇಬರ ಅಪ್ಪಣೆಯನ್ನು ಹೊಂದಿ, ತಿರುಗಿ ಬಂದು, ಸಾಯಂಕಾಲದ ೩ ಗಂಟೆಗೆ ಗ್ಲ್ಯಾಡ್‌ಸ್ಟನ್ನನಿಗೆ ಭೆಟ್ಟಿಯಾಗಿ, ರಾಣೀಸಾಹೇಬರೊಂದಿಗೆ ನಡೆದ ಸಂಗತಿಗಳನ್ನೆಲ್ಲ ಅವನಿಗೆ ತಿಳಿಸಿದರು. ಅದೇ ದಿವಸ ಸಾಯಂಕಾಲದಲ್ಲಿ ರಾಜ್ಞಿಯವರು ಗ್ಲ್ಯಾಡ್‌ಸ್ಟನ್ನನನ್ನು ತಮ್ಮ ಬಳಿಗೆ ಕರಿಸಿಕೊಂಡು, ಅವನಿಗೆ ಮುಖ್ಯ ಮಂತ್ರಿಯ ಉದ್ಯೋಗವನ್ನು ಕೊಟ್ಟರು. ಈ ಮೇರೆಗೆ ಅವನು ಎರಡನೆಯುಸಾರೆ ಇಂಗ್ಲಂಡದ ಮುಖ್ಯಮಂತ್ರಿಯಾದನು. ಮುಖ್ಯ ಮಂತ್ರಿಯ ಸ್ಥಲವು ಪುನಃ ಅವನಿಗೆ ದೊರೆಯಲಿಕ್ಕೆ ಅವನು ಬಲ್ಗೇರಿಯಾದ ವಿಷಯವಾಗಿ ಮಾಡಿದ ದೀರ್ಘಪ್ರಯತ್ನಗಳು ವಿಶೇಷ ಕಾರಣವಾದವೆಂದು ಹೇಳಲು ಅಡ್ಡಿ ಇಲ್ಲ.

## ೫ನೆಯ ಅಧ್ಯಾಯ.

### ಗ್ಲ್ಯಾಡ್‌ಸ್ಟನ್ನನು ಐರ್ಲಂಡದ ಹಿತಕ್ಕಾಗಿ ಮಾಡಿದ ದೀರ್ಘೋದ್ಯೋಗಗಳು.



ಭವೋಹಿ ಲೋಕಾಭ್ಯುದಯಾಯ ತಾದೃಶಾಮ್ ।
(ರಘುವಂಶ)

ಇಂಥ ಪುರುಷರ ಜನ್ಮವು ದೇಶಕಲ್ಯಾಣಕ್ಕಾಗಿ ಆಗುತ್ತಿರುತ್ತದೆ.



ಐರ್ಲಂಡ್-ನಡುಗಡ್ಡೆಯು ಗ್ರೇಟ್‌ಬ್ರಿಟನ್ನದ ಪಶ್ಚಿಮ ದಿಕ್ಕಿನಲ್ಲಿರುತ್ತದೆ. ಈ ನಡುಗಡ್ಡೆಯ ಪೂರ್ವ ಇತಿಹಾಸವು ಬಹಳೇ ದೊಡ್ಡದಾಗಿದೆ. ಆದದ್ದರಿಂದ ಅದನ್ನೆಲ್ಲ ಇಲ್ಲಿ ಹೇಳದೆ, ಸನ್ ೧೮೦೦ ನೆಯ ಇಸವಿಯಲ್ಲಿ ಅಲ್ಲಿಯ ಪಾರ್ಲಮೆಂಟನ್ನು ಗ್ರೇಟ್‌ಬ್ರಿಟನ್ನದ ಪಾರ್ಲಮೆಂಟಿಗೆ ಕೂಡಿಸಿ, ಒಂದೇ ಪಾರ್ಲಮೆಂಟ ನ್ನಾಗಿ ಮಾಡಿದಂದಿನಿಂದು ಐರ್ಲಂಡವು ಗ್ರೇಟ್‌ಬ್ರಿಟನ್ನದ ಆಳಿಕೆಗೆ ತೀರ ಬೇಸರಗೊಂಡಿದ್ದ ಕಾರಣಗಳನ್ನು ಮಾತ್ರ ನಾವು ಇಲ್ಲಿ ಸಂಕ್ಷೇಪವಾಗಿ ಹೇಳುವೆವು.

ಐರ್ಲಂಡದ ಧರ್ಮಖಾತೆಯ ಸ್ಥಿತಿಯು.

ಐರ್ಲಂಡದ ಮಹತ್ವದ ಮೂರು ಖಾತೆಗಳಲ್ಲಿಯೂ ಅಂದರೆ ಧರ್ಮಖಾತೆಯಲ್ಲಿ, ವ್ಯವಸಾಯಖಾತೆಯಲ್ಲಿ, ಮತ್ತು ವಿದ್ಯಾಖಾತೆಯಲ್ಲಿ ತೀರ ಅನ್ಯಾಯವು ನಡೆಯುತ್ತಿತ್ತು. ಧರ್ಮಖಾತೆಯ ಸ್ಥಿತಿಯು ಹೇಗಿತ್ತೆಂದರೆ— ಐರ್ಲಂಡದ ಪ್ರಜೆಗಳಲ್ಲಿ ಸ್ವಲ್ಪ ಹೆಚ್ಚು ಕಡಿಮೆ ೩/೪ ಜನರು ರೋಮನ್ ಕ್ಯಾಥೋಲಿಕ್ ಪಂಥಕ್ಕೂ ಉಳಿದ ೧/೪ ಜನರು ಪ್ರಾಟೆಸ್ಟಂಟ್ ಪಂಥಕ್ಕೂ ಸೇರಿದ್ದರು. ಹೀಗಿದ್ದರೂ ಇಂಗ್ಲಿಷ್ ಸರಕಾರದವರು ಪ್ರಾಟೆಸ್ಟಂಟ್* ಪಂಥದ ದೊಡ್ಡದೊಂದು ಧರ್ಮಖಾತೆಯನ್ನು ಅಲ್ಲಿಟ್ಟು, ಅದರ ಸಲುವಾಗಿ ಲಕ್ಷಗಟ್ಟಲೆ ರೂಪಾಯಿಗಳನ್ನು ಆ ನಡುಗಡ್ಡೆಯ ಆದಾಯದೊಳಗಿಂದ ವೆಚ್ಚ ಮಾಡುತ್ತಿದ್ದರು; ಅಂದರೆ ಅವರು ಆ ಹಣವನ್ನು ಕೊಟ್ಟಂಥ ಕ್ಯಾಥೋಲಿಕ್ ಪಂಥದವರಿಗೆ ಧರ್ಮ ಸಂಬಂಧದ ಪ್ರಯೋಜನವನ್ನೇನು ಮಾಡಿಕೊಡದೆ, ಆ ದ್ರವ್ಯವನ್ನು ಪ್ರಾಟೆಸ್ಟಂಟ್ ಪಂಥದವರ ಹಿತಕ್ಕಾಗಿ ಉಪಯೋಗಿಸುತ್ತಿದ್ದರು. ಈ ಅನ್ಯಾಯವನ್ನು ಅಲ್ಲಿಯ ಕ್ಯಾಥೋಲಿಕ್ ಪಂಥದವರು ನೋಡಿ ಸೈರಿಸದೆ, ಇದರ ವಿರುದ್ಧವಾಗಿ ಯಾವಾಗಲು ಗುಣುಗುಟ್ಟುತ್ತಲೂ, ಮೇಲಿಂದ ಮೇಲೆ ಸರಕಾರದವರಿಗೆ ಅರ್ಜಿಗಳನ್ನು ಕಳುಹಿಸುತ್ತಲೂ, ಹೊತ್ತು ಸಾಧಿಸಿ ಈ ಅ

* ಇಂಗ್ಲಿಷ ಸರಕಾರವು ಪ್ರಾಟೆಸ್ಟಂಟ್ ಪಂಥದ್ದಾಗಿದೆ.

ನ್ಯಾಯದ ವಿಷಯವಾಗಿ ಅವರ ಮುಂದೆ ಸ್ಪಷ್ಟವಾಗಿ ನುಡಿಯುತ್ತಲೂ ಇದ್ದರು.
ಇಷ್ಟಾದರೂ ಅವುಗಳ ಕಡೆಗೆ ದೊರೆತನದವರು ಏನೂ ಲಕ್ಷ್ಯಗೊಡುತ್ತಿದ್ದಿಲ್ಲ. ಇದ
ರಿಂದ ಆ ದೊರೆತನದವರಿಗೂ ಐರ್ಲಂಡದ ನಿವಾಸಿಗಳಿಗೂ ಬೇಸರು ಹುಟ್ಟಿತ್ತು.

ಐರ್ಲಂಡದ ವ್ಯವಸಾಯ ಖಾತೆಯ ಸ್ಥಿತಿಯು.

ಇದೇ ಮೇರೆಗೆ ಐರ್ಲಂಡದ ವ್ಯವಸಾಯ ಖಾತೆಯಲ್ಲಿಯೂ ಹೇಳಕೂಡ
ದಷ್ಟು ಅನ್ಯಾಯಗಳು ನಡೆಯುತ್ತಿದ್ದವು. ಐರ್ಲಂಡ
ದ ಮುಖ್ಯ ಉದ್ಯೋಗವು ಒಕ್ಕಲತನವು. ಅಲ್ಲಿ ದೊಡ್ಡ
ದೊಡ್ಡ ಜಮೀನುದಾರರೇ ಹೆಚ್ಚಾಗಿದ್ದರು. ಅವರು ತ
ಮ್ಮ ಭೂಮಿಗಳನ್ನು ಪ್ರತಿವರ್ಷಕ್ಕೆ ಇಂತಿಷ್ಟು ಹಣ ಕೊಡಬೇಕೆಂಬ ಕರಾರಿನಿಂದ
ರೈತರಿಗೆ ಕೊಡುತ್ತಿದ್ದರು. ಒಕ್ಕಲತನವು ಆ ದೇಶದಲ್ಲಿ ಉದರನಿರ್ವಾಹದ ಮು
ಖ್ಯ ಸಾಧನವಾಗಿದ್ದುದರಿಂದ ಅಲ್ಲಿಯ ರೈತರು ಹೊಲಗಳನ್ನು ಹಿಡಿಯಲು ಮೇಲಾ
ಡುತ್ತಿದ್ದರು. ಆದರೆ ವ್ಯವಸಾಯ ಖಾತೆಯ ಸೂತ್ರಗಳೆಲ್ಲ ಜಮೀನುದಾರರ ಕೈಯ
ಲ್ಲಿದ್ದುದರಿಂದ, ಅವರು ಬೇಡಿದಷ್ಟು ಹಣವನ್ನು ರೈತರು ಕೊಟ್ಟು ಅವರ ಹೊಲಗ
ಳನ್ನು ಹಿಡಿಯಬೇಕಾಗುತ್ತಿತ್ತು. ಒಂದು ವೇಳೆ ಅಷ್ಟು ಹಣವನ್ನು ಕೊಡುವದು
ರೈತರ ಮನಸಿಗೆ ಬರದಿದ್ದರೆ, ಅವರು ಹೊಲಗಳ ಹಾದಿಯನ್ನೇ ಬಿಡಬೇಕಾಗುತ್ತಿ
ತ್ತು. ವಾಡಿಕೆಯಾಗಿ, ಜಮೀನುದಾರರು ತಮ್ಮ ಪಡಬಿದ್ದ ಭೂಮಿಗಳನ್ನು ರೈತರಿಗೆ
ಮೊದಲು ಸುಲಭ ಕರಾರುಗಳಿಂದ ಕೊಡುತ್ತಿದ್ದರು. ಆ ಮೇಲೆ ರೈತರು ತಮ್ಮ
ದುಡಿಸಿಂದ ನಟ್ಟು ಕಡಿಸಿ, ನೇಗಿಲು ಹೊಡಿದು ಅವುಗಳನ್ನು ಹಸನು ಮಾಡಿ,
ಬೀಜವನ್ನು ಬಿತ್ತಿ ಪೈರು ಬೆಳಿಸಹತ್ತಿದ್ದನ್ನು ನೋಡಿದ ಕೂಡಲೆ, ಜಮೀನುದಾರ
ರು ಆ ಮೊದಲಿನ ಕರಾರುಗಳನ್ನು ಮುರಿದು, ಎಣಿಕೆದಪ್ಪಿ ಹಣವನ್ನು ಅವರಿಂದ
ಬೇಡಹತ್ತುತ್ತಿದ್ದರು. ಒಂದುವೇಳೆ ರೈತರು ಅಷ್ಟು ಹಣವನ್ನು ಕೊಡದಿದ್ದರೆ, ಜ
ಮೀನುದಾರರು ಅವರ ಶ್ರಮಕ್ಕಾಗಿ ಒಂದು ಕಾಸನ್ನಾದರು ಕೊಡದೆ, ಅವರನ್ನು
ಹೊಲ ಬಿಡಿಸಿ ಹೊರಗೆ ಹಾಕುತ್ತಿದ್ದರು. ಈ ಅನ್ಯಾಯಗಳಲ್ಲಿ ಸರಕಾರದವರು ಕೈ
ಹಾಕುತ್ತಿದ್ದಿಲ್ಲ. ಇದರಿಂದ ಒಕ್ಕಲಿಗರಿಗೆ ಹೊಟ್ಟೆಗಿಲ್ಲದೆ ಸಾಯುವ ಹೊತ್ತು ಬ
ರುತ್ತಿತ್ತು; ಜಮೀನುದಾರರಿಗೂ ಅವರಿಗೂ ಆಗಾಗ್ಗೆ ಜಗಳಗಳಾಗುತ್ತಿದ್ದವು; ಒ
ಮ್ಮೊಮ್ಮೆ ಅವರೊಳಗೆ ಕೈ ಕೈ ಹತ್ತಿ ದೊಡ್ಡ ದೊಡ್ಡ ದಂಗೆಗಳು ಸಹ ಏಳುತ್ತಿ
ದ್ದವು ಇಂಥ ಪ್ರಸಂಗಗಳಲ್ಲಿ ಎಷ್ಟೋ ಸಾರೆ ವ್ಯಾಪಾರ ಉದ್ದಿಮೆಗಳು ಕಟ್ಟಾಗಿ,
ಬಡಜನರು ಗೋಳಾಟಕ್ಕೀಡಾಗುತ್ತಿದ್ದರು. ಆಲ್‌ಸ್ಟರ್‌ ಎಂಬ ಪ್ರಾಂತದಲ್ಲಿ ಮಾ
ತ್ರ ಹೀಗಿದ್ದಿಲ್ಲ. ಅಲ್ಲಿಯ ರೈತರಿಗೆ ಹೊಲಗಳ ಮೇಲೆ ತಕ್ಕಷ್ಟು ಅಧಿಕಾರವಿತ್ತು.
ಅವರು ಗೊತ್ತಾದ ತೆರಿಗೆಯನ್ನು ಜಮೀನುದಾರರಿಗೆ ಕೊಡುತ್ತ ಹೋದರೆ ಅವರ
ನ್ನು ಹೊಲ ಬಿಡಿಸುವ ಅಧಿಕಾರವಾಗಲಿ, ತೆರಿಗೆಯ ಹಣವನ್ನು ಮನಬಂದಂತೆ ಹೆ
ಚ್ಚಿಸುವ ಸ್ವಾತಂತ್ರ್ಯವಾಗಲಿ ಜಮೀನುದಾರರಿಗಿದ್ದಿಲ್ಲ. ಇದಲ್ಲದೆ ರೈತರು ತಾವು

ಹಿಡಿದ ಹೊಲಗಳನ್ನು ಜಮೀನುದಾರರ ಒಪ್ಪಿಗೆಯಿಂದ ಮತ್ತೊಬ್ಬರಿಗೆ ಮಾರಲಿಕ್ಕೂ ಒತ್ತೆ-ಹಾಕಲಿಕ್ಕೂ ಸ್ವತಂತ್ರರಾಗಿದ್ದರು. ಆ ಹೊಸ ರೈತರು ಜಮೀನುದಾರರಿಗೆ ಗೊತ್ತಾದ ತೆರಿಗೆಯನ್ನು ನಿಯಮಿತ ವೇಳೆಗೆ ಕೊಡುತ್ತ ಹೋದರೆ ಜಮೀನುದಾರರು ಬಾಯಿಯೆತ್ತುತ್ತಿದ್ದಿಲ್ಲ. ಒಂದು ವೇಳೆ ಯಾವುದೊಂದು ಕಾರಣದಿಂದ ರೈತನು ತಾನಾಗಿಯೇ ಹೊಲವನ್ನು ಬಿಡುವ ಪ್ರಸಂಗವು ಬಂದರೆ ಮತ್ತು ಸ್ವಂತ ಹಣದಿಂದ ಆ ಹೊಲವನ್ನು ಕಿರ್ದೀ ಮಾಡಿದ್ದರೆ, ಜಮೀನುದಾರನಿಂದ ಅಲ್ಪಸ್ವಲ್ಪ ಹಣವನ್ನು ಸಹ ಪಡೆಯುತ್ತಿದ್ದನು. ಇವೆಲ್ಲ ಕಾರಣಗಳಿಂದ ಅಲ್ಲಿಯ ರೈತರು ಸುಖದಿಂದಲೂ ಸಮಾಧಾನದಿಂದಲೂ ಕಾಲಕಳೆಯುತ್ತಿದ್ದರು. ಅಲ್ಲಿ ವ್ಯಾಪಾರ ಉದ್ದಿಮೆಗಳು ನರೂ ಭರದಿಂದ ನಡೆಯುತ್ತಿದ್ದವು. ಈ ಸ್ಥಿತಿಯು ಐರ್ಲಂಡದ ಉಳಿದ ಪ್ರಾಂತಗಳಲ್ಲಿದ್ದಿಲ್ಲ.

ಐರ್ಲಂಡದ ವ್ಯವಸಾಯ ಖಾತೆಯ ವಿಷಯವಾಗಿ ಗ್ರೇಟ್‌ಬ್ರಿಟನ್ ಮತ್ತು ಐರ್ಲಂಡಗಳ ಜನರಲ್ಲಿ ನಿಕರದ ವಾದವಿವಾದಗಳು ಮೇಲಿಂದಮೇಲೆ ನಡೆಯುತ್ತಿದ್ದವು. ಅವರಲ್ಲಿ ಎರಡು ಪಕ್ಷಗಳಿದ್ದವು. ಒಂದು ಪಕ್ಷದವರು 'ಜಮೀನುದಾರರು ತಮ್ಮ ಭೂಮಿಗಳ ಒಡೆಯರು; ಅವರು ಆ ಭೂಮಿಗಳನ್ನು ತಮ್ಮ ಮನಸು ಬಂದ ರೈತರಿಗೆ ಕೊಡಲಿಕ್ಕೂ ಅವರಿಂದ ಬೇಕಾದಷ್ಟು ಹಣವನ್ನು ತೆಗೆದುಕೊಳ್ಳಲಿಕ್ಕೂ ಬೇಕಾದಾಗ್ಗೆ ಅವರಿಂದ ಅವುಗಳನ್ನು ಕಸುಕೊಳ್ಳಲಿಕ್ಕೂ, ಮನಸಿಗೆ ಬಂದರೆ ಅವುಗಳನ್ನು ಅವರಿಗೆ ತಿರುಗಿ ಕೊಡಲಿಕ್ಕೂ ಪೂರ್ಣ ಸ್ವತಂತ್ರರಾಗಿದ್ದಾರೆ; ಅವರ ಈ ಸ್ವಾತಂತ್ರ್ಯದಲ್ಲಿ ಕೈಹಾಕುವ ಅಧಿಕಾರವು ಸರಕಾರದವರಿಗಾಗಲಿ, ಅವರ ಕಾಯದೆಗಳಿಗಾಗಲಿ ಇರುವದಿಲ್ಲ' ಎಂದು ಹೇಳುತ್ತಿದ್ದರು. ಮತ್ತೊಂದು ಪಕ್ಷದವರು 'ಜಮೀನುದಾರರು ತಮ್ಮ ಭೂಮಿಗಳ ಒಡೆಯರೆಂಬ ಮಾತು ನಿಜವೆ; ಆದರೆ ಅವರ ಒಡೆತನಕ್ಕೆ ಮರ್ಯಾದೆ ಇರುವದು ಅವಶ್ಯವದೆ. ಗಣಿಗಳ, ಕಾರ್ಖಾನೆಗಳ ಮತ್ತು ಲೋಹ ಮಾರ್ಗಗಳ ಒಡೆಯರ ಅಧಿಕಾರಕ್ಕೆ ಮಿತಿ ಇರುವಂತೆ ಮತ್ತು ಅವರು ಸರಕಾರದ ಕೆಲವು ನಿಯಮಗಳಿಗೊಳಗಾಗಿ ನಡೆಯುವಂತೆ ಐರ್ಲಂಡದ ಜಮೀನುದಾರರ ಅಧಿಕಾರಕ್ಕೂ ಮಿತಿ ಇರುವದೂ ಅವರು ಸರಕಾರದ ಕೆಲವು ನಿಯಮಗಳಿಗೆ ಅಂಕಿತರಾಗಿ ನಡೆಯುವದೂ ಅವಶ್ಯವುಂಟು. ಯಾಕೆಂದರೆ, ವ್ಯವಸಾಯ ಖಾತೆಗೂ ಸಮಸ್ತ ಪ್ರಜೆಗಳಿಗೂ ನಿಕಟ ಸಂಬಂಧವಿರುತ್ತದೆ, ಎಂದು ಹೇಳುತ್ತಿದ್ದರು.

ಐರ್ಲಂಡದ ವ್ಯವಸಾಯ ಖಾತೆಯ ಸಂಬಂಧದ ಎರಡು ಪಕ್ಷಗಳು.

ಮೇಲೆ ವಿವರಿಸಿದ ಮೇರೆಗೆ, ಐರ್ಲಂಡದ ವ್ಯವಸಾಯ ಖಾತೆಯ ವಿಷಯವಾ

ಐರ್ಲಂಡದೊಳಗಿದ್ದ ಗೊಂದಲಗಳು.

ಗಿ ರಾಜ್ಯದಲ್ಲಿ ಇಷ್ಟು ನಿಕರದ ವಾದವಿವಾದಗಳಾಗುತ್ತಿದ್ದರೂ ಅದರಲ್ಲಿ ತೀರ ಅನ್ಯಾಯಗಳು ನಡೆಯುತ್ತಿದ್ದರೂ ಅವುಗಳ ಕಡೆಗೆ ದೊರೆತನದವರು ರವಷ್ಟಾದರೂ ಲಕ್ಷ್ಯಗೊಡುತ್ತಿದ್ದಿಲ್ಲ. ಇದನ್ನು ಕಂಡು, ಅಲ್ಲಿಯ ಕೆಲವು ಜನ ಮುಂದಾಳುಗಳು ಸ್ವತಃ ಅವುಗಳನ್ನು ನಿಲ್ಲಿಸುವ ಉದ್ದೇಶದಿಂದ (Land League) ಲ್ಯಾಂಡ್‌ಲೀಗ್ ಎಂಬ ಹೆಸರಿನದೊಂದು ಸಭೆಯನ್ನು ಸ್ಥಾಪಿಸಿದರು. ಇವರಲ್ಲಿ (Parnell) ಪಾರ್ನೆಲ್ಲನೆಂಬ ಗೃಹಸ್ಥನು ಪ್ರಮುಖನಾಗಿದ್ದನು. ಈ ಸಭೆಯು ಸ್ಥಾಪಿಸಲ್ಪಟ್ಟ ಕೆಲವು ದಿವಸಗಳಲ್ಲಿಯೇ ಐರ್ಲಂಡದ ಜನರಲ್ಲಿ ಒಮ್ಮಿಂದೊಮ್ಮೆ ಆವೇಶವು ಹುಟ್ಟಿತು. ಎಷ್ಟೋ ಜನ ತುಂಟರೂ ನಿರುದ್ಯೋಗಿಗಳೂ ಅಲ್ಲಲ್ಲಿ ಸ್ವತಂತ್ರವಾದ ಟೋಳಿಗಳನ್ನು ಮಾಡಿಕೊಂಡು, ಸುತ್ತಲೂ ತಿರುಗಾಡಿ, ರೈತರಿಗೆ 'ನೀವು ಜಮೀನುದಾರರ ನುಡಿಗಳಿಗಂಜಿ ನಿಮ್ಮ ಹೊಲಗಳನ್ನು ಬಿಡಬೇಡಿರಿ; ತೆರಿಗೆಯ ವಿಷಯವಾಗಿ ಸಲ್ಲಿಸಿರುವ ಅರ್ಜಿಗಳ ತೀರ್ಪನ್ನು ನ್ಯಾಯಾಧೀಶರು ಹೇಳುವವರೆಗೆ ಜಮೀನುದಾರರಿಗೆ ತೀರ್ವೆಗಳನ್ನು ಕೊಡಬೇಡಿರಿ; ಜಮೀನುದಾರರು ಏನು ಮಾಡುವರೋ ನೋಡುವಾ; ಬಂದದ್ದಕ್ಕೆ ನಾವಿದ್ದೇವೆ' ಎಂದು ಸಾರಿ ಹೇಳಹತ್ತಿದರು. ಈ ತಲೆತಿರುಗಿದ ಜನರ ಗುಂಪುಗಳಲ್ಲಿ ಮೇಲೆ ಹೇಳಲ್ಪಟ್ಟಿರುವ ಸಭೆಯೊಳಗಿನ ಬಹು ಜನರು ಸೇರಿಕೊಂಡರು. ಈ ಮೇರೆಗೆ ರೈತರಿಗೆ ಬೆನ್ನಾಸರವು ದೊರೆಯಲು, ಅವರು ಜಮೀನುದಾರರನ್ನು ಲೆಕ್ಕಿಸದಂತಾದರು. ಅವರೊಳಗಿನ ಕೆಲವು ಅಂಜುಬುರುಕ ರೈತರು ಅವರ ಮಾತುಗಳಿಗೆ ಕಿವಿಗೊಡದೆ, ಜಮೀನುದಾರರಿಗೆ ಹೊಲಗಳ ರೊಕ್ಕವನ್ನು ಸಲ್ಲಿಸಿದರೆ, ಆ ತುಂಟರು ಅಂಥ ಬಡ ರೈತರ ಮೇಲೆ ಸಿಟ್ಟಿಗೆದ್ದು, ಅವರ ಮನೆಮಾರುಗಳಿಗೆ ಬೆಂಕಿ ಹಚ್ಚುವದಕ್ಕೂ ಅವರ ದನಕರಗಳನ್ನು ಕೊಂದು ಹಾಕುವದಕ್ಕೂ, ಪೇಟೆಯಲ್ಲಿ ಕಾಳು ಕಡಿ ಮುಂತಾದ ಉಪಜೀವನದ ಪದಾರ್ಥಗಳನ್ನು ವರ್ತಕರು ಅವರಿಗೆ ಮಾರಕೊಡದೆಂದು ಪ್ರತಿಬಂಧಿಸುವದಕ್ಕೂ ಹತ್ತಿದರು. ಇದರಿಂದ ನೋಡಿದಲ್ಲೆಲ್ಲ ಡೊಂಬೆಗಳೆದ್ದು, ಹೇಳಕೂಡದಷ್ಟು ಕ್ರೂರ ಕೃತ್ಯಗಳು ನಡೆಯಲಾರಂಭಿಸಿದವು. ಇದನ್ನು ಕಂಡು, ಸರಕಾರದವರು ಆ ಡೊಂಬೆಗಾರರನ್ನು ಹಿಡಿದು, ಏನೂ ವಿಚಾರಣೆ ಮಾಡದೆ, 'ಹೇಬಿಯಸ್ ಕಾರ್ಪಸ್'* ಎಂಬ ಹೆಸರಿನ ಕಟ್ಟಳೆಯ ವಿರುದ್ಧವಾಗಿ ಬಹು ದಿವಸಗಳವರೆಗೆ ಸೆರೆಮನೆಯಲ್ಲಿ ಹಾಕಿಬಿಡಹತ್ತಿದರು. ಆ ಸಭೆಯ ಮುಂದಾಳಾದ ಪಾರ್ನೆಲ್ಲನು ಜನರ ಈ ಅನುಚಿತ ಕೃತ್ಯಗಳನ್ನು ನೋಡಿ ಬಹು ಖಿನ್ನನಾದನು. ಅವನ ಮನಸಿನಲ್ಲಿ ವ್ಯವಸಾಯಖಾತೆಯಲ್ಲಿ ನಡೆದಿದ್ದ ಅನ್ಯಾ

* ೨೪ ತಾಸುಗಳಿಗಿಂತ ಹೆಚ್ಚು ವೇಳೆ ಆರೋಪಿಯನ್ನು ಪ್ರತಿಬಂಧಿಸಕೂಡದೆಂಬ ಕಟ್ಟಳೆ.

ಯಗಳನ್ನು ತಮ್ಮ ಸಭೆಯ ಮುಖಾಂತರವಾಗಿ ಪಾರ್ಲಮೆಂಟ ಸಭೆಯವರ ಮುಂದಿಟ್ಟು, ಅವರಿಂದ ಯೋಗ್ಯಕಾಯದೆಯನ್ನು ಪಡೆದುಕೊಳ್ಳುವದಿತ್ತು. ಆದರೆ ಆ ವೇಳೆಯು ಬರುವಷ್ಟರಲ್ಲಿಯೇ ಈ ಪ್ರಕಾರದ ಗೊಂದಲಗಳಿದ್ದವು. ಅವನು ಸಾಮಾನ್ಯ ಮನುಷ್ಯನಾಗಿದ್ದಿಲ್ಲ. ಅವನು ಪಾರ್ಲಮೆಂಟಿನ ಸಭಾಸದನೂ ಪ್ರಸಿದ್ಧವಾಗ್ಮಿದನೂ ಆಗಿದ್ದನು. ಅವನ ವಿಷಯವಾಗಿ, ಒಂದು ಸಾರೆ ಗ್ಲ್ಯಾಡ್‌ಸ್ಟನ್ನನು "ತನ್ನ ಅಭಿಪ್ರಾಯವನ್ನು ಹೆಚ್ಚಿನ ಒಂದು ಶಬ್ದವನ್ನಾದರೂ ನುಡಿಯದೆ ಸ್ವಲ್ಪದರಲ್ಲಿಯೇ ಸ್ಪಷ್ಟವಾಗಿ ತಿಳಿಸುವ ಶಕ್ತಿಯು ಪಾರ್ನೆಲ್ಲನಿಗುಂಟು" ಎಂದು ಹೇಳಿದ್ದನು. ಭಗೀರಥ ಪ್ರಯತ್ನಮಾಡಿ, ಐರಿಷ್ ಜನರ ವಿಷಯವಾಗಿ ಇಂಗ್ಲಂಡದ ಜನರ ಮನಸಿನಲ್ಲಿ ತಕ್ಕಮಟ್ಟಿಗೆ ಕನಿಕರ ಹುಟ್ಟಿಸಿದವನಾದರೂ ಪಾರ್ನೆಲ್ಲನೇ. ಇವನ ಸ್ವದೇಶಾಭಿಮಾನವನ್ನು ಕಂಡು ಗ್ಲ್ಯಾಡ್‌ಸ್ಟನ್ನನು ಬಹು ಸಂತೋಷಪಡುತ್ತಿದ್ದನು ಆದರೆ ಐರ್ಲಂಡದಲ್ಲಿದ್ದ ದಂಗೆಗಳಲ್ಲಿ ಪಾರ್ನೆಲ್ಲನ ಅಂಗವಾದರೂ ಇರಬಹುದೆಂಬ ಸಂಶಯದಿಂದ ಸರಕಾರದವರು ಸನ್ ೧೮೮೧ನೆಯ ಇಸವಿಯ ಆಕ್ಟೋಬರ ತಿಂಗಳಿನಲ್ಲಿ ಅವನನ್ನೂ ಅವನ ಇಬ್ಬರು ಗೆಳೆಯರನ್ನೂ ಹಿಡಿಸಿ, ಸೆರೆಮನೆಯಲ್ಲಿ ಹಾಕಿಸಿದರು. ಅದೊಂದು ದೊಡ್ಡ ಪ್ರಕರಣವೇ ಅದೆ. ಅದನ್ನೆಲ್ಲ ಇಲ್ಲಿ ವಿವರಿಸಲು ಸ್ಥಳವಿಲ್ಲ, ಮತ್ತು ಅದರ ಅವಶ್ಯವೂ ತೋರುವದಿಲ್ಲ.

ಐರ್ಲಂಡದ ವಿಶ್ವವಿದ್ಯಾಲಯಗಳಿಗೂ ಧರ್ಮಶಿಕ್ಷಣಕ್ಕೂ ಇದ್ದ ಸಂಬಂಧವು

ಐರ್ಲಂಡದ ವಿಶ್ವವಿದ್ಯಾಲಯಗಳಿಗೂ ಧರ್ಮಶಿಕ್ಷಣಕ್ಕೂ ಇದ್ದ ಸಂಬಂಧವು ಸಹ ತೀರ ಅಸಮಾಧಾನಕರವಾಗಿತ್ತು. ಅಲ್ಲಿ ಎರಡು ಮುಖ್ಯ ವಿಶ್ವವಿದ್ಯಾಲಯಗಳಿದ್ದವು. ಅವುಗಳಲ್ಲಿ ಒಂದು ಡಬ್ಲಿನ್-ವಿಶ್ವವಿದ್ಯಾಲಯವು, ಮತ್ತೊಂದು ಕ್ವೀನ್ಸ-ವಿಶ್ವವಿದ್ಯಾಲಯವು. ಡಬ್ಲಿನ್-ವಿಶ್ವವಿದ್ಯಾಲಯವು ಪ್ರಾಟೆಸ್ಟಂಟ್ ಪಂಥದ ವಿದ್ಯಾರ್ಥಿಗಳನ್ನಷ್ಟೇ ಪರೀಕ್ಷಿಸಿ, ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದವರಿಗೆ ಪದವಿಗಳನ್ನು ಕೊಡುತ್ತಿತ್ತು. ಕ್ವೀನ್ಸ್-ವಿಶ್ವವಿದ್ಯಾಲಯದಲ್ಲಂತು ಧರ್ಮಶಿಕ್ಷಣಕ್ಕೆ ಆಸ್ಪದವೇ ಇದ್ದಿಲ್ಲ. ಹೀಗಾಗಿ ಐರ್ಲಂಡದೊಳಗಿನ ಕ್ಯಾಥೋಲಿಕ್ ಪಂಥದ ಜನರಿಗೆ ಧರ್ಮಶಿಕ್ಷಣವು ದೊರೆಯದಂತಾಗಿತ್ತು. ಇದನ್ನು ಕಂಡು ಅವರು ಒಳಗಿಂದೊಳಗೆ ತಳಮಳಗೊಳ್ಳುತ್ತಿದ್ದರು.

ಮೇಲೆ ವಿವರಿಸಿದ ಮೇರೆಗೆ ಐರ್ಲಂಡವು ತರತರದ ಕಷ್ಟಗಳಿಗೆ ಗುರಿಯಾಗಿ ಪರಿಪರಿಯಿಂದ ಬಳಲುತ್ತಿತ್ತು. ಅದರ ಈ ಕಷ್ಟಗಳನ್ನು ಕಂಡು, ಬ್ರಿಟಿಷ್‌ರಾಜ್ಯದೊಳಗಿನ ಉದಾರ ಬುದ್ಧಿಯ ಎಷ್ಟೋ ಸದ್ಗೃಹಸ್ಥರು ಅವುಗಳನ್ನು ದೂರ ಮಾಡಲು ಈ ಮೊದಲೇ ತಮ್ಮಿಂದಾದಷ್ಟು ಪ್ರಯತ್ನ ಪಟ್ಟಿದ್ದರು. ಆದರೆ ಅವರ ಪ್ರಯ

ಕ್ಷಗಳೆಲ್ಲ ನಿಷ್ಫಲವಾಗಿದ್ದವು. ಇದನ್ನು ಲಕ್ಷ್ಯದಲ್ಲಿ ತಂದರೆ, ಐರ್ಲಂಡದ ದುಃಖಗಳನ್ನು ನಿವಾರಿಸುವ ಯಶಸ್ಸು ಗ್ಲ್ಯಾಡ್‌ಸ್ಟನ್ನನಿಗಾಗಿಯೇ ಕಾದಿಡಲ್ಪಟ್ಟಿತ್ತೆಂದು ತೋರುವದು. ಅವನು ಅದರ ದುಃಖಗಳನ್ನು ಹೇಗೆ ದೂರ ಮಾಡಿದನೆಂಬದನ್ನು ಸ್ವಲ್ಪದರಲ್ಲಿಯೇ ಹೇಳುವೆವು.

ಗ್ಲ್ಯಾಡ್‌ಸ್ಟನ್ನನು ಧರ್ಮಖಾತೆಯ ವೆಚ್ಚದ ಭಾರದಿಂದ ಐರ್ಲಂಡವನ್ನು ಮುಕ್ತವಾಗಿ ಮಾಡಿದ್ದು.

ಐರ್ಲಂಡದ ಧರ್ಮಖಾತೆಯ ಪ್ರಕರಣವು ಅತ್ತಿತ್ತ ಅಲೆದಾಡುತ್ತ ಬಂದು, ಸನ್ ೧೮೬೯ನೆಯ ಇಸವಿಯ ಆರಂಭದಲ್ಲಿ ಪಾರ್ಲಮೆಂಟಿನ ಸಭಾಮಂದಿರವನ್ನು ಪ್ರವೇಶಿಸಿತು. ಕೂಡಲೆ ಅದರ ವಿಷಯವಾಗಿ ಸಭೆಯಲ್ಲಿ ನಿಕರದ ವಾದವಿವಾದಗಳು ನಡೆಯಲಾರಂಭಿಸಿದವು. ಗ್ಲ್ಯಾಡ್‌ಸ್ಟನ್ನನು ಮಾರ್ಚ ತಿಂಗಳಿನ ೧೬ನೆಯ ತಾರೀಖಿನ ದಿವಸ ಆ ವಿಷಯದ ಮೇಲೆ ಉತ್ತಮವಾದದ್ದೊಂದು ಭಾಷಣವನ್ನು ಮಾಡಿ, ಕಡೆಯಲ್ಲಿ ಹೇಳಿದ್ದೇನೆಂದರೆ:— 'ನೀವು ದೂರ ದೃಷ್ಟಿಯುಳ್ಳವರಾಗಿದ್ದರೆ, ಭವಿಷತ್ಕಾಲವನ್ನು ಲಕ್ಷ್ಯದಲ್ಲಿ ತಂದು, ವರ್ತಮಾನ ಕಾಲದಲ್ಲಿಯೇ ಎಚ್ಚರದಿಂದ ನಡೆಯುವದು ನಿಮ್ಮ ಕರ್ತವ್ಯವಾಗಿದೆ; ಒಂದು ವೇಳೆ ನೀವು ಧೈರ್ಯಶಾಲಿಗಳಾಗಿದ್ದರೆ, ಐರ್ಲಂಡವನ್ನು ನಡಿಸಿಕೊಳ್ಳುತ್ತಿರುವ ನಿಮ್ಮ ಪದ್ಧತಿಯು ಇಂಗ್ಲಂಡದ ಕೀರ್ತಿಗೆ ಹಚ್ಚಿರುವ ಕಲಂಕವನ್ನು ತೆಗೆದುಹಾಕುವದಕ್ಕೆ ನೀವು ಎಂದೂ ಹೆದರಬಾರದು; ನೀವು ದಯಾರ್ದ್ರಬುದ್ಧಿಯುಳ್ಳವರಾಗಿದ್ದ ಪಕ್ಷದಲ್ಲಿ, ಐರ್ಲಂಡದಿಂದ ಒಂದರಮೇಲೊಂದಾಗಿ ಬರುತ್ತಿರುವ ಹೃದಯದ್ರಾವಕ ವಾರ್ತೆಗಳನ್ನು ಕೇಳಿ ಕೇಳದವರಂತೆಯೂ, ಅಲ್ಲಿಯ ಜನರು ಕಷ್ಟಗಳನ್ನು ತಡೆಯಲಾರದೆ ಕಂಗೆಟ್ಟು, ತಮ್ಮತಮ್ಮ ಹೆಂಡರು ಮಕ್ಕಳನ್ನು ಕಟ್ಟಿಕೊಂಡು ಗೋಳಾಡುತ್ತ, ದೇಶಾಂತರಕ್ಕೆ ಹೋಗುತ್ತಿರುವದನ್ನು ನೋಡಿ ನೋಡದವರಂತೆಯೂ ನಟಿಸುವದನ್ನು ಬಿಟ್ಟು, ಆ ಕಷ್ಟಗಳ ಮೂಲವನ್ನೇ ಕಡಿದು ಹಾಕುವ ಪ್ರಯತ್ನಕ್ಕೆ ಹತ್ತುವದು ನಿಮ್ಮ ಕರ್ತವ್ಯವಾಗಿದೆ; ಒಂದುವೇಳೆ ನೀವು ನ್ಯಾಯವರ್ತಿಗಳಾಗಿದ್ದ ಪಕ್ಷದಲ್ಲಿ, ಸತ್ಯದ ಬೆನ್ನು ಕಟ್ಟಿ, ಸತ್ಕಾರ್ಯಗಳನ್ನೆಸಗುವದು ನಿಮ್ಮ ಧರ್ಮವಾಗಿದೆ. ನೀವು ಧೈರ್ಯಶಾಲಿಗಳೂ, ದಯಾರ್ದ್ರಬುದ್ಧಿಯವರೂ, ನ್ಯಾಯವರ್ತಿಗಳೂ ಎಂದು ತೋರ್ಪಡಿಸಲು ತಕ್ಕಕಾಲವೂ ಯೋಗ್ಯಪ್ರಸಂಗವೂ ತಾವಾಗಿಯೇ ಬಂದಿರಲು, ಈ ಸಮಯದಲ್ಲಿ ಉದಾಸೀನರಾಗಿ ಕುಳಿತುಕೊಳ್ಳುವದು ಉಚಿತವಲ್ಲ. ನಿಮ್ಮ ಈ ಸಭೆಯು ತಲತಲಾಂತರಗಳಿಂದ ಶಾಂತತೆಯನ್ನು ಕಾಪಾಡಿ, ಗಂಡಸುತನದ ಕಾಯದೆಗಳನ್ನು ಮಾಡಿ, ಅಖಂಡವಾದ ಕೀರ್ತಿಯನ್ನು ಪಡೆದುಕೊಂಡಿದೆ. ನಿಮ್ಮ ಹಿರಿಯರಲ್ಲಿಯೂ ನಿಮ್ಮ ಪೂರ್ವಿಕರಲ್ಲಿಯೂ ಕಂಡುಬಂದ ಆ ಮೋಹದ

ಶಕ್ತಿಯೂ ಧೈರ್ಯವೂ ಉದಾರಮನಸೂ ನಿಮ್ಮಲ್ಲಿಯೂ ಉಂಟೆಂಬ ಭರವಸವು ನನಗೆ ಸಂಪೂರ್ಣವಾಗಿರುತ್ತದೆ. ಒಂದು ವೇಳೆ ನೀವು ಅಧೈರ್ಯದಿಂದಾಗಲೀ ಉದಾಸೀನತೆಯಿಂದಾಗಲೀ ಸ್ವಾರ್ಥಬುದ್ಧಿಯಿಂದಾಗಲಿ ಐರ್ಲಂಡದ ಧರ್ಮಖಾತೆಯಲ್ಲಿ ತಕ್ಕ ಏರ್ಪಾಡನ್ನು ಮಾಡದಿದ್ದರೆ ಈ ಸಭೆಯು ಪಡೆದುಕೊಂಡಿರುವ ಉಜ್ವಲ ಕೀರ್ತಿಗೆ ನಿಶ್ಚಯವಾಗಿ ಕುಂದು ಹತ್ತುವದು. ಒಂದುವೇಳೆ ನೀವು ಅದನ್ನು ಮಾಡಿಯೇ ತೀರಿದರೆ, ಆ ಕೀರ್ತಿಯು ಮತ್ತಿಷ್ಟು ಹೆಚ್ಚಾಗುವದು'. ಗ್ಲ್ಯಾಡ್‌ಸ್ಟನ್ನನು ತನ್ನ ಈ ಭಾಷಣದ ಪರಿಣಾಮವು ಸಭಾಸದರ ಮನಸಿನಮೇಲೆ ಒಳಿತಾಗಿಯೇ ಆದದ್ದನ್ನು ನೋಡಿ, ಮಾರ್ಚ ತಿಂಗಳಿನ ೩೦ನೆಯ ತಾರೀಖಿನ ದಿವಸ "ಐರ್ಲಂಡದ ಪ್ರಜೆಗಳಿಗೆ ಈಗಿನ ಅಲ್ಲಿಯ ಧರ್ಮಖಾತೆಯಿಂದ ಪ್ರಯೋಜನವಿಲ್ಲ; ಅದು ಕಾರಣ ಆ ಖಾತೆಗೆ ತಗಲುವ ವೆಚ್ಚವನ್ನು ಐರ್ಲಂಡದ ಮೇಲೆ ಹಾಕಕೂಡದು" ಎಂಬ ಅಭಿಪ್ರಾಯದ ಸೂಚನೆಯನ್ನು ಪಾರ್ಲಮೆಂಟಿನಲ್ಲಿ ತಂದನು. ಈ ಸೂಚನೆಯ ವಿಷಯವಾಗಿ ಸಭಾಸದರು ಚೆನ್ನಾಗಿ ವಿಚಾರಮಾಡಲು ಸಾಕಷ್ಟು ದಿವಸಗಳನ್ನು ಬಿಟ್ಟು, ಪಾರ್ಲಮೆಂಟಿನವರು ಒಂದು ದಿವಸ ಎಲ್ಲರ ಮತಗಳನ್ನು ತೆಗೆದುಕೊಂಡರು. ಈ ಸಮಯದಲ್ಲಿ ೩೩೧ ಮತಗಳು ಗ್ಲ್ಯಾಡ್‌ಸ್ಟನ್ನನ ಸೂಚನೆಗೆ ಅನುಕೂಲವಾಗಿಯೂ ೨೭೦ ಮತಗಳು ಅದಕ್ಕೆ ಪ್ರತಿಕೂಲವಾಗಿಯೂ ಬಿದ್ದವು; ಅಂದರೆ ಆ ಸೂಚನೆಗೆ ೬೧ ಮತಗಳು ಹೆಚ್ಚು ದೊರೆದವು. ಇದನ್ನು ನೋಡಿ ಪಾರ್ಲಮೆಂಟ್ ಸಭೆಯವರು "ಇನ್ನು ಮುಂದೆ ಐರ್ಲಂಡದ ಈಗಿನ ಧರ್ಮಖಾತೆಯನ್ನು ಅಲ್ಲಿಯ ಹಣದಿಂದ ನಡಿಸಕೂಡದು" ಎಂದು ನಿರ್ಣಯಿಸಿದರು. ಈ ನಿರ್ಣಯವು ಬಹು ಜನರ ಮನಸಿಗೆ ಬರಲಿಲ್ಲ. ಅವರೊಳಗಿನ ಕೆಲವು ಜನರು ಗ್ಲ್ಯಾಡ್‌ಸ್ಟನ್ನನ ಮೇಲೆ ಸಿಟ್ಟಾಗಿ, ಅವನಿಗೆ ಬಾಯಿಗೆ ಬಂದಂತೆ ಅಪಶಬ್ದಗಳನ್ನಾಡಿದರು. ಆದರೆ ಅವನು ಅವುಗಳನ್ನು ತನ್ನ ಕಿವಿಯಮೇಲೆ ಸಹ ಹಾಕಿಕೊಳ್ಳಲಿಲ್ಲ. ಇದೇ ಸರಿ ಸತ್ಪುರುಷರ ಲಕ್ಷಣವು.

ಗ್ಲ್ಯಾಡಸ್ಟನ್ನನು ಐರ್ಲಂಡದೊಳಗಿನ ಒಕ್ಕಲಿಗರ ಸ್ವಾತಂತ್ರ್ಯವನ್ನು ಹೆಚ್ಚಿಸಿದ್ದು.

ಈ ಮೇರೆಗೆ ಗ್ಲ್ಯಾಡ್‌ಸ್ಟನ್ನನು ಐರ್ಲಂಡದ ಧರ್ಮಖಾತೆಯನ್ನು ವ್ಯವಸ್ಥೆಪಡಿಸಿದ ಬಳಿಕ, ಅಲ್ಲಿಯ ವ್ಯವಸಾಯ ಖಾತೆಯ ವಿಷಯವನ್ನು ಕೈಕೊಂಡನು. ಆ ಖಾತೆಯಲ್ಲಿ ನಡೆಯುತ್ತಿದ್ದ ಅನ್ಯಾಯಗಳು ಮೇಲೆ ವಿವರಿಸಲ್ಪಟ್ಟಿವೆ. ಅವನು ಆ ಖಾತೆಯ ಅಂಗೋಪಾಂಗಗಳನ್ನೂ, ರೈತರ ಕಷ್ಟಗಳನ್ನೂ ಮೊದಲು ಚೆನ್ನಾಗಿ ಅರಿತುಕೊಂಡು, ಆ ಮೇಲೆ ಒಂದು ದಿನ ಪಾರ್ಲಮೆಂಟಿನಲ್ಲಿ ಆ ವಿಷಯದ ಮೇಲೆ ಭಾಷಣ ಮಾಡಿದನು. ಅವಸು ತನ್ನ ಭಾಷಣದಲ್ಲಿ, ಜಮೀನುದಾರರು ತಮ್ಮ ರೈತರಿಗೆ ಹೊಲಗಳ ಮೇಲಿನ ಸ್ವಾ

ತಂತ್ರ್ಯವನ್ನೇನೂ ಕೊಡದಿದ್ದರೆ, ಅದರಿಂದ ಅವರಿಗೂ ರೈತರಿಗೂ ದೇಶಕ್ಕೂ ಹೇಗೆ ಹಾನಿಯುಂಟಾಗುವದೆಂಬದನ್ನೂ, ಒಂದು ಪಕ್ಷಕ್ಕೆ ರೈತರಿಗೆ ತಕ್ಕಷ್ಟು ಸ್ವಾತಂತ್ರ್ಯವನ್ನು ಕೊಡುವದರಿಂದ ಜಮೀನುದಾರರಿಗೂ ರೈತರಿಗೂ ಪ್ರಯೋಜನವಾಗಿ ದೇಶದ ಸಂಪತ್ತು ಹೇಗೆ ಬೆಳೆಯುವದೆಂಬದನ್ನು, ಅಲ್‌ಸ್ಟರ್ ಪ್ರಾಂತದೊಳಗಿನ ಮತ್ತು ಇಂಗ್ಲಂಡ್-ಸ್ಕಾಟಲಂಡ್ ದೇಶಗಳೊಳಗಿನ ವ್ಯವಸಾಯ ಖಾತೆಗಳ ಉದಾಹರಣೆಗಳನ್ನೇ ಕೊಟ್ಟು, ಸಭಿಕರ ಮನಸ್ಸಿನಲ್ಲಿ ಚೆನ್ನಾಗಿ ಬಿಂಬಿಸಿದನು. ಅವನ ಈ ಭಾಷಣದ ವಿರುದ್ಧವಾಗಿ ಯಾರೂ ಹೆಚ್ಚಿಗೆ ಮಾತನಾಡಲಿಲ್ಲ. ಇದನ್ನು ನೋಡಿ ಅವನು "ಐರಿಷ್ ಲ್ಯಾಂಡ್-ಬಿಲ್ಲನ್ನು" (Irish Land Bill) ಅಂದರೆ ಐರ್ಲಂಡದ ಭೂಮಿಯ ಸಂಬಂಧದ ಕಾಯದೆಯ ಮಸೂದೆಯನ್ನು ಸಿದ್ಧ ಮಾಡಿ, ಅದನ್ನು ಸನ್ ೧೮೭೦ ನೆಯ ಇಸವಿಯ ಫೆಬ್ರುವರಿ ೧೫ ನೆಯ ತಾರೀಖಿನ ದಿವಸ ಪಾರ್ಲಮೆಂಟಿನಲ್ಲಿ ತಂದನು. ಅದರ ವಿಷಯವಾಗಿ ಹಲಕೆಲವು ವಾದವಿವಾದಗಳು ನಡೆದ ತರುವಾಯ ಪಾರ್ಲಮೆಂಟಿನ ಎರಡೂ ಶಾಖೆಯವರು ಅದನ್ನು ಮಂಜೂರು ಮಾಡಿದರು. ಆ ವೇಳೆ ಅದಕ್ಕೆ ಜುಲಾಯಿ ೨೬ ನೆಯ ತಾರೀಖಿನ ದಿವಸ ಮಹಾರಾಣೀ ಸಾಹೇಬರು ತಮ್ಮ ಒಪ್ಪಿಗೆಯನ್ನು ಕೊಟ್ಟರು. ಈ ಕಾಯದೆಯಿಂದ ರೈತರಿಗೆ ಕೆಲವು ಹಕ್ಕುಗಳು ದೊರೆದವು. ಅವುಗಳಲ್ಲಿ 'ಜಮೀನುದಾರನು ರೈತನಿಂದ ಹೊಲ ಬಿಡಿಸಿಕೊಳ್ಳುವ ಪ್ರಸಂಗದಲ್ಲಿ, ರೈತನು ಆ ಹೊಲದ ಸುಧಾರಣೆಗಾಗಿ ಸ್ವಂತ ಹಣವನ್ನು ವೆಚ್ಚ ಮಾಡಿದ್ದರೆ, ಆ ಹಣದಲ್ಲಿಯ ಇಂತಿಷ್ಟನೇ ಪಾಲು ಹಣವನ್ನು ಜಮೀನುದಾರನು ಆ ರೈತನಿಗೆ ಕೊಡತಕ್ಕದ್ದು' ಎಂಬದೇ ಮುಖ್ಯವಾದದ್ದು. ಇಷ್ಟರಿಂದಲೇ ಐರ್ಲಂಡದ ರೈತರು ತೃಪ್ತರಾಗಲಿಲ್ಲ. ಅಲ್ಲಿ ಮೊದಲಿನಂತೆ ಭೂಮಿಗಳ ಒಡೆಯರಿಗೂ ಅವರ ರೈತರಿಗೂ ಜಗಳಗಳು ನಡೆಯುತ್ತಲೇ ಇದ್ದವು. ಈ ಸುದ್ದಿಗಳನ್ನು ಕೇಳಿ, ಉದಾರ ಬುದ್ಧಿಯ ಕೆಲವು ಜನ ಇಂಗ್ಲಿಷ್ ಗೃಹಸ್ಥರು ಈ ವಿಷಯಕ್ಕೆ ಹೆಚ್ಚು ಲಕ್ಷಗೊಡಹತ್ತಿದರು. ಅವರಲ್ಲಿ (General Gordon) ಜನರಲ್ ಗಾರ್ಡನ್ನನೆಂಬ ಪ್ರಸಿದ್ಧ ಪುರುಷನು ಐರ್ಲಂಡದ ಸ್ಥಿತಿಯನ್ನು ಪ್ರತ್ಯಕ್ಷವಾಗಿ ನೋಡುವ ಅಪೇಕ್ಷೆಯಿಂದ ಸನ್ ೧೮೮೦ ನೇ ಇಸವಿಯ ಅಂತ್ಯದಲ್ಲಿ ಅಲ್ಲಿಗೆ ಹೋದನು. ಅವನು ಐರ್ಲಂಡದ ಸ್ಥಿತಿಯನ್ನು ಕುರಿತು ತನ್ನದೊಂದು ಪತ್ರದಲ್ಲಿ ಬರೆದಿರುವದೇನೆಂದರೆ:—ನಾನು ಐರ್ಲಂಡದ ನೈರುತ್ಯ ಭಾಗವನ್ನು ಲಕ್ಷ್ಯಗೊಟ್ಟು ನೋಡಿದೆನು. ಜಮೀನುದಾರರು ಹೇಳಿದಂತೆ ರೈತರು ಕೇಳಬೇಕು ಎಂಬ ಅಭಿಪ್ರಾಯದ ಅರೆಕಳೆಯ ಕಾಯದೆಯಿಂದ ಐರ್ಲಂಡದಲ್ಲಿ ಶಾಂತತೆಯುಂಟಾಗಲಾರದು. ನೈರುತ್ಯ ಭಾಗದೊಳಗಿನ ಭೂಮಿಗಳನ್ನು ಸರಕಾರದವರು ಕೊಂಡು, ಅವುಗಳಿಗೆ ಯೋಗ್ಯ ತೆರಿಗೆಗಳನ್ನು ಕಟ್ಟಿ, ಅವುಗಳನ್ನು ರೈತರಿಗೆ ಲಾವಣಿ ಕೊಡತಕ್ಕದ್ದು.

ಇದರಿಂದ ಇಲ್ಲಿಯ ಗೊಂದಲಗಳು ತಮ್ಮಿಂದ ಶಮನವಾಗುವವು. ಉಳಿದ ಭಾಗಗಳಲ್ಲಿಯು ಜಮೀನುದಾರರ ಭೂಮಿಗಳ ತೆರಿಗೆಗಳನ್ನು ಸಹ ಸರಕಾರದವರು ತಮ್ಮ ಅಧಿಕಾರಸ್ಥರಿಂದ ಗೊತ್ತುಪಡಿಸಿ, ಅಷ್ಟೇ ತೆರಿಗೆಗಳನ್ನು ಅವುಗಳ ಒಡೆಯರು ರೈತರಿಂದ ತೆಗೆದುಕೊಳ್ಳಬೇಕೆಂದು ಕಟ್ಟುಮಾಡಿದರೆ, ಸುತ್ತಲೂ ಶಾಂತತೆಯುಂಟಾಗಿ, ದೇಶಕ್ಕೆ ಶಾಸಹಿತವಾಗುವದು. ನೈರುತ್ಯಭಾಗದೊಳಗಿನ ರೈತರು ತೀರ ನಿಕೃಷ್ಟಸ್ಥಿತಿಯಲ್ಲಿರುವರು. ಅವರು ದನಗಳ ಕೊಟ್ಟಿಗೆಗಳಿಗೆ ಸಹ ಅಯೋಗ್ಯವಾದ ಸ್ಥಳಗಳಲ್ಲಿ ವಾಸಿಸಿ, ಅರಹೊಟ್ಟೆ ಊಟಮಾಡಿ, ಕಾಲಕ್ಷೇಪಮಾಡುವರು. ಅವರ ರಾಜನಿಷ್ಠೆಯನ್ನು ನೋಡಿ ನನಗೆ ಪರಮಾಶ್ಚರ್ಯವಾಯಿತು. ಈ ತರದ ಸಾಧುವೃತ್ತಿಯ ಜನರನ್ನು ನೋಡಿ, ನಗುವದೂ, ಅವರನ್ನು ತಲತರದ ದುಃಖಗಳಿಗೀಡುಮಾಡುವದೂ ತೀರ ಹೊಲ್ಲದ ಕೆಲಸಗಳು." ಅವನ ಈ ಪತ್ರವು ಇಂಗ್ಲಂಡದೊಳಗಿನ ಬಹುಜನರ ಮನಸನ್ನು, ಬೆಂಕಿಯು ಬೆಣ್ಣೆಯನ್ನು ಕರಗಿಸುವಂತೆ, ಕರಗಿಸಿಬಿಟ್ಟಿತು. ಐರ್ಲಂಡದಲ್ಲಿ ಶಾಂತತೆಯನ್ನು ನೆಲೆಗೊಳಿಸುವದಕ್ಕಾಗಿ ಅವನನ್ನೇ ನಿಯಮಿಸಬೇಕೆಂದು ಸಹ ಪಾರ್ಲಮೆಂಟಿಗೆ ಬಹು ಜನರು ಸೂಚಿಸಿದರು. ಆದರೆ ಆ ಸೂಚನೆಗೆ ಯಾರೂ ಲಕ್ಷ್ಯಗೊಡಲಿಲ್ಲ. ಮುಂದೆ ಸನ್ ೧೮೮೧ ನೆಯ ಇಸವಿಯಲ್ಲಿ ಮಂತ್ರಿಮಂಡಲದವರು ಐರ್ಲಂಡದ ಭೂಮಿಯ ಸಂಬಂಧದ ಕಾಯದೆಯ ಎರಡನೆಯ ಮಸೂದೆಯನ್ನು ಮಾಡಿ, ಪಾರ್ಲಮೆಂಟಿನಲ್ಲಿ ತಂದರು. ಈ ಸಮಯದಲ್ಲಿ ಗ್ಲ್ಯಾಡ್‌ಸ್ಟನ್ನನು ಆ ಮಸೂದೆಯ ಪುಷ್ಟೀಕರಣಾರ್ಥವಾಗಿ ಮಾಡಿದ ತನ್ನ ಭಾಷಣದ ಕೊನೆಯಲ್ಲಿ ಹೇಳಿದ್ದೇನೆಂದರೆ:—"ಸಭ್ಯಗೃಹಸ್ಥರೇ, ನ್ಯಾಯವೇ ಮಾರ್ಗದರ್ಶಕವೆಂದು ನಂಬಿ, ನಾವು ಅದನ್ನು ಹಿಂಬಾಲಿಸಬೇಕು; ಅದರ ಹೊರತು ನಮಗೆ ಗತಿಯಿಲ್ಲ. ಧರ್ಮಶ್ರದ್ಧೆಯು ಮೃತ್ಯುವಿಗಿಂತ ಬಲವುಳ್ಳದ್ದೆಂದು ನಾವು ಎಣಿಸುವಂತೆ, ನ್ಯಾಯವು ಮನುಷ್ಯನ ಆವೇಶಕ್ಕಿಂತಲೂ ಅವನ ಪ್ರಾಸಂಗಿಕ ಸಿಟ್ಟಿಗಿಂತಲೂ, ಅವನ ಮನಸಿನಲ್ಲಿ ನೆಲೆಗೊಂಡಿರುವ ಪುರಾತನ ದಂತಕಥೆಗಳಿಗಿಂತಲೂ, ವೃದ್ಧಾಚಾರಗಳಿಗಿಂತಲೂ ಬಲವುಳ್ಳದ್ದಾಗಿದೆ. ಇಷ್ಟು ಬಲವಾದ ನ್ಯಾಯಮಾರ್ಗವನ್ನು ಹಿಡಿದು ನಡೆದರೆ, ಹಾದಿ ತಪ್ಪುವ ಭೀತಿಯು ನಮಗಿಲ್ಲ. ಇದರ ಹೊರತು ಸತ್ಯವು ದೇವರಿಂದ ಬಂದ ಪ್ರಕಾಶವಾಗಿದೆ. ಅದರ ಬೆಳಕಿನಲ್ಲಿ ನಡೆಯುವವರಿಗೆ ಯಾರ ಅಂಜಿಕೆಯೂ ಇಲ್ಲ. ಆದು ಕಾರಣ ನಾವು ನ್ಯಾಯದ ಮಾರ್ಗವನ್ನು ಹಿಡಿದು, ಸತ್ಯದ ಬೆಳಕಿನಲ್ಲಿ ಒಂದೊಂದೇ ಹೆಜ್ಜೆಯನ್ನಿಡುತ್ತ ಮುಂದಕ್ಕೆ ಸಾಗಿದರೆ, ಕಾರ್ಯಸಿದ್ಧಿಯು ಸಮೀಪಕ್ಕೆ ಹೋಗುವೆವು. ಒಂದು ವೇಳೆ ದಾರಿಯಲ್ಲಿ ವಿಘ್ನಗಳು ಬಂದರೂ, ಅವು ನಮ್ಮ ಗತಿಗೆ ಅಲ್ಪಸ್ವಲ್ಪ ಅಡ್ಡಿ ಮಾಡಿದರೂ, ನಾವು ಅವುಗಳನ್ನು ಲೆಕ್ಕಿಸದೆ ಧೈರ್ಯದಿಂದ ಮುಂದರಿಸಿದರೆ, ಅವು ತಮ್ಮಷ್ಟಕ್ಕೆ ತಾವೇ ಓರಿಗಾಗುವವು. ಇದರಲ್ಲಿ ಸಂದೇಹವಿಲ್ಲ." ಈ ಭಾಷಣದ ಪರಿಣಾಮವು ಸಭೆ

ಕರ ಮನಸಿನ ಮೇಲೆ ಒಳಿತಾಗಿ ಆದದ್ದರಿಂದ, ಅವರು ಆ ಕಾಯದೆಯು ಮಸೂದೆಯನ್ನು ಮಂಜೂರು ಮಾಡಿದರು. ಆ ಕಾಯದೆಯು ಒಕ್ಕಲಿಗರ ಸ್ವಾತಂತ್ರ್ಯವನ್ನು ಬಹಳವಾಗಿ ಹೆಚ್ಚಿಸಿತು. ಆ ಕಾಯದೆಯಿಂದ, ಹೊಲಗಳ ತೆರಿಗೆಯನ್ನು ನಿರ್ಣಯಿಸುವದಕ್ಕಾಗಿ ಒಂದು ಸ್ವತಂತ್ರ ಕೋರ್ಟನ್ನು ಸ್ಥಾಪಿಸಬೇಕು; ಆ ಕೋರ್ಟಿನವರು ಪ್ರತಿ ಒಂದು ಹೊಲದ ವಿಷಯವಾಗಿ ವಿಚಾರ ಮಾಡಿ ಅದಕ್ಕೆ ಯೋಗ್ಯ ತೆರಿಗೆಯನ್ನು ಕಟ್ಟಬೇಕು; ಆ ತೆರಿಗೆಯ ಹಣವನ್ನು ರೈತರು ಕೊಡುತ್ತ ಹೋಗುವ ವರೆಗೆ ಆ ಹೊಲಗಳನ್ನು ಅವರಿಂದ ಬಿಡಿಸಿಕೊಳ್ಳುವ ಅಧಿಕಾರವು ಜಮೀನುದಾರರಿಗಿಲ್ಲ; ರೈತರು ತಮ್ಮ ಹೊಲಗಳನ್ನು ಬೇಕಾದವರಿಗೆ ಮಾರಬಹುದು; ಮಾರಲಿಕ್ಕೆ ತೆಗೆದುಕೊಂಡವರು ಅವುಗಳ ತೆರಿಗೆಯ ಹಣವನ್ನು ನಿಯಮಿತ ವೇಳೆಗೆ ಜಮೀನುದಾರರಿಗೆ ಸಲ್ಲಿಸುತ್ತ ಹೋದರೆ, ಅವುಗಳನ್ನು ಜಮೀನುದಾರರು ನಿರಾತಂಕವಾಗಿ ಅವರಿಗೆ ನಡಿಸಬೇಕು; ಎಂದು ನಿರ್ಣಯಿಸಲ್ಪಟ್ಟಿತು. ಈ ಮೇರೆಗೆ ಗ್ಲ್ಯಾಡ್‌ಸ್ಟನ್ನನ ಪ್ರಯತ್ನಗಳಿಂದ ಐರ್ಲಂಡದ ರೈತರ ತೊಂದರೆಗಳು ದೂರಾದವು.

ಐರ್ಲಂಡದ ವಿಶ್ವವಿದ್ಯಾಲಯದ ವಿಷಯವು ಮಾತ್ರ ಒಂದು ಉಳಿಯಿತು. ಆ ಮೇಲೆ ಗ್ಲ್ಯಾಡ್‌ಸ್ಟನ್ನನು ಅದರ ಶಿಕ್ಷಣ ಕ್ರಮದಲ್ಲಿದ್ದ ದೋಷವನ್ನು ಸಹ ತೆಗೆದು ಹಾಕುವ ಉದ್ಯೋಗಕ್ಕೆ ಹತ್ತಿದನು. ಅವನು ಆ ವಿಷಯವನ್ನು ಕುರಿತು ಸೂಕ್ಷ್ಮ ರೀತಿಯಿಂದ ವಿಚಾರ ಮಾಡಿ, ಬಹು ಯುಕ್ತಿಯಿಂದಲೇ ಅದರ ಶಿಕ್ಷಣ ಕ್ರಮದಲ್ಲಿ ಧರ್ಮ ವಿಷಯವನ್ನು ಸೇರಿಸಬೇಕೆಂದು ನಿಶ್ಚಯಿಸಿದನು. ಆದರೆ ಈ ಕೆಲಸವು ಸುಲಭಸಾಧ್ಯವಾಗಿದ್ದಿಲ್ಲ. ಯಾಕೆಂದರೆ ಐರ್ಲಂಡದ ಜನರು ವಿಶೇಷ ಧರ್ಮಾಭಿಮಾನಿಗಳಾಗಿದ್ದದರಿಂದ ತಮ್ಮ ತಮ್ಮ ಧರ್ಮಪಂಥಗಳ ಪಕ್ಷವನ್ನು ಹಿಡಿದು, ಯಾವಾಗಲು ಬಡದಾಡುತ್ತಿದ್ದರು. ಇಂಥ ಸ್ಥಿತಿಯಲ್ಲಿ ಎಲ್ಲ ಪಂಥದವರಿಗೂ ಸರಿ ಬೀಳುವಂಥ ಧರ್ಮಶಿಕ್ಷಣವನ್ನು ವಿಶ್ವವಿದ್ಯಾಲಯದ ಶಿಕ್ಷಣ ಕ್ರಮದಲ್ಲಿ ಸೇರಿಸಬೇಕಾಗಿತ್ತು. ಗ್ಲ್ಯಾಡ್‌ಸ್ಟನ್ನನು ಇದರ ಬಗ್ಗೆ ದೀರ್ಘ ವಿಚಾರ ಮಾಡಿ ಕಟ್ಟಕಡೆಗೆ, ಬೇರೆ ಬೇರೆ ಧರ್ಮಪಂಥಗಳಲ್ಲಿ ಒಂದಕ್ಕೊಂದು ವಿರುದ್ಧವಾದ ಮತ್ತು ವಾದಗ್ರಸ್ತವಾದ ವಿಷಯಗಳನ್ನೆಲ್ಲ ಬಿಟ್ಟು, ವಾದಕ್ಕೆ ಏನೂ ಆಸ್ಪದವಿಲ್ಲದ ವಿಷಯಗಳನ್ನು ಮಾತ್ರ ವಿಶ್ವವಿದ್ಯಾಲಯದ ಶಿಕ್ಷಣ ಕ್ರಮದಲ್ಲಿ ಸೇರಿಸಿದರೆ, ಮತ್ತು ಐರ್ಲಂಡಕ್ಕೆಲ್ಲ ಶ್ರೇಷ್ಠವಾದ ವಿಶ್ವವಿದ್ಯಾಲಯವು ಒಂದೇ ಇರುತ್ತದೆಂತಲೂ ಉಳಿದ ವಿದ್ಯಾಲಯಗಳೆಲ್ಲ ಅದರ ಶಾಖೆಗಳೆಂತಲೂ ಕಲ್ಪಿಸಿದರೆ, ತನ್ನ ಉದ್ದೇಶವು ಸುಲಭವಾಗಿ ಈಡೇರುವದೆಂದು ಭಾವಿಸಿ, ಅದೇ ಅಭಿಪ್ರಾಯದ ಉಪನ್ಯಾಸವನ್ನು ಒಂದು ಸಾರೆ ಪಾರ್ಲಮೆಂಟಿನಲ್ಲಿ

ಗ್ಲ್ಯಾಡ್‌ಸ್ಟನ್ನನು ಐರ್ಲಂಡದ ಧರ್ಮಶಿಕ್ಷಣ ವಿಷಯವಾಗಿಮಾಡಿದ ಪ್ರಯತ್ನಗಳು.

ಮಾಡಿದನು. ಆದರೆ ಅವನ ಈ ಅಭಿಪ್ರಾಯವು ಯಾರ ಮನಸಿಗೂ ಬರದೆ, ಎಲ್ಲರೂ ಅವನ ತಲೆಯನ್ನು ಕುಕ್ಕಲಿಕ್ಕೂ ಅವನ ವಿರುದ್ಧವಾಗಿ ಬಾಯಿಗೆ ಬಂದಂತೆ ಮಾತನಾಡಲಿಕ್ಕೂ ಹತ್ತಿದರು. ಇದನ್ನು ನೋಡಿ, ಅವನು ಅದಕ್ಕೆ ತಕ್ಕ ಕಾಲವು ಇನ್ನೂ ಬಂದಿಲ್ಲೆಂದು ತಿಳಿದುಕೊಂಡು ಸುಮ್ಮನಾದನು. ಆದರೂ ಅವನ ಮನಸಿನಲ್ಲಿ ಈ ವಿಚಾರವು ಒಂದೇ ಸಮನೆ ಕಟೆಯುತ್ತಿತ್ತು. ಆ ಮೇಲೆ ಅವನು ಫಾಸೆಟ್ಟನೆಂಬ ವಿದ್ವಾನ್ ಗೃಹಸ್ಥನ ಮನಸನ್ನು ಒಲಿಸಿಕೊಂಡು ಅವನ ಕೈಯಿಂದಲೇ, ಡಬ್ಲಿನ್ ವಿಶ್ವವಿದ್ಯಾಲಯದಲ್ಲಿ ಆಗುತ್ತಿದ್ದ ಧರ್ಮ ಸಂಬಂಧದ ಪರೀಕ್ಷೆಯನ್ನೇ ಬಂದು ಮಾಡಿಸಿದನು. ಇದನ್ನು ನೋಡಿ, ಐರ್ಲಂಡದೊಳಗಿನ ರೋಮನ್ ಕ್ಯಾಥೋಲಿಕ್ ಪಂಥದವರು ಬಹು ಸಂತೋಷಪಟ್ಟರು. ಗ್ಲ್ಯಾಡ್‌ಸ್ಟನ್ನನು ತಾನು ಮಾಡಬೇಕೆಂದೆಣಿಸಿದ ಸಂಪೂರ್ಣ ಕಾರ್ಯವು ಕೈಗೂಡದಿದ್ದರೂ, ಅದರೊಳಗಿನ ಅಲ್ಪ ಭಾಗವಾದರೂ ಕೈಗೂಡಿತೆಂದು ನೋಡಿ, ಹಿಗ್ಗಿದನು. ಪರೋಪಕಾರಿಯಾದ ಮನುಷ್ಯನಿಗೆ ಸತ್ಕಾರ್ಯವು ಸ್ವಲ್ಪೇ ಸಾಧಿಸಿದರೂ, ಅದು ದೊಡ್ಡದಾಗಿ ತೋರುವದು.

> ಗ್ಲ್ಯಾಡ್‌ಸ್ಟನ್ನನು ಹೋಮರೂಲಿನ ವಿಷಯವಾಗಿ ಮಾಡಿದ ಪ್ರಯತ್ನಗಳು. ಅವನು ಹೋಮರೂಲಿನ ಕಾಯದೆಯ ಮಸೂದೆಯನ್ನು ಸಿದ್ಧಮಾಡಿ, ಪಾರ್ಲಮೆಂಟಿಗೆ ಒಪ್ಪಿಸಿದ್ದು, ೧೮೮೬, ಎಪ್ರಿಲ ೮.

ಗ್ಲ್ಯಾಡಸ್ಟನ್ನನು ಮೇಲೆ ವಿವರಿಸಿದ ಮೇರೆಗೆ ಅವಿಶ್ರಾಂತ ಶ್ರಮದಿಂದಲೂ ದೀರ್ಘೋದ್ಯೋಗದಿಂದಲೂ ಐರ್ಲಂಡದ ಧರ್ಮ-ಖಾತೆಯಲ್ಲಿಯೂ ವ್ಯವಸಾಯ-ಖಾತೆಯಲ್ಲಿಯೂ ವಿದ್ಯಾ-ಖಾತೆಯಲ್ಲಿಯೂ ತಕ್ಕ ಏರ್ಪಾಡುಗಳನ್ನು ಮಾಡಿ, ಆ ದೇಶದ ಮೇಲೆ ಮಹದುಪಕಾರವನ್ನು ಹೊರಿಸಿದನು. ಆದರೆ ಅವನು ಇಷ್ಟರಿಂದಲೇ ತೃಪ್ತನಾದನೇನು? ಇಲ್ಲ. ಅವನು ಇದಕ್ಕಿಂತಲು ಹೆಚ್ಚಿನ ಮತ್ತೊಂದು ಉಪಕಾರವನ್ನು ಆ ದೇಶದ ಮೇಲೆ ಮಾಡುವ ಕಾರ್ಯದಲ್ಲಿ ತೊಡಗಿದ್ದನು. ಆ ಕಾರ್ಯವು ಯಾವುದೆಂದರೆ:— ಆ ದೇಶಕ್ಕೆ (Home Rule) ಹೋಮ್ ರೂಲನ್ನು ಕೊಡುವದು; ಹೋಮ್ ರೂಲು ಅಂದರೆ ತನ್ನ ರಾಜ್ಯದಾಡಳಿತವನ್ನು ತಾನೇ ಸಾಗಿಸಿಕೊಳ್ಳುವಂತೆ ಅದಕ್ಕೆ ಒಂದು ಸ್ವತಂತ್ರವಾದ ಪಾರ್ಲಮೆಂಟನ್ನು ಕೊಡುವದು. ಈ ಹೋಮ್‌ರೂಲಿನ ಸಂಗತಿಗಳು ವಾಚಕರಿಗೆ ಸುಲಭವಾಗಿ ತಿಳಿಯಬೇಕೆಂಬ ಉದ್ದೇಶದಿಂದ, ಹೋಮ್ ರೂಲಿನ ಪ್ರಶ್ನವು ಹೊರಡಲು ಕಾರಣವೇನು? ಅದಕ್ಕೆ ಯಾರು ಉತ್ತೇಜನಕೊಟ್ಟರು? ಅದರ ವಿಷಯವಾಗಿ ಪಾರ್ಲಮೆಂಟಿನಲ್ಲಿ ವರ್ತಿಸಿದ್ದೇನು? ಇವೇ ಮುಂತಾದ ಸಂಗತಿಗಳನ್ನು ಮೊದಲು ಸಂಕ್ಷೇಪವಾಗಿ ಹೇಳುವೆವು. ಈ ಅಧ್ಯಾಯದ ಆರಂಭದಿಂದ ಇಲ್ಲಿಯವರೆಗೆ ಹೇಳಲ್ಪಟ್ಟ ವಿವರಣೆಯಿಂದ ಐರ್ಲಂಡದ ಪ್ರಜೆಗಳು ಕಷ್ಟ

ಲ್ಲಿಯ ಧರ್ಮ-ವ್ಯವಸಾಯ-ವಿದ್ಯಾಖಾತೆಗಳ ವಿಷಯವಾಗಿ ಅಸಮಾಧಾನಪಟ್ಟು
ಲಿಂದಮೇಲೆ ದಂಗೆಗಳನ್ನು ಎಬ್ಬಿಸಿ ಸಾರ್ವಜನಿಕ ಶಾಂತತೆಗೆ ಭಂಗತಂದದ್ದ
ಸರಕಾರದವರು ಆ ದಂಗೆಗಳನ್ನು ಅಣಗಿಸಲು ನಿಷ್ಠುರವಾದ ಉಪಾಯಗ
ಮೇಲಿಂದಮೇಲೆ ಯೋಜಿಸಿದ್ದನ್ನೂ ವಾಚಕರು ಬಲ್ಲರು. ಈ ಮೇರೆಗೆ ತಮ್ಮ ದೇ
ಲ್ಲಿ ಪುಂಡಾಟಿಕೆಯೂ ಅನಾಯಕತನವೂ ಹೆಚ್ಚುತ್ತ ಬಂದದ್ದನ್ನು ಅಲ್ಲಿಯ ಪ್ರ
ಜನರು ನೋಡಿ, "ಈಗ ನಮ್ಮ ದೇಶದ ಸ್ಥಿತಿಯು ಕೆಡುತ್ತ ನಡೆದಿದೆ; ಇದ
ಇಂಗ್ಲಿಷ್ ಸರಕಾರದವರಿಗೂ ತೊಂದರೆಯುಂಟಾಗುತ್ತಿದೆ; ಅವರು ಮಾಡಿದ ಕ
ದೆ ಕಟ್ಟಳೆಗಳಿಗೆ ನಮ್ಮ ಜನರು ಒಪ್ಪುವದಿಲ್ಲ; ಅದು ಕಾರಣ ನಾವು ನಮ್ಮ ದೇ
ಲ್ಲಿ ಒಂದು ಸ್ವತಂತ್ರವಾದ ಪಾರ್ಲಮೆಂಟನ್ನು ಸ್ಥಾಪಿಸಿಕೊಳ್ಳುವ ಅಪ್ಪಣೆಯ
ಇಂಗ್ಲಿಷ್ ಸರಕಾರದವರಿಂದ ಪಡೆದುಕೊಂಡು, ನಮ್ಮ ಜನರು ಅಪೇಕ್ಷಿಸು
ಇಲ್ಲಿಯ ರಾಜ್ಯಕಾರಭಾರವನ್ನು ನಾವೇ ಸಾಗಿಸಿಕೊಂಡರೆ, ಈ ಗೊಂದಲ
ಸುಲಭವಾಗಿ ನಿಂತುಹೋಗುವವು" ಎಂದು ಆಲೋಚಿಸಿ, ಒಂದು ಸಭೆಯ
ಸ್ಥಾಪಿಸಿಕೊಂಡು, ಆ ಸಭೆಯ ಮುಖಾಂತರವಾಗಿ ತಮ್ಮ ಕೋರಿಕೆಯನ್ನು
ಗ್ಲಿಷ್ ಪಾರ್ಲಮೆಂಟಿನ ಮುಂದಿಟ್ಟರು. ಆ ಪಾರ್ಲಮೆಂಟಿನಲ್ಲಿದ್ದ ಐರಿಷ್
ಸದರು ಅದಕ್ಕೆ ಕೂಡಲೆ ತಮ್ಮ ಅನುಮೋದನವನ್ನು ಕೊಟ್ಟರು. ಇವರ
ತು ಅಲ್ಲಿಯ ಉದಾರ ಮನಸಿನ ಕೆಲವು ಇಂಗ್ಲಿಷ್ ಸಭಾಸದರು ಸಹ ಅದಕ್ಕೆ
ಬಲವಾದರು. ಈ ಮೇರೆಗೆ ಪಾರ್ಲಮೆಂಟಿನಲ್ಲಿ ಹೋಮರೂಲಿಗೆ ಅನ
ಲವಾದದ್ದೊಂದು ಸಣ್ಣ ಪಕ್ಷವು ಸಿದ್ಧವಾಯಿತು. ಆದರೆ ಪಾರ್ಲಮೆಂ
ಳಗಿನ ಉಳಿದ ಸಭಾಸದರೆಲ್ಲರೂ ಅದನ್ನು ವಿರೋಧಿಸಿ, "ಒಂದು ವೇಳೆ ನಾ
ತಂತ್ರವಾದ ಪಾರ್ಲಮೆಂಟನ್ನು ಐರ್ಲಂಡಕ್ಕೆ ಸ್ಥಾಪಿಸಗೊಟ್ಟರೆ, ಇಂಗ್ಲಿ
ಮ್ರಾಜ್ಯದ ಮಹತ್ವವೂ ಶ್ರೇಷ್ಠತ್ವವೂ ಕಡಿಮೆಯಾಗುವವು; ಅದು ಕಾರಣ
ಅದನ್ನು ಎಂದೂ ಸ್ಥಾಪಿಸಗೊಡಲಿಕ್ಕಿಲ್ಲ" ಎಂದು ಹಟಹಿಡಿದರು. ಅವರು
ಡಸ್ಟನ್ನನು ಸಹ ತಮ್ಮ ಪಕ್ಷದವನೆಂತಲೇ ಗ್ರಹಿಸಿದರು. ಈ ಹೋಮರೂ
ವಿಷಯವಾಗಿ ಸನ್ ೧೮೭೧ನೆಯ ಇಸವಿಯಿಂದ ಸನ್ ೧೮೮೪ನೆಯ ಇಸ
ವರೆಗೆ ದೇಶದಲ್ಲೆಲ್ಲಾ ಕಡೆಯಲ್ಲಿಯೂ ನಿಕರದ ವಾದವಿವಾದಗಳೂ ಚರ್ಚೆ
ಡೆಯುತ್ತ ಬಂದಿದ್ದರೂ, ಅವನು ಇಷ್ಟು ಕಾಲದವರೆಗೆ ತನ್ನ ನಿಜವಾದ ಅಭಿ
ಯವು ಯಾರಿಗೂ ತಿಳಿಯದಂತೆ ವರ್ತಿಸಿದ್ದು ಪರಮಾಶ್ಚರ್ಯದ ಸಂಗತಿಯ
ಐರಿಷ್ ಜನರು ತಮ್ಮ ದೂರುಗಳನ್ನು ಯಾರೂ ಲಾಲಿಸುವದಿಲ್ಲೆಂಬ ಸಿಟ್ಟಿನಿಂದ
ತರಗಿ, ಹೆಚ್ಚು ಹೆಚ್ಚು ಉದ್ಧಟತನದ ಕೃತ್ಯಗಳನ್ನೆಸಗುತ್ತಿರುವದನ್ನು ಆ
ದರ್ಶಿಯಾದ ಗ್ಲ್ಯಾಡ್‌ಸ್ಟನ್ನನು ನೋಡಿ, ಇದಕ್ಕೆ ಒಂದು ತಂತ್ರೋಪಾಯ
ಬೇಗನೆ ಯೋಜಿಸದಿದ್ದರೆ, ಅವರ ಈ ಕೃತಿಗಳು ಅವರ ನಾಶನಕ್ಕೂ ಇಂಗ್ಲಿ

ಪಕೀರ್ತಿಗೂ ನಿಶ್ಚಯವಾಗಿ ಕಾರಣವಾಗುವವೆಂದು ಬಹು ದಿವಸಗಳ ಹಿಂದೆಯೆ
ಮಾಯಾಸಕಟ್ಟಿದ್ದನು. ಆದರೆ ಅದನ್ನು ಕುಸುವಾದರೂ ಹುಲುಬಗೊಟ್ಟಿದಿಲ್ಲ. ೧
ಸಿ ಸನ್ ೧೮೮೬ನೆಯ ಇಸವಿಯಲ್ಲಿ ಎರಡನೆಯ ಸಾರೆ ಮುಖ್ಯ ಮಂತ್ರಿಯಾದ
ವು ದಿವಸಗಳಲ್ಲಿಯೇ, ಪಾರ್ಲಮೆಂಟಿನ ಸಭಾಸದರನ್ನು ಆರಿಸಿಕೊಳ್ಳುವ ನಿಂ
ಮಗಳನ್ನು ತಿದ್ದಿ, ತನ್ನ ಮುಂದಿನ ಉದ್ದೇಶವು ಸುಲಭವಾಗಿ ಈಡೇರುವಂತೆ ಅಂದರೆ
ಹೋಮರೂಲಿನ ಪಕ್ಷವು ಪಾರ್ಲಮೆಂಟಿನಲ್ಲಿ ಬರಬರುತ್ತ ಬಲಗೊಳ್ಳುವಂತೆ ಮಾ
ಡಿದ್ದನು ಇದರಿಂದ ಮುಂದಿನ ನಾಲ್ಕು ವರ್ಷಗಳಲ್ಲಿ ಆ ಪಕ್ಷವು ಅಲ್ಲಿ ಒಳಿತಾಗಿ
ಬಲಿತದ್ದನ್ನು ನೋಡಿ, ಆ ರಾಜ್ಯಕಾರ್ಯ ಧುರಂಧರನೂ, ನ್ಯಾಯಪಕ್ಷಪಾತಿಯೂ
ದ ಗ್ಲ್ಯಾಡ್‌ಸ್ಟನ್ನನು, ಇಂಗ್ಲಿಷ್ ಸಾಮ್ರಾಜ್ಯದ ಪರಮೋದಾರ್ಯದ ಕೀರ್ತಿಯ
ನ್ನು ದಿಗಂತರದಲ್ಲಿ ಮೆರೆಯಿಸುವ ಅಪೇಕ್ಷೆಯಿಂದಲೂ, ಐರ್ಲಂಡ್ ದೇಶವನ್ನು ವಿಪ
ತ್ತುಗಳಿಂದ ಸಂಪೂರ್ಣವಾಗಿ ಮುಕ್ತವಾಗಿ ಮಾಡುವ ಆ ಕಾಂಕ್ಷೆಯಿಂದಲೂ,
ಇಷ್ಟ ಮಿತ್ರರು ಬೇಡಬೇಡೆಂದು ಹೇಳುತ್ತಿರಲು ಅದನ್ನು ಗಣಿಸದೆ, ಸಿಂಹಾಸನಾ
ಪತಿಯನ್ನೂ ದೇಶಬಾಂಧವರನ್ನೂ ಜೀವದ ಗೆಳೆಯರನ್ನೂ ಲೆಕ್ಕಿಸದೆ, ತನ್ನ ಕೀ
ರ್ತಿಯ ಪರಿವೆಯನ್ನು ಮಾತ್ರವಲ್ಲ ಆದರೆ ಜೀವದಪರಿವೆಯನ್ನು ಸಹ ಬಿಟ್ಟು, ಸನ್
೧೮೮೬ನೆಯ ಇಸವಿಯಲ್ಲಿ ಹೋಮರೂಲಿನ ಸಂಬಂಧದ ತನ್ನ ನಿಜವಾದ ಅಭಿಪ್ರಾ
ಯವನ್ನು ಬಯಲಿಗೆ ಹಾಕಿದನು. ಅವನು ಎಲ್ಲ ಜನರನ್ನು ಉದ್ದೇಶಿಸಿ ಒಂದು ಲೇ
ಖವನ್ನು ಪ್ರಕಟಿಸಿ, ಅದರ ಆರಂಭದಲ್ಲಿ ಹೋಮರೂಲಿಗೆ ಎಷ್ಟೋ ಸಾಧಕ ಬಾಧ
ಕ ಪ್ರಮಾಣಗಳನ್ನು ತೋರಿಸಿ, ಅದು ಸಾಧುವಾದದ್ದೇ ಎಂದು ಸ್ಥಾಪಿಸಿ, ಅದರ
ಅಂತ್ಯದಲ್ಲಿ "ಇಂಗ್ಲಿಷ್ ಸಿಂಹಾಸನದ ಶ್ರೇಷ್ಠತ್ವವನ್ನು ಕಾಪಾಡುವದೂ, ರಾಜ್ಯದಲ್ಲಿ
ಸಂಘಶಕ್ತಿಯನ್ನು ಹುಟ್ಟಿಸುವದೂ, ಆ ಸಂಘಶಕ್ತಿಯನ್ನು ಸಂರಕ್ಷಿಸುವದಕ್ಕಾಗಿ
ಪಾರ್ಲಮೆಂಟಿನ ಅಧಿಕಾರಗಳನ್ನು ಭದ್ರಪಡಿಸುವದೂ ಪ್ರತಿ ಒಬ್ಬ ಪ್ರಜಾಪಕ್ಷದ
ಸಭಾಸದನ ಅತ್ಯವಶ್ಯಕವಾದ ಮತ್ತು ಪ್ರಧಾನವಾದ ಕರ್ತವ್ಯವಾಗಿದೆ. ಈ ಪವಿತ್ರ
ವಾದ ಕರ್ತವ್ಯವನ್ನು ಲಕ್ಷದಲ್ಲಿ ತಂದು, ಈ ರಾಜ್ಯಕ್ಕೆ ಸೇರಿದ ಒಂದು ನಾಡಿನವರಿಗೆ
ತಮ್ಮ ರಾಜ್ಯದಾಡಳಿತವನ್ನು ತಾವೇ ಸಾಗಿಸಿಕೊಳ್ಳುವ ಅಧಿಕಾರವನ್ನು ಕೊಟ್ಟರೆ,
ಅದರಿಂದ ನಮಗೆ ಭಯವಂತು ಇಲ್ಲೇ ಇಲ್ಲ; ಆದರೆ ಭಯನಿವಾರಣೆಯ ಒಂದು
ಪ್ರಬಲವಾದ ಸಾಧನವು ನಮಗುಂಟಾಗುವದು. ಇದರಿಂದ ನಮ್ಮ ರಾಜ್ಯದ ಒಗ
ಟ್ಟೂ, ಬಲವೂ ಸುಖವೂ ಅಭಿವೃದ್ಧಿಸುವವು. ಈ ಕರ್ತವ್ಯವನ್ನು ಮಾಡುವ ಶಕ್ತಿ
ಯು ನಮ್ಮಲ್ಲಿ ಸಂಪೂರ್ಣವಾಗಿರಲು, ಗ್ರೇಟಬ್ರಿಟನ್ನದ ಮತ್ತು ಐರ್ಲಂಡದ
ನ್ಯಾಯನೀತಿಗಳನ್ನು ಒಂದಕ್ಕೊಂದು ಕೂಡಿಸಿ ಬೆಸೆದು, ಅವೆರಡು ದೇಶಗಳನ್ನು
ಏಕಜೀವನನ್ನಾಗಿ ಮಾಡುವದನ್ನು ಬಿಟ್ಟು ಅಂಥ ಒಗ್ಗಟ್ಟನ್ನೂ, ಬಲವನ್ನೂ, ಸುಖ

ವನ್ನೂ ಕೆಡಿಸುವದಕ್ಕೆ ಅಥವಾ ಒಂದರಿಂದೊಂದನ್ನು ದೂರಿಡಲಿಕ್ಕೆ ಯಾರಾ
ಪ್ರಯತ್ನಿಸಿದರೆ, ಅವರ ಹೆಸರಿಗೆ ಜಗತ್ತಿನ ಇತಿಹಾಸದಲ್ಲಿ ಕಲೆಹತ್ತದೇ ಇರದ
ನಾನು ಖಂಡಿತವಾಗಿ ಹೇಳುತ್ತೇನೆ" ಎಂದು ಕಾಣಿಸಿದ್ದನು. ಈ ಮೇರೆಗೆ
ಡ್‌ಸ್ಟನ್ನನು ಪ್ರಸಿದ್ಧ ರೀತಿಯಿಂದ ಹೋಮ್‌ರೂಲಿನ ಪಕ್ಷವನ್ನು ಸ್ವೀಕರಿಸ
ಆ ಮೇಲೆ ಅವನು ಐರ್ಲಂಡಕ್ಕೆ "ಹೋಮ್‌ರೂಲು" ಕೊಡುವ ಕಾಯ
ಮಸೂದೆಯನ್ನು ಮಾಡಿ, ಸನ್ ೧೮೮೬ ನೆಯ ಇಸವಿಯ ಎಪ್ರಿಲ್ ೮ನೆಯ ತ
ಖಿನ ದಿವಸ ಪ್ರತಿನಿಧಿಗಳ ಸಭೆಯ ಮುಂದಿಟ್ಟನು. ಆ ಮಸೂದೆಯ ತಾತ್ಪ
ವೇನೆಂದರೆ:— ಐರ್ಲಂಡವು ಒಂದು ಸ್ವತಂತ್ರವಾದ ಪಾರ್ಲಮೆಂಟನ್ನು ಸ
ಕೊಳ್ಳಬೇಕು. ಅದರಲ್ಲಿ ಲಾರ್ಡರ-ಸಭೆ ಮತ್ತು ಕಾಮನರ-ಸಭೆ ಎಂಬ ಎ
ಶಾಖೆಗಳಿರಬೇಕು. ಲಾರ್ಡರ-ಸಭೆಯಲ್ಲಿ ೨೮ ಜನ ಸರದಾರರೂ ಪ್ರಜೆಗಳು
ಸಿಕೊಟ್ಟ ೭೫ ಜನ ಸಭಾಸದರೂ ಇರತಕ್ಕದ್ದು. ಈ ೭೫ ಜನ ಸಭಾಸದರು
ವರ್ಷಗಳ ವರೆಗೆ ಆ ಸಭೆಯಲ್ಲಿರತಕ್ಕದ್ದು. ಕಾಮನ್ನರ-ಸಭೆಯಲ್ಲಿ ಹಿಂದಿನ
ಳಿಯ ಮೇರೆಗೆ ಇರತಕ್ಕ ೧೦೩ ಜನ ಪ್ರತಿನಿಧಿಗಳ ಹೊರತು ಬೇರೆ ೧೦೧ ಜನ
ನಿಧಿಗಳನ್ನು ಜನರು ಆರಿಸಿಕೊಂಡು ಆ ಸಭೆಗೆ ಕಳುಹಿಸಬೇಕು. ಆ ಪ್ರತಿನಿಧಿ
ಅಯ್ದು ವರ್ಷಗಳ ವರೆಗೆ ಸಭೆಯಲ್ಲಿರತಕ್ಕದ್ದು.

ಗ್ಲ್ಯಾಡ್‌ಸ್ಟನ್ನನು ಈ ಹೋಮ್‌ರೂಲಿನ ಪುಷ್ಟೀಕರಣಾರ್ಥವಾಗಿ
ಣ ಮಾಡಿದ ದಿವಸ ಅಂದರೆ ಸನ್ ೧೮೮೬ ನೆಯ
ಲ್ ೮ನೆಯ ತಾರೀಖಿನ ದಿವಸ ನೆರೆದಷ್ಟು ಜನರು
ರ್ಲಮೆಂಟಿನಲ್ಲಿ ಹಿಂದಕ್ಕೆ ಎಂದೂ ನೆರೆದಿದ್ದಿಲ್ಲ.
ನ ಈ ಭಾಷಣವನ್ನು ಕೇಳುವ ಉತ್ಕಟೇಚ್ಛೆಯು
ಪ್ರಜೆಗಳಲ್ಲಿಯೂ ಪಾರ್ಲಮೆಂಟಿನ ಸಭಾಸದರಲ್ಲಿ

ಗ್ಲ್ಯಾಡ್‌ಸ್ಟನ್ನನು ಹೋಮರೂಲಿನ ಮಸೂದೆಯ ಮೇಲೆ ಮಾಡಿದ ಭಾಷಣವು, ೧೮೮೬, ಎಪ್ರಿಲ ೮.

ಹುಟ್ಟಿತ್ತು. ಆದದ್ದರಿಂದ ಸಭಾಮಂದಿರದಲ್ಲಿ ಸ್ಥಳಗಳು ಸಿಗುವವೋ ಇಲ್ಲ
ಎಂಬ ಸಂಶಯದಿಂದ, ಜನರು ನಿಯಮಿತ ವೇಳೆಗಿಂತ ಅಯ್ದಾರು ತಾಸುಗಳ
ದಲಾಗಿಯೇ ನಾಮುಂದು ನೀಮುಂದು ಎಂದು ಸಭಾಮಂದಿರದ ಕಡೆಗೆ ಗುಂಪು
ಪಾಗಿ ಬರಹತ್ತಿದರು. ಆದರೆ ಆ ಮಂದಿರದ ಬಾಗಿಲು ಇನ್ನೂ ತೆರೆಯದ್ದರಿಂದ
ದನ್ನು ತೆರೆಯುವ ವರೆಗೆ ಅದಕ್ಕೆ ತಮ್ಮ ಬೆನ್ನು ಹಚ್ಚಿ ಕುಳಿತುಕೊಂಡರು.
ರಾರು ಜನರು ತಮ್ಮ ಊಟಗಳನ್ನು ತರಿಸಿಕೊಂಡು ಅಲ್ಲಿಯೇ ಊಟ ಮಾಡಿ
ಬಾಗಿಲು ತೆರೆದ ಕೂಡಲೆ, ಜನರು ಮುಗಿಬಿದ್ದು ಒಳಗೆ ಹೋಗಿ ಸಿಕ್ಕ ಸಿಕ್ಕ
ಳಿತುಕೊಂಡರು. ಹಾ ಹಾ ಅನ್ನುವದರೊಳಗಾಗಿ ಬಾಕುಗಳ ಮೇಲಿನ ಸ್ಥ
ಸಹ ತುಂಬಿ ಹೋಗಲು, ಬಹು ಜನರು ಖುರ್ಚಿಗಳನ್ನು ತರಿಸಿ, ಅವುಗಳನ

ಕುಗಳ ಮಧ್ಯದಲ್ಲಿಟ್ಟು, ಅವುಗಳ ಮೇಲೆ ಕುಳಿತುಕೊಂಡರು. ಸಂದಿಗೊಂದಿಗಳಲ್ಲಿಯೂ ಖಿಡಿಕಿಗಳಲ್ಲಿಯೂ ಅಡ್ಡ ಗೋಡೆಗಳ ಮೇಲೆಯೂ ಕಟ್ಟೆ ಮೆಟ್ಟಗಳ ಮೇಲೆಯೂ ಜನರು ದಟ್ಟವಾಗಿ ಕುಳಿತುಕೊಂಡರು. ಎಲ್ಲಿ ನೋಡಿದರೂ ಕಾಲನ್ನಿಡಲು ಸಹ ಸ್ಥಳವಿಲ್ಲದಂತಾಯಿತು. ಸಭಾಮಂದಿರದ ಹೊರಗೆ ಸಾವಿರಾರು ಜನರು ಗ್ಲ್ಯಾಡ್‌ಸ್ಟನ್ನನ ಆಗಮನವನ್ನು ನಿರೀಕ್ಷಿಸುತ್ತ ನಿಂತುಕೊಂಡರು. ನಿಯಮಿತ ವೇಳೆಗೆ ಅವನ ರಥವು ದೂರದಲ್ಲಿ ಬರುವದನ್ನು ನೋಡಿದ ಕೂಡಲೆ, ಅವರು ಏಕ ಕಾಲಕ್ಕೆ ಅವನ ಹೆಸರಿನಿಂದ ಜಯ ಜಯ ಧ್ವನಿಗಳನ್ನು ಮಾಡಲಾರಂಭಿಸಿದರು. ಅವನು ಆ ದಟ್ಟಣೆಯೊಳಗಿಂದ ಪಾರಾಗಿ ಬಂದು, ರಥವನ್ನಿಳಿದು, ಸಭಾಗೃಹವನ್ನು ಪ್ರವೇಶಿಸಿ, ತನ್ನ ಸ್ಥಳದ ಮೇಲೆ ಕುಳಿತುಕೊಂಡ ಕ್ಷಣವೇ ಲಿಬರಲ್ ಪಕ್ಷದ ಸಭಾಸದರು (ಕೆಲವರ ಹೊರತು) ಎದ್ದು ನಿಂತು, ಸಂತೋಷ ಸೂಚಕ ಶಬ್ದಗಳಿಂದ ಅವನ ಅಭಿನಂದನ ಮಾಡಿದರು. ಆ ಮೇಲೆ ಅವನು ಎದ್ದು ನಿಂತು, ಸಮಯಕ್ಕೆ ಸರಿಯಾಗಿ ಹೋಮ್‌ರೂಲಿನ ಮಸೂದೆಯ ಮೇಲೆ ಅತ್ಯುತ್ತಮವಾದದ್ದೊಂದು ಭಾಷಣ ಮಾಡಿದನು. ಅವನು ತನ್ನ ವಿಚಾರಗಳು ಎಲ್ಲರಿಗೂ ತಿಳಿಯುವಂತೆ ಸ್ಪಷ್ಟವಾಗಿ ವಿವರಿಸಿ ಹೇಳಿದನು. ಅವನು ಮೂರೂಅರ್ಧ ತಾಸುಗಳವರೆಗೆ ಒಂದೇ ಸಮನೆ ಅಸ್ಖಲಿತವಾಗಿ ಮಾತನಾಡಿದನು. ಐರ್ಲಂಡದ ರಾಜ್ಯದಾಡಳಿತವನ್ನು ಸಾಗಿಸತಕ್ಕ ಪಾರ್ಲಮೆಂಟಿನ ರಚನೆಯು ಹೇಗಿರತಕ್ಕದ್ದು; ಅದರ ಅಧಿಕಾರವು ಐರ್ಲಂಡದಲ್ಲಿ ಎಷ್ಟು ನಡೆಯತಕ್ಕದ್ದು; ಆ ದೇಶದ ಮೇಲೆ ಇಂಗ್ಲಂಡದ ಅಧಿಕಾರವು ಎಷ್ಟಿರತಕ್ಕದ್ದು; ಈ ವ್ಯವಸ್ಥೆಯಿಂದ ಐರ್ಲಂಡಕ್ಕೆ ಶಾಂತತೆಯು ಎಂತು ಸಂಭವಿಸುವದು; ಇದರಿಂದ ಇಂಗ್ಲೀಷ್ ಸಾಮ್ರಾಜ್ಯದ ಮಹತ್ವವೂ ಶ್ರೇಷ್ಠತ್ವವೂ ಕಡಿಮೆಯಾಗುವ ಬದಲು ಹೇಗೆ ಹೆಚ್ಚಾಗುವವು; ಅದರ ದೊಡ್ಡಸ್ತನವು ಹೇಗೆ ಬೆಳೆಯುವದು. ಇವೇ ಮುಂತಾದ ಸಂಗತಿಗಳನ್ನು ತನ್ನ ರಸಾಲವಾದ ವಾಣಿಯಿಂದ ಸಾಧಕ ಬಾಧಕ ಪ್ರಮಾಣಗಳೊಡನೆ ಸಭಿಕರ ಮನಸಿನಲ್ಲಿ ಬಿಂಬಿಸುವಂತೆ ಮಾತನಾಡಿದನು. ಅವನ ಭಾಷಣದೊಳಗೆ ಇಂಗ್ಲಂಡದ ಪಾರ್ಲಮೆಂಟಿಗೂ ಐರ್ಲಂಡದ ಪಾರ್ಲಮೆಂಟಿಗೂ ಏನೂ ಸಂಬಂಧವಿರಬಾರದು ಎಂಬದೇ ಮುಖ್ಯವಾಗಿತ್ತು. ಇದೇ ಮಾತು ಐರಿಷ್ ಜನರಿಗೆ ಬೇಕಾಗಿತ್ತು. ಇದನ್ನು ಕೇಳಿ ಅವರು ಪರಮ ಹರ್ಷಿತರಾದರು. ಅವರ ಪಕ್ಷದವರ ಮುಖ ಮುದ್ರೆಗಳಲ್ಲಿಯೂ ಆನಂದದ ಚಿಹ್ನಗಳು ಉಕ್ಕಹತ್ತಿದವು. ಅವನು ಮಾತನಾಡುತ್ತಿರುವಾಗ್ಗೆ, ಆ ಪ್ರಚಂಡವಾದ ಸಭೆಯಲ್ಲಿದ್ದ ಸಾವಿರಾರು ಜನರು ನಾಗಸ್ವರಕ್ಕೆ ಮೋಹಿಸಿದ ಸರ್ಪಗಳಂತೆ ದಂಗು ಬಡಿದು ಸುಮ್ಮನೆ ಕುಳಿತುಕೊಂಡಿದ್ದರು. ಅವನ ಭಾಷಣವು ಮುಗಿದ ಮೇಲೆ, ತುಸು ಹೊತ್ತಿನ ತನಕ ಆ ಸಭೆಯು ನಿಃಶಬ್ದವಾಗಿತ್ತು. ಬಳಿಕ ಎರಡೂ ಪಕ್ಷದ ಜನರು ಆ ಮಸೂದೆಯ ಮೇಲೆ ಭಾಷಣ ಮಾಡಿದರು. ಗ್ಲ್ಯಾಡ್‌ಸ್ಟನ್ನನ ವಿಚಾರಗಳು ಲಿಬರಲ್ ಪ

ಕ್ಷದೊಳಗಿನ ಕೆಲವು ಜನ ಸಭಾಸದರ ಮನಸಿಗೆ ಬಾರದ್ದರಿಂದ, ಅವರು ಆ ಪಕ್ಷವನ್ನು ಬಿಟ್ಟು, ವಿರುದ್ಧ ಪಕ್ಷವನ್ನು ಅಂಗೀಕರಿಸಿ, ಅವನ ಮಸೂದೆಯು ವಿರುದ್ಧವಾಗಿ ಮಾತನಾಡಿದರು. ಅವರು ತೆಗೆದುಕೊಂಡ ಆಕ್ಷೇಪಗಳೆಲ್ಲ ನಿರರ್ಥಕವಾದವುಗಳಾಗಿದ್ದಿಲ್ಲ. ಈ ಮಸೂದೆಯ ಪ್ರಕಾರ ಐರ್ಲಂಡಕ್ಕೆ ಸ್ವತಂತ್ರವಾದದ್ದೊಂದು ಪಾರ್ಲಮೆಂಟನ್ನು ಕೊಟ್ಟ ಬಳಿಕ, ಇಂಗ್ಲಂಡ್, ಸ್ಕಾಟಲಂಡ್, ಮತ್ತು ವೇಲ್ಸ ದೇಶಗಳಲ್ಲಿರುವ ಐರಿಷ್ ಪ್ರಜೆಗಳಿಗೆ ಸಂಬಂಧಪಟ್ಟ ವಿಚಾರಗಳು ಯಾವ ಪಾರ್ಲಮೆಂಟಿನಲ್ಲಿ ನಡೆಯತಕ್ಕದ್ದು? ಈ ಮೂರು ದೇಶಗಳಲ್ಲಿರುವ ರೋಮನ್ ಕ್ಯಾಥೋಲಿಕ್ ಪಂಥದ ಐರಿಷ್ ಜನರ ಪಕ್ಷವನ್ನು ಯಾವ ಪಾರ್ಲಮೆಂಟಿನವರು ವಹಿಸತಕ್ಕದ್ದು? ಐರ್ಲಂಡವು ಇಂತಿಂಥ ಕರಗಳನ್ನು ಕೊಡತಕ್ಕದ್ದೆಂದು ನಿರ್ಣಯಿಸುವ ಅಧಿಕಾರವು ಇಂಗ್ಲಿಷ್ ಪಾರ್ಲಮೆಂಟಿಗಿರತಕ್ಕದ್ದೆಂತಲೂ, ಆ ಪಾರ್ಲಮೆಂಟಿನಲ್ಲಿ ಐರಿಷ್ ಪ್ರತಿನಿಧಿಗಳು ಯಾರೂ ಇರಕೂಡದೆಂತಲೂ ಹೇಳಲ್ಪಟ್ಟಿತು. ಆದರೆ ಈ ವ್ಯವಸ್ಥೆಯಿಂದ, ಕರ ಕಟ್ಟುವ ಪ್ರಸಂಗಗಳಲ್ಲಿ, ಕರ ಕೊಡುವವರ ಅನುಮತಿಯನ್ನು ತೆಗೆದುಕೊಳ್ಳಲಿಕ್ಕೆ ಬೇಕು, ಕರವೂ ಜನ ಸಮ್ಮತಿಯೂ ಅವಳಿ ಜವಳಿ ಮಕ್ಕಳಂತೆ ಕೂಡಿರಲಿಕ್ಕೆ ಬೇಕು, ಅವುಗಳನ್ನು ಎಂದೂ ಅಗಲಿಸಬಾರದು ಎಂಬ ಇಂಗ್ಲಿಷ್ ರಾಜ್ಯಪದ್ಧತಿಯ ಮುಖ್ಯವಾದ ಸೂತ್ರಕ್ಕೆ ಬಾಧ ಬರುವದಿಲ್ಲವೋ? ಇವೇ ಮುಂತಾದ ಹಲವು ಆಕ್ಷೇಪಗಳನ್ನು ತೆಗೆದು, ಅವರು ತಮ್ಮ ತಮ್ಮ ಪಾಂಡಿತ್ಯವನ್ನು ತೋರಿಸಿದರು. ಅವರಲ್ಲಿ ಜಾನ್ ಬ್ರಾಯಿಟನೆಂಬ ಪ್ರಸಿದ್ಧ ವಾಗ್ಮಿದನು ಒಬ್ಬನಾಗಿದ್ದನು. ಅವನ ಭಾಷಣವು ಗ್ಲ್ಯಾಡ್‌ಸ್ಟನ್ನನ ವಿಷಯವಾಗಿ ಬಹು ಜನರ ಮನಸನ್ನು ದೂಷಿತವಾಗಿ ಮಾಡಿತು. ಮಧ್ಯರಾತ್ರಿಯ ಸುಮಾರಿಗೆ ಗ್ಲ್ಯಾಡ್‌ಸ್ಟನ್ನನು ಅವರ ಆಕ್ಷೇಪಗಳಿಗೆ ಉತ್ತರ ಕೊಡುವದಕ್ಕಾಗಿ ಎದ್ದು ನಿಂತು ಗಂಭೀರವಾದ ಧ್ವನಿಯಿಂದ ಸಭಾಸದರನ್ನು ಉದ್ದೇಶಿಸಿ ಹೇಳಿದ್ದೇನಂದರೆ:—"ಮಹನೀಯರೇ, ವಿಚಾರ ಮಾಡಿ ನೋಡಿದರೆ, ಹೋಮರೂಲಿನ ಪಕ್ಷವು ಕ್ರಮೇಣ ಬಲಗೊಳ್ಳುತ್ತಲೂ ಅದರ ಪ್ರತಿ ಪಕ್ಷವು ನಿರ್ಬಲವಾಗುತ್ತಲೂ ನಡೆದಿರುತ್ತವೆಂದು ನಿಮ್ಮ ಲಕ್ಷದಲ್ಲಿ ಬರುವದು. ಒಂದಿಲ್ಲೊಂದು ದಿನ ಐರ್ಲಂಡದ ಬಯಕೆಯು ನಿಶ್ಚಯವಾಗಿ ಈಡೇರುವದೆಂದು ಭವಿಷ್ಯತ್ಕಾಲವು ಸೂಚಿಸುತ್ತಿದೆ. ಆದರೆ ಆ ದಿನವು ತಾನಾಗಿಯೇ ಬರುವ ವರೆಗೆ ಕಷ್ಟದಿಂದ ಕಾಲವನ್ನು ಕಳೆಯಲಾರದೆ, ಆ ದೇಶವು ತನ್ನನ್ನು ಹೊರಗೈಲೆ ಹೊಡೆಯಲಿಕ್ಕಿಲ್ಲೆಂಬ ನಂಬಿಗೆಯಿಂದ ನಿಮ್ಮ ಬಳಿಗೆ ಬಂದು, ಎರಡೂ ಕೈಗಳನ್ನು ಜೋಡಿಸಿ, ನಿಮ್ಮ ಮುಂದೆ ನಿಂತುಕೊಂಡು, ಇದೊಂದು ಮಾತನ್ನು ನಡಿಸಿಕೊಡಬೇಕೆಂದು ಅಂಗಲಾಚಿ ಬೇಡಿಕೊಳ್ಳುತ್ತದೆ. ಆಶೆಯಿಂದ ಬಂದಿರುವ ಆ ಬಡದೇಶವನ್ನು ನಿರಾಶಿತರಾಗಿ ಮಾಡಿ ಹಿಂದಕ್ಕಟ್ಟಬೇಡಿರಿ. ಅದರ ಪ್ರಾರ್ಥನೆಯು

ಸತ್ಯಕ್ಕೂ ನ್ಯಾಯಕ್ಕೂ ನೀತಿಗೂ ಅನುಸರಿಸಿದೆ. ಅದು ತಾನು ಮಾಡಿದ ಅಪರಾಧಗಳನ್ನೆಲ್ಲ ಕ್ಷಮಿಸಿ; ತನ್ನನ್ನು ಉದ್ಧರಿಸಬೇಕೆಂದು ನಿಮ್ಮನ್ನು ಸೆರಗೊಡ್ಡಿ ಬೇಡಿಕೊಳ್ಳುತ್ತದೆ. ಅದು ಬೇಡುವದನ್ನು ದಯವಿಟ್ಟು ನೀವು ಕೊಟ್ಟರೆ ಆ ದೇಶಕ್ಕಿಂತ ನಿಮ್ಮ ದೇಶಕ್ಕೆ ಹೆಚ್ಚು ಹಿತವಾಗುವದು, ನಿಮ್ಮ ಕೀರ್ತಿಯು ಜಗತ್ತಿನ ತುಂಬಾ ಪಸರಿಸಿ ಹಬ್ಬುವದು, ನಿಮ್ಮ ದೇಶದಲ್ಲಿ ಯಾರಿಗೂ ನಷ್ಟ ಉಂಟಾಗದೆ, ಆ ದೇಶದಲ್ಲಿ ಸರ್ವತ್ರ ಶಾಂತಿಯೂ ಸುಖವೂ ಸಂಪತ್ತೂ ಅಭಿವೃದ್ಧಿಸುವವು. ನೀವು ಸೂಕ್ಷ್ಮರಾಗಿ [illegible] ಈ ಮಸೂದೆಯನ್ನು ಅಲ್ಲಗಳೆಯುವ ಪೂರ್ವದಲ್ಲಿ ಈ ಎಲ್ಲ ಸಂಗತಿಗಳನ್ನು ಮನಸ್ಸಿನಲ್ಲಿ ತಂದು, ತೂಗಿ ನೋಡಿರಿ, ಸೋಸಿ ನೋಡಿರಿ, ಅವುಗಳ ಬಗ್ಗೆ ಚೆನ್ನಾಗಿ ವಿಚಾರ ಮಾಡಿರಿ. ಈ ವಿಚಾರವು ಕ್ಷಣಿಕವಾದದ್ದಲ್ಲ; ವರ್ಷಾನುವರ್ಷದದ್ದು, ಯುಗಯುಗಾಂತರದದ್ದೂ ಆಗಿರುವದು. ಇದನ್ನು ಮಾತ್ರ ಲಕ್ಷ್ಯದಲ್ಲಿಡಿರಿ." ಆ ದಯಾನಿಧಿಯಾದ ಗ್ಲ್ಯಾಡ್‌ಸ್ಟನ್ನನು ಇಷ್ಟು ಕಂಠಶೋಷ ಮಾಡಿ, ಐರ್ಲಂಡದ ವಿಷಯವಾಗಿ ಪರಿಪರಿಯಿಂದ ತಿಳಿಸಿ ಹೇಳಿದರೂ, ನಾನಾವಿಧವಾಗಿ ಬೇಡಿಕೊಂಡರೂ ಸಭಿಕರ ಮನಸ್ಸು ದ್ರವಿಸಲಿಲ್ಲ; ಅವರ ಮನಸ್ಸಿನಲ್ಲಿ ಸೇರಿಕೊಂಡಿದ್ದ ದುರಾಗ್ರಹವು ಕಡಿಮೆಯಾಗಲಿಲ್ಲ. ಆ ಮೇಲೆ, ಕೆಲವು ದಿವಸಗಳ ತರುವಾಯ ಅಂದರೆ ಏಪ್ರಿಲ ೧೩ನೆಯ ತಾರೀಖಿನ ದಿವಸ ಆ ಮಸೂದೆಯನ್ನು ಪಾರ್ಲಮೆಂಟಿನಲ್ಲಿ ಎರಡನೆಯ ಸಾರೆ ಓದಲಿಕ್ಕೆ ಬಿಡತಕ್ಕದ್ದೋ ಹೇಗೆ? ಎಂಬ ಬಗ್ಗೆ ಸಭಾ[illegible]ರ ಮತಗಳನ್ನು ತೆಗೆದುಕೊಳ್ಳಲು, ಅದರಲ್ಲಿ ೩೧೧ ಅನುಕೂಲ, ೩೪೧ ಪ್ರತಿ[illegible] ಮತಗಳು ಬಿದ್ದವು. ಈ ಮೇರೆಗೆ ೩೦ ಪ್ರತಿಕೂಲ ಮತಗಳು ಹೆಚ್ಚು ಬಿ[illegible] ಆ ಮಸೂದೆಯು ನಿರಾಕರಿಸಲ್ಪಟ್ಟಿತು. ಈ ೩೪೧ ಪ್ರತಿಕೂಲ ಮತಗಳ[illegible]ಬರಲ್ ಪಕ್ಷದವರ ಮತಗಳಿದ್ದವು; ಅಂದರೆ ೯೦ ಜನರು ಆ ಮಸೂ[illegible] ಅವನ ಪಕ್ಷವನ್ನು ಬಿಟ್ಟು ಪ್ರತಿಪಕ್ಷಕ್ಕೆ ಕೂಡಿಕೊಂಡಿದ್ದರು. ಇದ[illegible] ಗ್ಲ್ಯಾಡ್‌ಸ್ಟನ್ನನು ಆಶ್ಚರ್ಯಪಟ್ಟನೇ ಹೊರತು ನಿರುತ್ಸಾಹನಾಗಲಿ[illegible]ಂದರೆ ತನ್ನ ಕರ್ತವ್ಯವನ್ನು ಮಾಡುವದಿಷ್ಟೇ ತನ್ನ ಕಾರ್ಯವೆಂತಲೂ, [illegible]ಫಲಗಳನ್ನು ಕೊಡುವ ಕಾರ್ಯವು ದೇವರದೆಂತಲೂ ಅವನು ಸಂಪೂ[illegible]ಗಿ ನಂಬುತ್ತಿದ್ದನು. ದೇವರ ಮೇಲೆ ಭಾರ ಹಾಕಿ ನಿರಪೇಕ್ಷ ಬುದ್ಧಿಯಿಂದ [illegible]ಗಳನ್ನು ನಡೆಸುವದು ಸಜ್ಜನರ ಸ್ವಭಾವವಾಗಿದೆ.

ಲಿಬರಲ್ [illegible] ಪ ಧಾನ [illegible] ಲ್ಲಿ ಕಾನ್‌ಸರ್ವೇಟೀವ್

ಮೇ[illegible]ಹೇಳಿದ ಮೇರೆಗೆ ಹೋಮರೂಲಿನ ವಿಷಯವಾಗಿ ಪಾರ್ಲಮೆಂಟಿನಲ್ಲಿ ಒಡಕು ಹುಟ್ಟಿದ್ದನ್ನು ನೋಡಿ ಗ್ಲ್ಯಾಡ್‌ಸ್ಟನ್ನನೂ ಅವನ ಅನುಯಾಯಿಗಳೂ ಈ ಪಾರ್ಲಮೆಂಟನ್ನು ಮುರಿದು, ಪ್ರತಿನಿಧಿಗಳನ್ನು ಹೊಸದಾಗಿ ಆರಿಸಿಕೊಂಡು

ಪಕ್ಷದ ಪ್ರಧಾನ ಮಂಡಲವು ಸ್ಥಾಪಿಸಲ್ಪಟ್ಟದ್ದು, ೧೮೭೬, ಜುಲಾಯಿ.

ಪಾರ್ಲಮೆಂಟಿಗೆ ಕಳುಹಿಸಬೇಕೆಂದು ಪ್ರಜೆಗಳಿಗೆ ಬೇಡಿಕೊಂಡರು. ಅದರಂತೆ ಜುಲಾಯಿ ತಿಂಗಳಿನಲ್ಲಿ ಪ್ರತಿನಿಧಿಗಳು ಹೊಸದಾಗಿ ಆರಿಸಲ್ಪಟ್ಟರು. ಲಿಬರಲ್ ಪಕ್ಷದವರು ಹೋಮರೂಲಿನ ಬೆನ್ನು ಕಟ್ಟಿ ಈ ಪರಿ ಬಡದಾಡುವದು ಪ್ರಜೆಗಳ ಮನಸಿಗೆ ಬಂದಿದ್ದಿಲ್ಲ. ಅದು ಕಾರಣ ಈ ಆಯುವಿಕೆಯಲ್ಲಿ ೩೯೫ ಜನ ಕಾನ್‌ಸರ್ವೇಟೀವ್ ಪಕ್ಷದವರೂ ೨೮೬ ಜನ ಲಿಬರಲ್ ಪಕ್ಷದವರೂ ಅಂದರೆ ಲಿಬರಲ್ ಪಕ್ಷದವರಿಗಿಂತ ಕಾನ್‌ಸರ್ವೇಟೀವ್ ಪಕ್ಷದವರು ೧೧೧ ಜನರು ಹೆಚ್ಚು ಆರಿಸಲ್ಪಟ್ಟರು. ಈ ೩೯೫ ಕಾನ್‌ಸರ್ವೇಟೀವ್ ಪ್ರತಿನಿಧಿಗಳಲ್ಲಿ ೭೮ ಜನರು ಹೋಮರೂಲಿನ ಮೇಲೆ ಸಿಟ್ಟಿಗೆದ್ದು, ಲಿಬರಲ್ ಪಕ್ಷವನ್ನು ಬಿಟ್ಟು, ಇತ್ತಿತ್ತಲಾಗಿ ಕಾನ್‌ಸರ್ವೇಟೀವ್ ಪಕ್ಷವನ್ನು ಸ್ವೀಕರಿಸಿದವರಾಗಿದ್ದರು. ಈ ಮೇರೆಗೆ ಹೊಸ ಪಾರ್ಲಮೆಂಟಿನಲ್ಲಿ ಕಾನ್‌ಸರ್ವೇಟೀವ್ ಪಕ್ಷದ ಜನರು ಹೆಚ್ಚಾಗಲು, ಲಿಬರಲ್ ಪಕ್ಷದ ಮಂತ್ರಿ ಮಂಡಲದವರು ಇನ್ನು ಮೇಲೆ ತಮ್ಮ ಅಧಿಕಾರವು ನಿರಾತಂಕವಾಗಿ ನಡೆಯದೆಂದು ತಿಳಿದುಕೊಂಡು, ತಮ್ಮ ಆಡಳಿತವನ್ನು ಬಿಟ್ಟುಕೊಟ್ಟರು. ಇದೇ ಮೇರೆಗೆ ಗ್ಲ್ಯಾಡ್‌ಸ್ಟನ್ನನಾದರೂ ತನ್ನ ಮುಖ್ಯ ಮಂತ್ರಿಯ ಸ್ಥಳಕ್ಕೆ ರಾಜೀನಾಮೆಯನ್ನು ಕೊಟ್ಟನು. ಆ ಮೇಲೆ ಪದ್ಧತಿಯ ಪ್ರಕಾರ ಮಹಾರಾಣಿ ಸಾಹೇಬರು ಕಾನ್‌ಸರ್ವೇಟೀವ್ ಪಕ್ಷದ ಮುಂದಾಳಾದ ಲಾರ್ಡ್‌ಸಾಲಿಸಬರಿಯನ್ನು ತಮ್ಮ ಬಳಿಗೆ ಕರಿಸಿಕೊಂಡು, ಅವನಿಗೆ ಮುಖ್ಯ ಮಂತ್ರಿಯ ಉದ್ಯೋಗವನ್ನು ಕೊಟ್ಟರು. ಈ ಮೇರೆಗೆ ಲಿಬರಲ್ ಪಕ್ಷದ ಪ್ರಧಾನ ಮಂಡಲದ ಸ್ಥಳದಲ್ಲಿ ಕಾನ್‌ಸರ್ವೇಟೀವ್ ಪಕ್ಷದ ಪ್ರಧಾನ ಮಂಡಲವು [illegible]ಲ್ಪಟ್ಟಿತು.

ಐರ್ಲಂಡದ ಮುಂದಾಳಾದ ಪಾರ್ನೆಲ್ಲನು ಲೋಕಾಪವಾದಕ್ಕೆ ಗುರಿಯಾದದ್ದು; ಮತ್ತು ಅವನ ಮರಣವು, ೧೮೯೧ ಆಕ್ಟೋಬರ-

ಇಷ್ಟಾದರೂ ಪಾರ್ಲಮೆಂಟಿನಲ್ಲಿ ಐರ್ಲಂಡದ ಪಕ್ಷವು ಮಾ[illegible] ಪ್ರಬಲಸ್ಥಿತಿಯಲ್ಲಿಯೇ ಇತ್ತು. ಅದರ [illegible] ನ್ನೆಲ್ಲ ಪಾರ್ನೆಲ್ಲನು ಯಥಾಸ್ಥಿತವಾಗಿ [illegible] ದ್ದನು. ಆದರೆ ಆ ಪಕ್ಷದ ದುರ್ದೈವದ [illegible] ದದ್ದೊಂದು ಸಂಗತಿಯು ವರ್ತಿಸಿ, ಅದ[illegible] ಟ್ಟಸಿ, ಅದನ್ನು ತೀರ ಮೂಲುಗುಂಪು [illegible] ಬಿಟ್ಟಿತು. ಆ ಸಂಗತಿಯು ಯಾವುದೆಂದರೆ:—ಓಸಿ[illegible] ಎಂಬವ[illegible] ಗೂ ಪಾರ್ನೆಲ್ಲನಿಗೂ ಗೆಳೆತನವಿತ್ತು. [illegible] ಪಾರ್ನೆಲ್ಲನ[illegible] ಓಸಿಯಾನ ಹೆಂಡತಿಯ ವಿಷಯವಾಗಿ ಲೋಕಾಪವಾದಕ್ಕೆ ಗುರಿಯಾದನು. ಈ ಪ್ರಕರಣವು ಬೆಳೆಯುತ್ತ ಬೆಳೆಯುತ್ತ ನ್ಯಾಯಾಸನದ ವರೆಗೆ ಹೋಯಿತು. ಅಲ್ಲಿ [illegible]

ವನು ಅಪರಾಧಿಯೋ ಎಂದು ನಿರ್ಣಯಿಸಲ್ಪಟ್ಟನು. ಆ ಮೇಲೆ ಆ ಸ್ತ್ರೀಯು ತನ್ನ
ಗಂಡನನ್ನು ಬಿಟ್ಟು, ಪಾರ್ನೆಲ್ಲನನ್ನು ಮದುವೆಯಾದಳು. ಇದರಿಂದ ಅವನ ಗುಣ
ದ ವಿಷಯವಾಗಿ ಜನರಲ್ಲಿ ಸಂಶಯ ಹುಟ್ಟಿ, 'ಇನ್ನು ಮೇಲೆ ಅವನು ಸಾರ್ವಜನಿಕ
ಕೃತ್ಯಗಳ ಮುಂದಾಳಾಗಿರುವದು ಉಚಿತವೋ ಹೇಗೆ?' ಎಂಬ ಬಗ್ಗೆ ಚರ್ಚೆಗಳು
ನಡೆಯ ಹತ್ತಿದವು. ಮೊದಲನೆಯ ಪಕ್ಷದವರು 'ಇವೆಲ್ಲ ವಿಷಯಗಳು ವ್ಯಕ್ತಿ
ಮಾತ್ರದವು. ಇವುಗಳಿಗೂ ಸಾರ್ವಜನಿಕ ಕೃತ್ಯಗಳಿಗೂ ಏನೂ ಸಂಬಂಧವಿಲ್ಲ;
ಅದು ಕಾರಣ ಎಂದಿನಂತೆ ನಮ್ಮ ಪಕ್ಷದ ಪ್ರಮುಖತ್ವವು ಅವನ ಕಡೆಗೇ ಇರತ
ಕ್ಕದ್ದು' ಎಂದು ಹೇಳಿದರು. ಎರಡನೆಯ ಪಕ್ಷದವರು 'ಅವನ ಈ ಕೃತ್ಯವನ್ನು ಜನ
ರು ಮರೆಯುವವರೆಗೆ ಕನಿಷ್ಟಪಕ್ಷಕ್ಕೆ ೫|೬ ತಿಂಗಳು ಪಾರ್ನೆಲ್ಲನು ಪಾರ್ಲಮೆಂ
ಟ ಸಭೆಯನ್ನು ಬಿಡಲಿಕ್ಕೆ ಬೇಕು' ಎಂದು ಹಟ ಹಿಡಿದರು. ಸ್ವತಃ ಪಾರ್ನೆಲ್ಲ
ನು ಮೊದಲನೆಯ ಪಕ್ಷದವನಾಗಿದ್ದನು. ಆದರೆ ಆ ಪಕ್ಷವು ಸಣ್ಣದಾಗಿಯೂ ಎರ
ಡನೆಯದು ದೊಡ್ಡದಾಗಿಯೂ ಇದ್ದವು. ಇವೆರಡು ಪಕ್ಷದವರಲ್ಲಿ ಮನಸ್ತಾಪವು
ಹೆಚ್ಚಾಗುತ್ತ ಹೋದಂತೆ ಅವರು ಐರ್ಲಂಡದ ಕೆಲಸವನ್ನು ಬದಿಗಿಟ್ಟು, ತಮ್ಮ
ತಮ್ಮೊಳಗೆ ಹೆಚ್ಚು ಹೆಚ್ಚು ಜಗಳಾಡ ಹತ್ತಿದರು. ಪಾರ್ನೆಲ್ಲನು ತೀರ ಸಿಟ್ಟಿನ
ಸ್ವಭಾವದವನಾಗಿದ್ದನು. ಅದರಲ್ಲಿ ಈ ಅಪವಾದದಿಂದಂತೂ ಅವನ ತಲೆಯೇ ತಿರು
ಗಿತು. ಆ ಮೇಲೆ ಕೇಳುವದೇನಿದೆ? ಅವನು ದೊಡ್ಡದೊಂದು ಪ್ರಕಟಣೆಯ ಪ
ತ್ರವನ್ನು ತನ್ನ ಸಹಿಯಿಂದ ಮುದ್ರಿಸಿ ಪ್ರಕಟಿಸಿದನು. ಅದರಲ್ಲಿ ಅವನು ಗ್ಲ್ಯಾಡ್
ಸ್ಟನ್ನನನ್ನು ಮೊದಲು ಮಾಡಿ ಪ್ರತಿಪಕ್ಷದವರನ್ನೆಲ್ಲ ಪರಿಪರಿಯಾಗಿ ನಿಂದಿಸಿದ್ದನು.
ಇದನ್ನು ನೋಡಿ ದೊಡ್ಡ ದೊಡ್ಡ ಜನರು ಬಹಳೇ ಖೇದಗೊಂಡರು. ಅಷ್ಟರಲ್ಲಿ ಅ
ವನು ದೆವ್ವ ಬಡಿದವರಂತೆ ಎಚ್ಚರದಪ್ಪಿದವನಾಗಿ, ದೇಶದ ತುಂಬ ಓಡಾಡುವದೂ
ಸಭೆಗಳನ್ನು ನೆರೆಯಿಸುವದೂ ವ್ಯಾಖ್ಯಾನಗಳನ್ನು ಕೊಡುವದೂ ಹಸ್ತಪತ್ರಗಳನ್ನು
ಮುದ್ರಿಸುವದೂ ಪುಸ್ತಕಗಳನ್ನು ಬರೆಯುವದೂ ಇವೇ ಮುಂತಾದ ಕೃತ್ಯಗಳನ್ನು
ಅಹೋರಾತ್ರಿ ಮಾಡತೊಡಗಿದನು. ಅವನ ಗೆಳೆಯರು 'ಇದು ಸರಿಯಲ್ಲ, ಇದರ
ಪರಿಣಾಮವು ಹಿತಕರವಾಗಲಾರದು' ಎಂದು ಕೈಯಲ್ಲಿ ಕಡ್ಡಿ ಕೊಟ್ಟು ಹೇಳಿದರೂ
ತುಸು ವಿಶ್ರಾಂತಿ ತೆಗೆದುಕೊಳ್ಳಬೇಕೆಂದು ಗದ್ದ ತಟ ಹಿಡಿದು ಹೇಳಿದರೂ ಅವನು
ಕೇಳಲಿಲ್ಲ. ಅವನು ಅವರಿಗೆ "ಇನ್ನು ಮೇಲೆ ವಿಶ್ರಾಂತಿ ಎಂಬ ನುಡಿಯನ್ನು ನನ್ನ
ಮುಂದೆ ನುಡಿಯಬೇಡಿರಿ; ವಿಶ್ರಾಂತಿಯು ನನ್ನ ಅಂತ್ಯದಲ್ಲಿಯೇ ಸರಿ" ಎಂದು
ಹೇಳಿದನು; ಈ ಪರಿಯಿಂದ ಅವನು ಹಗಲಿರುಳು ಅಳತೆಗೆಟ್ಟು ದುಡಿಯಲು, ಅವ
ನ ಆರೋಗ್ಯವು ಕೆಟ್ಟಿತು; ಅದರಲ್ಲಿ ಜಡ್ಡು ಕೂಡಿತು. ಇವುಗಳಿಂದ ಅವನು ಸ
ನ್ ೧೮೯೧ನೆಯ ಇಸವಿಯ ಅಕ್ಟೋಬರ ತಿಂಗಳಿನಲ್ಲಿ ತೀರಿಕೊಂಡನು. ಈ ಹೊ

ಷ್ಟು ದಿವಸಗಳ ವರೆಗೆ ಗ್ಲ್ಯಾಡಸ್ಟನ್ನನು ಮಾಡಿದ ಭಾಗೀರಥ ಪ್ರಯತ್ನಗಳೆಲ್ಲ ನಿಷ್ಪ್ರಯೋಜನವಾಗಿ, ಆ ಮಸೂದೆಯ ಗತಿಯು ತ್ರಿಶಂಕುವಿನ ಪರಿಯಾಯಿತು. ಅದರ ವಿಷಯವಾಗಿ ಪಾರ್ಲಮೆಂಟ್ ಸಭೆಯಲ್ಲಿ ಒಟ್ಟು ೮೦ ದಿವಸಗಳ ವರೆಗೆ ವಾದವಿವಾದಗಳು ನಡೆದವು. ಅದರೊಳಗಿನ ೩ನೆಯ ಮತ್ತು ೪ನೆಯ ಕಲಮುಗಳನ್ನು ತಿದ್ದುವ ವಿಷಯದಲ್ಲಿಯೇ ೧೫೧ ಜನರು ಸೂಚನಾರೂಪವಾಗಿ ಮಾತುಗಳನ್ನಾಡಿದರು. ಅವರ ಭಾಷಣಗಳು ಪಾರ್ಲಮೆಂಟಿನ ಒಟ್ಟು ೧೧೦ ತಾಸುಗಳನ್ನು ತೆಗೆದುಕೊಂಡವು. ಆ ಮಸೂದೆಯ ವಿರುದ್ಧವಾಗಿ ೯೩ಕ್ಕಿಂತ ಹೆಚ್ಚು ಜನರು ಭಾಷಣಗಳನ್ನು ಮಾಡಿದರು. ಇವುಗಳ ಸಲುವಾಗಿ ಪಾರ್ಲಮೆಂಟಿನ ೧೫೨ ಅಮೂಲ್ಯ ತಾಸುಗಳು ಕಳೆದುಹೋದವು. ಅದರ ಬೆನ್ನು ಕಟ್ಟಿದವರ ಭಾಷಣಗಳು ಒಟ್ಟು ೫೭ ತಾಸುಗಳಿಗಿಂತ ಹೆಚ್ಚು ವೇಳೆಯನ್ನು ತೆಗೆದುಕೊಳ್ಳಲಿಲ್ಲ. ಇಷ್ಟು ಪಾರ್ಲಮೆಂಟಿನ ವೇಳೆಯನ್ನೂ ಬಹು ಜನ ಪ್ರಸಿದ್ಧ ಪುರುಷರ ಮಾನಸಿಕಶ್ರಮವನ್ನೂ ವೆಚ್ಚಮಾಡಿ ಸಭೆಯ ಒಪ್ಪಿಗೆಯನ್ನು ಪಡೆದು ಹೊರಬಿದ್ದ ಮಸೂದೆಯನ್ನು ಲಾರ್ಡರಸಭೆಯವರು ನಿರಾಕರಿಸಿಬಿಟ್ಟರು! ಐರ್ಲಂಡಕ್ಕೆ ಸುಖಶಾಂತಿಗಳನ್ನು ಕೊಡತಕ್ಕ ಈ ಮಸೂದೆಯನ್ನು ನಿರಾಕರಿಸಿದ ದಿವಸ ಆ ಸಭೆಯಲ್ಲಿ ಕೂಡಿದಷ್ಟು ಲಾರ್ಡರು ಹಿಂದಿನ ಬಹುವರ್ಷಗಳಲ್ಲಿ ಎಂದೂ ಕೂಡಿದ್ದಿಲ್ಲವಂತೆ! ಈ ಮಸೂದೆಯು ಹಾಡು ಹೀಗಾದದ್ದನ್ನು ನೋಡಿ, ಇದರ ಸಂಪೂರ್ಣಾಭಿಮಾನಿಯಾದ ಗ್ಲ್ಯಾಡ್‌ಸ್ಟನ್ನನಿಗೆ ಎಷ್ಟು ಖೇದವಾಗಿರಬಹುದೆಂಬದನ್ನು ವಾಚಕರು ಸುಲಭವಾಗಿ ಊಹಿಸಬಹುದು.

ಗ್ಲ್ಯಾಡ್‌ಸ್ಟನ್ನನು ಕಡೆಯಸಾರೆ ತನ್ನ ಮುಖ್ಯಮಂತ್ರಿಯ ಉದ್ಯೋಗವನ್ನು ಬಿಟ್ಟುಕೊಟ್ಟದ್ದು, ೧೮೯೪ ಮಾರ್ಚ ೩.

ಮುಂದೆ ಕೆಲವು ದಿವಸಗಳು ಗತಿಸುವಷ್ಟರಲ್ಲಿಯೇ ಗ್ಲ್ಯಾಡ್‌ಸ್ಟನ್ನನ ಕೈಕೆಳಗಿನ ಮಂತ್ರಿಮಂಡಲದವರು ಕೆಲವು ಕಾರಣಗಳ ಸಲುವಾಗಿ ಇಂಗ್ಲಂಡದ ಹಡಗುಪಡೆಯನ್ನು ಬಲಿಸುವ ಅಪೇಕ್ಷೆಯಿಂದ ಪಾರ್ಲಮೆಂಟಿನವರ ಬಳಿಯಲ್ಲಿ ಹಣ ಬೇಡುವದಕ್ಕೆ ಸಿದ್ಧರಾದರು. ಹಡಗುಪಡೆಯನ್ನು ಬಲಿಸುವದೆಂದರೆ ಯುದ್ಧದ ಸಿದ್ಧತೆಯೇ, ಬಲಾತ್ಕಾರದ ಹವಣಿಕೆಯೇ, ರಕ್ತಪಾತದ ಉದ್ಯೋಗವೇ ಸರಿ. ಅದು ಕಾರಣ ಈ ಕೃತ್ಯಗಳು ಗ್ಲ್ಯಾಡ್‌ಸ್ಟನ್ನನ ಸಾಧುವೃತ್ತಿಗೆ ತೀರ ವಿಪರೀತವಾಗಿದ್ದವು. ಈ ಸಂಗತಿಯನ್ನು ಮಂತ್ರಿಮಂಡಲದವರು ದುರ್ಲಕ್ಷಿಸಿ ಹಣಬೇಡುವ ಸಂಗತಿಯ ವಿಷಯವಾಗಿ ಚರ್ಚೆ ನಡೆಯಿಸಿ, ಕಟ್ಟಕಡೆಗೆ ಪಾರ್ಲಮೆಂಟಿನವರಿಂದ ಹಣ ಬೇಡಬೇಕೆಂದು ಬಹುಮತದಿಂದ ನಿರ್ಣಯಿಸಿದರು. ಈ ನಿರ್ಣಯಕ್ಕೆ ಗ್ಲ್ಯಾಡ್‌ಸ್ಟನ್ನನು ತನ್ನ ಮನಸಿನ ವಿರುದ್ಧವಾಗಿ ಒಪ್ಪಿಕೊಳ್ಳಬೇಕಾಯಿತು. ಇದರ ಹೊರತು ಮುಪ್ಪಿನಿಂದ ಅವನ ಪ್ರಕೃತಿಯು ದಿನದಿನಕ್ಕೆ ಅಶಕ್ತವಾಗಹತ್ತಿತ್ತು. ಅವನ

ಕಿವಿಗಳು ಮಂದವಾಗುತ್ತ ನಡೆದಿದ್ದವು. ಇದಲ್ಲದೆ ಅವನ ಎರಡೂ ಕಣ್ಣುಗಳಿಗೆ ಪರೆಬಂದು ಅವು ಹೆಚ್ಚು ಹೆಚ್ಚು ಕಾಣಿಸದಂತೆ ಆಗಹತ್ತಿದ್ದವು. ಇವೆಲ್ಲ ಸಂಗತಿಗಳನ್ನು ಅವನ ಕುಟುಂಬದವರೂ ಆಪ್ತರಿಷ್ಟರೂ ಇಷ್ಟ ಮಿತ್ರರೂ ಲಕ್ಷದಲ್ಲಿ ತಂದು, ಅವನಿಗೆ 'ಇನ್ನು ಮೇಲೆ ತಮ್ಮ ತಲೆಯಮೇಲಿನ ರಾಜ್ಯದಾಡಳಿತದ ಭಾರವನ್ನು ದಯವಿಟ್ಟು ಕೆಳಗಿಳಿಸಿ, ವಿಶ್ರಾಂತಿ ತೆಗೆದುಕೊಳ್ಳಬೇಕು' ಎಂದು ನಾನಾವಿಧವಾಗಿ ಹೇಳಿ ಅದಕ್ಕೆ ಅವನನ್ನು ಒಡಂಬಡಿಸಿದರು. ಆ ಮೇಲೆ ಅವನು ಸನ್ ೧೮೯೪ನೆಯ ಇಸವಿಯ ಮಾರ್ಚ್ ತಿಂಗಳಿನ ೩ನೆಯ ತಾರೀಖಿನ ದಿವಸ ಮಹಾರಾಣೀ ಸಾಹೇಬರ ಬಳಿಗೆ ಹೋಗಿ ನನ್ನಲ್ಲಿ ಶಕ್ತಿ ಇರುವ ವರೆಗೆ ಸಿಂಹಾಸನದ ಸೇವೆಯನ್ನು ಕಿಂಚಿತ್ತು ಮಾಡಿದೆನು. ಆದರೆ ಈ ವೃದ್ಧಾಪ್ಯದ ಮೂಲಕ ನನ್ನ ಶರೀರ ಸಾಮರ್ಥ್ಯವು ಕಡಿಮೆಯಾಗಹತ್ತಿದೆ· ಕಿವಿಗಳ ಶಕ್ತಿಯು ಕ್ಷೀಣವಾಗುತ್ತ ನಡೆಸದೆ. ಕಣ್ಣುಗಳಿದ್ದು ಇಲ್ಲದ ಸ್ಥಿತಿಯು ಬಂದೊದಗಿದೆ ಇವೆಲ್ಲ ಸಂಗತಿಗಳನ್ನು ಲಕ್ಷದಲ್ಲಿ ತಂದು, ಈಗಿನ ಜವಾಬುದಾರಿಯ ಕೆಲಸದಿಂದ ನನ್ನನ್ನು ಬಿಡುಗಡೆ ಮಾಡತಕ್ಕದ್ದು. ಮತ್ತು ಈ ಸೇವಕನ ಮೇಲೆ ಇಷ್ಟು ಕೃಪಾದೃಷ್ಟಿಯನ್ನಿಟ್ಟಿರುವದಕ್ಕಾಗಿ ತಮ್ಮನ್ನು ಎಷ್ಟು ಕೊಂಡಾಡಿದರೂ ಅಲ್ಪವೇ ಅದೆ, ಎಂದು ಅರಿಕೆ ಮಾಡಿಕೊಂಡು ತನ್ನ ರಾಜೀನಾಮೆಯನ್ನು ಅವರ ಮುಂದಿಟ್ಟನು. ತಮ್ಮ ವೃದ್ಧ ಮಂತ್ರಿಯ ಈ ನುಡಿಗಳನ್ನು ಕೇಳಿ ರಾಜ್ಞಿಯವರ ಮನಸಿನಲ್ಲಿ ಅವನು ಇಷ್ಟು ದಿವಸಗಳ ವರೆಗೆ ಮಾಡಿದ ಮನಃಪೂರ್ವಕವಾದ ಸೇವೆಯು ಒಮ್ಮೆಲೇ ಬಂದು ಅವರು ತುಸು ಹೊತ್ತಿನ ವರೆಗೆ ಸ್ತಬ್ಧವಾಗಿ ಕುಳಿತುಕೊಂಡರು. ಆ ಮೇಲೆ ಅವರು ಅವನ ಏಕನಿಷ್ಠ ಸೇವೆಯ ಸಲುವಾಗಿ ಅವನನ್ನು ಹೊಗಳಿ, ಅವನ ಹೆಂಡತಿಯ ಮತ್ತು ಅವನ ಕುಟುಂಬದವರ ಯೋಗಕ್ಷೇಮಗಳನ್ನು ಆದರದಿಂದ ಕೇಳಿಕೊಂಡು, ಅವನ ಕಣ್ಣಿನ ಸಲುವಾಗಿ ಹಳಹಳಿಸಿ, ಕಟ್ಟಕಡೆಗೆ ಅವನ ಪ್ರಾರ್ಥನೆಯನ್ನು ಮನ್ನಿಸಿ, ಬಹು ಪ್ರೀತಿಯಿಂದಲೂ ಅಂತಃಕರುಣದಿಂದಲೂ ಅವನ ಕರವಿಡಿದು 'ನಿಮಗೆ ಶುಭವಾಗಲಿ' ಎಂದು ಹರಸಿ, ಅವನಿಗೆ ಅಪ್ಪಣೆಗೊಟ್ಟು ಕಳುಹಿಸಿದರು. ಈ ಮೇರೆಗೆ ಗ್ಲ್ಯಾಡ್‌ಸ್ಟನ್ನನು ತನ್ನ ಮುಖ್ಯ ಮಂತ್ರಿಯ ಉದ್ಯೋಗಕ್ಕೆ ಕಡೆಯ ಸಾರೆ ರಾಜೀನಾಮೆಯನ್ನು ಕೊಟ್ಟು ಯಾವತ್ತು ಸಾರ್ವಜನಿಕ ಕೃತ್ಯಗಳನ್ನು ಬಿಟ್ಟು ಓರಿಗಾದನು. ಈ ಸುದ್ದಿಯನ್ನು ಕೇಳಿ, ಇಂಗ್ಲಿಷ್ ರಾಷ್ಟ್ರದಲ್ಲಿಯೂ ಯುರೋಪ ಖಂಡದೊಳಗಿನ ಸಮಸ್ತ ರಾಷ್ಟ್ರಗಳಲ್ಲಿಯೂ ಅವನ ನಿರ್ದೋಷವಾದ ಸ್ವಭಾವ, ಅತ್ಯಾಶ್ಚರ್ಯಕರವಾದ ವಕ್ತೃತ್ವ ಅತುಲ ಬುದ್ಧಿ ವೈಭವ, ನ್ಯಾಯದೃಷ್ಟಿ ಮುಂತಾದ ಉತ್ತಮೋತ್ತಮ ಗುಣಗಳ ವಿಷಯವಾಗಿ ಅಭಿನಂದನಪರಲೇಖಗಳೂ ಉದ್ಗಾರಗಳೂ ಎಣಿಕೆದಪ್ಪಿ ಹೊರಡಲಾರಂಭಿಸಿದವು. ಅವನು ಎಲ್ಲ ಸಾರ್ವಜನಿಕ ಕೃತ್ಯಗಳಿಂದ ದೂರವಾದನು ಸರಿ, ಆದರೆ ಐ

ಲರ್ಂಡ ವಿಚಾರಗಳಿಂದ ತನ್ನ ಮನಸ್ಸನ್ನು ದೂರ ಮಾಡುವದು ಮಾತ್ರ ಅವನಿಂದಾಗಲಿಲ್ಲ. ಅವು ಯಾವಾಗಲು ಅವನ ಹೃದಯದಲ್ಲಿ ಕಟಿಯುತ್ತಿದ್ದವು. ಅವನು ಡೀಲನ್ (Dillon) ಎಂಬ ಐರಿಷ್ ಗೃಹಸ್ಥನಿಗೆ ಬೋರ್ನಮಥ್ (Bournemouth) ಪಟ್ಟಣದಿಂದ [illegible] ಇಸವಿಯ ೯ನೆಯ ತಾರೀಖಿನ ದಿವಸ ಒಂದು ಪತ್ರವನ್ನು ಬರೆಹಿದನು. ಈ ಹೊತ್ತಿಗೆ ಅವನು ಮುಪ್ಪಿನಿಂದ ತೀರ ಜೀರ್ಣನಾಗಿದನು. ಬರೆಯುವಷ್ಟು ಸಾಮರ್ಥ್ಯವು ಸಹ ಅವನಲ್ಲಿ ಉಳಿದಿದ್ದಿಲ್ಲ. ಅದ್ದರಿಂದ ಅವನು [illegible] ತನ್ನ ಮಗಳ ಕೈಯಿಂದ ಆ ಪತ್ರವನ್ನು ಬರೆಯಿಸಿ, ಅದಕ್ಕೆ ಸಹಿ ಹಾಕಿದನು. ಇದೇ ಸಹಿಯು ಆ ಕರ್ತೃತ್ವ ಶಕ್ತಿಯುಳ್ಳ ಕೈಯಿಂದ ಮಾಡಲ್ಪಟ್ಟ ಕಡೆಯ ಸಹಿಯಾಗಿದೆ. ಆ ಪತ್ರದಲ್ಲಿ ಆರು ಸಾಲುಗಳುಂಟು. ಅವುಗಳ ತಾತ್ಪರ್ಯ ಹೀಗಿಂತು: “ನಿಮ್ಮ ಕಾರ್ಯಸಿದ್ಧಿಯು ಅಪಾಯವು ನಿಮ್ಮ ಕೈಯಲ್ಲಿಯೇ ಉಂಟು. ನಿಮ್ಮೊಳಗಿನ ದ್ವೇಷಭಾವವು ಅಳಿದುಹೋಗಿ, ಒಗ್ಗಟ್ಟು ಹುಟ್ಟುವ ವರೆಗೆ ನೀವು ಶಾಂತಚಿತ್ತರಾಗಿ ಕುಳಿತುಕೊಳ್ಳಬೇಕು. ಒಂದುವೇಳೆ ನೀವು ನಿಮ್ಮನ್ನು ಗೊತ್ತುಹಿಡಿದು ಒಮ್ಮನಸ್ಸಿನಿಂದ ವರ್ತಿಸಹತ್ತಿದರೆ, ಈಗ ಅಸಾಧ್ಯವಾಗಿ ತೋರುವ ಕಾರ್ಯವು [illegible] ಸಾಧ್ಯವಾಗುವದು. ಇದನ್ನು ನೀವು ಎಂದೂ ಮರೆಯಕೂಡದು” ಈ ಪತ್ರದಿಂದ ಆ ಸತ್ಪುರುಷನು ಐರ್ಲಂಡದ ಒಳಿತಿಗಾಗಿ ತನ್ನ ಅಂತ್ಯಕಾಲದ ವರೆಗೆ ಎಷ್ಟು ಚಿಂತಿಸಿದನೆಂಬದು ಸ್ಪಷ್ಟವಾಗಿ ತಿಳಿಯುವದು.

ಐರ್ಲಂಡದ ವಿಷಯವಾಗಿ ಗ್ಲ್ಯಾಡ್‌ಸ್ಟನ್ನನ ಬಯಕೆಗಳು.

ಲಿಬರಲ್ ಪಕ್ಷದ ಮುಂದಾಳಾದ ಗ್ಲಾಡ್‌ಸ್ಟನ್ನನು ಇಂಗ್ಲಂಡ—ಸ್ಕಾಟಲಂಡ್-ಐರ್ಲಂಡ್ ದೇಶಗಳನ್ನು ಒಂದಕ್ಕೊಂದು ಕೂಡಿಸಿ, ಏಕ ಜೀವವನ್ನಾಗಿ ಮಾಡಿ, ಇಂಗ್ಲಿಷ್ ರಾಜ್ಯದ ಅಸ್ತಿಭಾರವನ್ನು ಭದ್ರಪಡಿಸುವ ಕಾಂಕ್ಷೆಯಿಂದಲೂ ಹೆದರಿಕೊಂಡು ಸಿಡಿದು ನಿಂತ ಐರ್ಲಂಡಕ್ಕೂ, ಪ್ರಜೆಗಳ ಕಲಹಗಳೇ ರಾಜ್ಯದ ಬಿಗಿತನವೆಂಬ ತತ್ವಕ್ಕೆ ತಪರ್ಯನೆಯಾದ ಇಂಗ್ಲಿಷ್ ಸಾಮ್ರಾಜ್ಯಕ್ಕೂ ಬೆಸೆಗು ಬಿಡುವ ಇಚ್ಛೆಯಿಂದಲೂ, ಐರ್ಲಂಡದ ಜನರು ಪೀಡೆಗಳನ್ನು ತಡೆಯಲಾರದೆ ಗೂಳೆ ಕಟ್ಟಿ ಪರದೇಶಗಳಿಗೆ ಎದ್ದುಹೋಗುವದರಿಂದ ಆ ದೇಶವು ಹಾಳು ಬೀಳುತ್ತಿರುವದನ್ನು ನಿಲ್ಲಿಸಿ, ಅಲ್ಲಿಯ ಫಲವತ್ತಾದ ಭಾಗಗಳಲ್ಲಿ ಒಕ್ಕಲತನವನ್ನು ಬಲಿಸಿ, ಸಮಗ್ರ ದೇಶವನ್ನೇ ಧನ ಧಾನ್ಯಗಳ ನಿಧಿಯನ್ನಾಗಿ ಮಾಡುವ ಹಂಬಲದಿಂದಲೂ, ವಿಧವಿಧದ ಕಾರ್ಯಾಲಯಗಳನ್ನು ಆ ದೇಶದಲ್ಲಿ ಸ್ಥಾಪಿಸಿ, ಐರಿಷ್ ಪ್ರಜೆಗಳ ಸುಖಸಾಧನಗಳನ್ನು ಹೆಚ್ಚಿಸುವ ಲವಲವಿಕೆಯಿಂದಲೂ ಮಾಡಿದ ದೀರ್ಘ ಪ್ರಯತ್ನಗಳೆಲ್ಲ ನಿಷ್ಫಲವಾದವು. ಇದಕ್ಕೆ ಐರ್ಲಂಡದ ದುರ್ಭಾಗ್ಯವೇ ಕಾರಣವಲ್ಲದೆ ಆ ದಯಾಸಾಗರನ ಕಡೆಗೆ ದೋಷವಿಲ್ಲ.

ಗ್ಲ್ಯಾಡ್‌ಸ್ಟನ್ನನು ಸಾರ್ವಜನಿಕ ಕೃತ್ಯಗಳನ್ನು ಬಿಟ್ಟು, ಶಾಂತಚಿತ್ತದಿಂದ ಸ್ವಸ್ಥಾನಕ್ಕೆ ತೆರಳಿದ್ದು.

ಮೇಲೆ ಹೇಳಿದ ಮೇರೆಗೆ ಗ್ಲ್ಯಾಡ್‌ಸ್ಟನ್ನನು ಮುಖ್ಯ ಮಂತ್ರಿಯ ಉದ್ಯೋಗವನ್ನು ಬಿಟ್ಟು, ತನ್ನ ಇಷ್ಟ ಮಿತ್ರರ ಸಹಾಧ್ಯಾಯಿಗಳ, ದೊಡ್ಡ ದೊಡ್ಡ ಸದ್ಗೃಹಸ್ಥರ ಅಪ್ಪಣೆಯನ್ನು ಪಡೆದು, ರಾಜಧಾನಿಯಿಂದ ಹೊರಟು, ಮಾರ್ಗದಲ್ಲಿ ಪಟ್ಟಣಸ್ಥರು ಅಂತಃಕರಣಪೂರ್ವಕವಾಗಿ ಮಾಡಿದ ಆದರಾತಿಥ್ಯಗಳನ್ನೂ ಸನ್ಮಾನಗಳನ್ನೂ ಸ್ವೀಕರಿಸುತ್ತ ಹವಾರ್ಡೀನಕ್ಕೆ ಹೋಗಿ, ತನ್ನ ಹೆಂಡರು ಮಕ್ಕಳುಗಳೊಡನೆ ಸಮಾಧಾನದಿಂದ ಕಾಲ ಕಳೆಯ ಹತ್ತಿದನು. ಒಬ್ಬ ಪುಣ್ಯಪುರುಷನು ದೂರ ದೂರದಲ್ಲಿರುವ ಮಹಾಕ್ಷೇತ್ರಗಳಿಗೆ ಹೋಗಿ, ಯಥಾಸ್ಥಿತವಾಗಿ ಯಾತ್ರೆಯ ಫಲಗಳನ್ನೆಲ್ಲ ಪಡೆದುಕೊಂಡು, ಸಂತೋಷದಿಂದ ಮನೆಗೆ ತಿರುಗಿ ಬರುವಂತೆ ಗ್ಲ್ಯಾಡ್‌ಸ್ಟನ್ನನು ತನ್ನಲ್ಲಿ ಸಾಮರ್ಥ್ಯವಿರುವ ವರೆಗೆ ಪರೋಪಕಾರದ ಕೃತ್ಯಗಳನ್ನೆಸಗಿ, ಘನವಾದ ಕೀರ್ತಿಯನ್ನು ಪಡೆದು, ಉಳಿದ ಅಲ್ಪಾಯುಷ್ಯವನ್ನು ಶಾಂತಚಿತ್ತದಿಂದ ಕಳೆಯುವದಕ್ಕಾಗಿ ತನ್ನ ಮನೆಗೆ ತೆರಳಿದನೆಂದು ಹೇಳಬಹುದು. ಅವನ ಅಲ್ಲಿಯ ಆಚರಣೆಗಳು ಸಹ ಅನುಕರಣೀಯವಾಗಿರುವದರಿಂದ, ಅವುಗಳನ್ನು ಸಂಕ್ಷೇಪವಾಗಿ ಮುಂದಿನ ಅಧ್ಯಾಯದಲ್ಲಿ ಹೇಳುವೆವು.

---



# ೬ನೆಯ ಅಧ್ಯಾಯ.

## ವಿಶ್ರಾಂತಿಯೂ ಉಪಾಂತ್ಯಕಾಲವೂ.



ಕಾವ್ಯಶಾಸ್ತ್ರ ವಿನೋದೇನ ಕಾಲೋಗಚ್ಛತಿ ಧೀಮತಾಮ್ |
ವ್ಯಸನೇನ ತು ಮೂರ್ಖಾಣಾಂ ನಿದ್ರಯಾ ಕಲಹೇನವಾ ||

ಕಾವ್ಯಶಾಸ್ತ್ರಗಳಿಂದ ವಿನೋದ ಪಡುವದರಲ್ಲಿ ಬುದ್ಧಿವಂತರ ವೇಳೆಯು ಹೋಗುತ್ತದೆ. ವ್ಯಸನದಲ್ಲಿ ಅಥವಾ ನಿದ್ರೆಯಲ್ಲಿ ಇಲ್ಲವೆ ಜಗಳದಲ್ಲಿ ಬುದ್ಧಿಗೇಡಿಗಳ ವೇಳೆಯು ಹೋಗುತ್ತದೆ.



ದೊಡ್ಡ ಜನರು ಯಾವಾಗಲು ಉದ್ಯೋಗದಲ್ಲಿ ತೊಡಗಿರುವದು ಶ್ರಮ ಜೀವಿತ್ರದ ಕುರುಹೆಂದೆಣಿಸುವರು.

ಮನುಷ್ಯನು ಉದ್ಯೋಗ ಮಾಡಲಿ ಅಥವಾ ಮಾಡದೇ ಇರಲಿ, ಅವನ ಆಯುಷ್ಯವು ದಿನ ದಿನಕ್ಕೆ ಕಡಿಮೆ ಕಡಿಮೆಯಾಗುತ್ತ ಹೋಗುವದು. ಇದನ್ನು ಲಕ್ಷದಲ್ಲಿಟ್ಟು, ಅವನು ತನ್ನ ಆಯುಷ್ಯವನ್ನು ಸತ್ಕಾರ್ಯಗಳಲ್ಲಿ ಕಳೆದರೆ ಮಾತ್ರ ಅವನ ಜನ್ಮವು ಸಾರ್ಥಕವಾಗುವದು; ಇಲ್ಲದಿದ್ದರೆ ಅವನ ಹುಟ್ಟು ವ್ಯರ್ಥವಾಗುವದು. ಈ ಪೃಥ್ವಿಯಲ್ಲಿ ಇಂದಿನವರೆಗೆ ಆಗಿ ಹೋಗಿರುವ ಮಹಾ ಮಹಾ ಪುರುಷರು ತಮ್ಮ ವೃದ್ಧಾಪ್ಯಕಾಲದಲ್ಲಿ ಸಹ ನಿರುದ್ಯೋಗಿಗಳಾಗಿ ಕುಳಿತುಕೊಳ್ಳಲಿಲ್ಲ. ತತ್ವಜ್ಞಾನಿಯಾದ ಸಾಕ್ರೇಟೀಸನು ಹಾಗಲಹಣ್ಣಾಗಿರುವಾಗ್ಗೆ ವಾದ್ಯಗಳನ್ನು ಬಾರಿಸಲಿಕ್ಕೆ ಕಲಿತನು. ಕೇಟೋ ಎಂಬ ರೋಮ ದೇಶದ ತತ್ವಜ್ಞನು ೮೦ ವರ್ಷದ ವಯಸ್ಸಿನಲ್ಲಿ ಗ್ರೀಕ್ ಭಾಷೆಯನ್ನು ಕಲಿತುಕೊಂಡನು. ಥಿಯೋಫ್ರಾಸನೆಂಬವನು ೯೦ ವರ್ಷದ ಮುದುಕನಾದ ಮೇಲೆ ಒಂದು ಗ್ರಂಥವನ್ನು ಬರೆದನು. ೧೪ನೆಯ ಲೂಯಿಸಾ ಎಂಬ ಫ್ರಾನ್ಸದ ಬಾದಶಹನ ಮಂತ್ರಿಯಾದ ಲೇಟೆಯರನು ತಾನು ತೀರ ಮುಪ್ಪಿನವನಾದ ಬಳಿಕ ತನ್ನ ಮೊಮ್ಮಕ್ಕಳೊಡನೆ ವಾದ ವಿವಾದ ಮಾಡುವ ಉದ್ದೇಶದಿಂದ ತರ್ಕಶಾಸ್ತ್ರವನ್ನು ಅಭ್ಯಾಸಿಸಿದನು. ಲ್ಯುದೋವಿಕೊ-ಮೋನಾದ್ ಲೆಸ್ಕೋ ಎಂಬವನು ೧೦೫ ವರ್ಷದವನಾಗಿರುವಾಗ್ಗೆ ಸ್ವಚರಿತ್ರೆಯನ್ನು ಬರೆದನು. ಈ ಉದಾಹರಣೆಗಳಿಂದ ದೊಡ್ಡ ಮನುಷ್ಯರು ಎಷ್ಟು ಮುದುಕರಾದರೂ ಎಷ್ಟು ಅಶಕ್ತರಾದರೂ ತಮ್ಮ ಉದ್ಯೋಗಗಳನ್ನು ಬಿಡುವದಿಲ್ಲೆಂದು ಸ್ಪಷ್ಟವಾಗಿ ತಿಳಿಯುವದು. ಉದ್ಯೋ

ಗ ಮಾಡುವದೇ ತಮ್ಮ ಜೀವಿತದ ಕುರುಹೆಂದು ಅವರು ಎಣಿಸುವರು. ನಮ್ಮ ಚರಿತ್ರನಾಯಕನು ಸಹ ಅವರೊಳಗಿನವನೊಬ್ಬನಾಗಿರುವನು. ಅವನು ತನ್ನ ೨೩ನೆಯ ವರ್ಷದಿಂದ ೮೪ನೆಯ ವರ್ಷದವರೆಗೆ ಎಷ್ಟು ಕಷ್ಟಗಳೊದಗಿದರೂ ಅವುಗಳನ್ನೆಲ್ಲ ತಾಳಿಕೊಂಡು, ಸ್ವದೇಶ ಸೇವೆಯನ್ನು ತ್ರಿಕರಣಪೂರ್ವಕವಾಗಿ ಮಾಡಿದನು. ಆದರೆ ವೃದ್ಧಾಪ್ಯದಿಂದ ಅವನ ಬಲವು ಕುಂದಲು, ಕಣ್ಣುಗಳು ಮಂದವಾಗಲು, ಕಿವಿಗಳು ಕೇಳದಂತಾಗಲು, ಬೇನೆಗಳು ಆವರಿಸಲು, ಹೊಸ ಸಂತತಿಯ ಜನರಿಗೂ ಅವನಿಗೂ ಮತಭೇದವುಂಟಾಗಿ ಮನಸ್ತಾಪಕ್ಕೆ ಗುರಿಯಾಗಲು, ಪಾರ್ಲಮೆಂಟ ಸಭೆಯಲ್ಲಿ ತನ್ನ ಮನಸಿನ ವಿರುದ್ಧವಾಗಿ ತಾನೇ ನಡೆಯುವ ಹೊತ್ತು ಬರಲು, ಅವನು ಸನ್ ೧೮೯೪ನೆಯ ಇಸವಿಯಲ್ಲಿ ಮುಖ್ಯ ಮಂತ್ರಿಯ ಉದ್ಯೋಗವನ್ನು ಬಿಟ್ಟು, ಎಲ್ಲ ಸಾರ್ವಜನಿಕ ಕೆಲಸಗಳಿಂದ ಓರಿಗಾಗಿ ಹವಾರ್ಡೀನ್‌ಕಾಸಲ್ಲಿಗೆ ಹೋಗಿ, ಹೆಂಡರು ಮಕ್ಕಳುಗಳೊಡನೆ ಕಾಲಕಳೆಯುಹತ್ತಿದ ಸಂಗತಿಯನ್ನು ನಾವು ಹಿಂದಿನ ಅಧ್ಯಾಯದ ಕೊನೆಯಲ್ಲಿ ಹೇಳಿದ್ದೇವೆ.

ಗ್ಲ್ಯಾಡ್‌ಸ್ಟನ್ನನು ರಾಜ್ಯಕಾರಭಾರವನ್ನು ಬಿಟ್ಟ ಬಳಿಕ ಅವನ ವರ್ತನವು.

ಗ್ಲ್ಯಾಡಸ್ಟನ್ನನು ತುಸು ಹೆಚ್ಚು ಕಡಿಮೆ ನಾಲ್ಕು ಚಚ್ಚೌಕು ಮೈಲು ಭೂಮಿಗೆ ಒಡೆಯನಾಗಿದ್ದನು ಆ ಭೂಮಿಯಲ್ಲಿ ಸುಮಾರು ೩೦೦ ಕುಟುಂಬಗಳು ವಾಸಿಸುತ್ತಿದ್ದವು. ಅಲ್ಲಿ ಭಜನಾಲಯವೂ ಶಾಲೆಯೂ ಅನಾಥಗೃಹವೂ ಇದ್ದವು. ಅವನ ಮನೆಯಲ್ಲಿ ೩೦,೦೦೦ ಗ್ರಂಥಗಳುಳ್ಳ ಒಂದು ಸ್ವತಂತ್ರ ಪುಸ್ತಕಾಲಯವಿತ್ತು. ಅವನು ಪ್ರಪಂಚದ ಮತ್ತು ವ್ಯವಹಾರಗಳ ಹಂಬಲವನ್ನು ಬಿಟ್ಟು, ತನ್ನ ಪುಸ್ತಕಾಲಯದೊಳಗಿನ ಉತ್ತಮ ಗ್ರಂಥಗಳ ಸಹವಾಸದಲ್ಲಿ ಶಾಂತತೆಯಿಂದ ಕಾಲಕಳೆಯುಹತ್ತಿದನು. ಅವನಿದ್ದ ಈ ಪ್ರದೇಶಕ್ಕೆ ಒಂದು ರೀತಿ ತಪೋವನವೆಂದು ಹೇಳಿದರೂ ಒಪ್ಪುವಂತಿದೆ. ಅವನು ಪ್ರಾರ್ಥನಾಮಂದಿರಕ್ಕೆ ನಿಯಮಿತ ವೇಳೆಗೆ ಹೋಗಿ, ಕ್ರಿಸ್ತೀಧರ್ಮ ಪುಸ್ತಕವನ್ನು ಓದಿ ತನ್ನ ಗಂಭೀರವಾದ ಮತ್ತು ರಸಾಲವಾದ ವಾಣಿಯಿಂದ ಜನರಿಗೆ ಉಪದೇಶ ಮಾಡುತ್ತಿದ್ದನು. ಭಕ್ತಿಪೂರ್ವಕವಾಗಿ ದೇವರನ್ನು ಸ್ಮರಿಸಿ, ಗೀತಗಳನ್ನು ಹಾಡುತ್ತಿದ್ದನು. ಈ ರೀತಿಯಿಂದ ಹೊತ್ತುಗಳೆಯುವ ಪುರುಷನು ಪುಣ್ಯವಂತನೇ ಸರಿ. ಅವನ ಈ ಆಚರಣೆಗಳು ಸುಶಿಕ್ಷಿತರೆಂದೆನಿಸಿಕೊಳ್ಳುವ ನಮ್ಮ ತರುಣರು ಯಾವಾಗಲೂ ಲಕ್ಷ್ಯದಲ್ಲಿಡಲು ತಕ್ಕವುಗಳಾಗಿವೆ. ಯಾಕೆಂದರೆ ಅವರೊಳಗಿನ ಬಹು ಜನರು ಧರ್ಮವೆಂದರೆ ನಿರುದ್ಯೋಗಿಗಳ ಕೈಗಂಟೆಂದು ಹಾಸ್ಯ ಮಾಡುವರು! ಗುರು ಹಿರಿಯರು ಧರ್ಮದ ಮಾತುಗಳನ್ನಾಡಿದರೆ, ಅವರ ಕೂಡ ಅಳತೆಗೆಟ್ಟು ವಾದಿಸುವರು! ಹಿಂದೂಧರ್ಮವು ನಿಷೇಧಿಸುವ ಕೃತ್ಯಗಳನ್ನೆಸಗಲು ನಾಚರು! ಅಭಕ್ಷ್ಯ ಭಕ್ಷಣವನ್ನೂ ಅಪೇಯ ಪಾನವನ್ನೂ ಮಾಡಲು ಹೇಸರು. ಇಂಥವರು ಉ

ಜ್ಯಪ್ರತಿಯ ಶಿಕ್ಷಣ ಪಡೆದವರಲ್ಲಿ ಶ್ರೇಷ್ಠನಾದ ಮತ್ತು ಗರ್ಭಶ್ರೀಮಂತನಾದ ಗ್ಲ್ಯಾಡ್‌ಸ್ಟನ್ನನ ಧರ್ಮನಿಷ್ಠೆಯನ್ನೂ, ಕ್ರಿಸ್ತೀ ಧರ್ಮ ಶಾಸ್ತ್ರದ ಮೇಲಿನ ಅವನ ಅನುಪಮೇಯ ಭಕ್ತಿಯನ್ನೂ ಅವನಲ್ಲಿದ್ದ ಪವಿತ್ರ ಧರ್ಮಾಚರಣೆಗಳನ್ನೂ ನೋಡಿ, ನಾಚಿಕೊಂಡು, ಸ್ವಧರ್ಮನಿಷ್ಠರೂ, ಆಚಾರಶೀಲರೂ ಆಗಬೇಕು. ಅವನು ತನ್ನ ಹೆಂಡತಿಯ ಕೂಡ, ಮಕ್ಕಳ ಕೂಡ ನೆರೆಹೊರೆಯವರ ಕೂಡ, ಪ್ರೀತಿಯಿಂದಲೂ ಸಂತೋಷದಿಂದಲೂ ಸಂಭಾಷಣೆ ಮಾಡುತ್ತಲೂ ಅವರಿಗೆ ಪ್ರೀತಿಯ ಮಾತುಗಳನ್ನು ಹೇಳುತ್ತಲೂ ಧರ್ಮೋಪದೇಶ ಮಾಡುತ್ತಲೂ ಹೊತ್ತುಗಳೆಯುತ್ತಿದ್ದನು. ಈ ಯಾವತ್ತು ಕೆಲಸಗಳು ಒಂದು ನೂತನವಾದ ಯಂತ್ರದಂತೆ ಎಡರಿಲ್ಲದೆ ನಡೆಯುತ್ತಿದ್ದವು. ಅವನು ರಾಜಕೀಯ ಸಂಗತಿಗಳನ್ನು ತೀರ ಮರೆತು ಬಿಡಬೇಕೆಂದು ತನ್ನಿಂದಾದಷ್ಟು ಪ್ರಯತ್ನಿಸಿದನು; ಆದರೆ ದೇಶದ ಹಿತವನ್ನು ಸಾಧಿಸುವಲ್ಲಿ ತನ್ನ ಆಯುಷ್ಯವನ್ನೆಲ್ಲ ಕಳೆದಂಥ, ಪ್ರಜೆಗಳ ಒಳಿತಿಗಾಗಿ ವಿಧವಿಧದ ಕಷ್ಟಗಳನ್ನು ಸಹಿಸಿ, ಅಹೋರಾತ್ರಿ ಅತ್ಯಂತ ಶ್ರಮ ಪಟ್ಟಂಥ ಪುರುಷನು ಅವುಗಳನ್ನು ಸಂಪೂರ್ಣವಾಗಿ ಮರೆತು ಬಿಡುವದು ಮನುಷ್ಯ ಸ್ವಭಾವಕ್ಕೆ ತೀರ ವಿರುದ್ಧವಾದದ್ದು. ಅವನು ರಾಜದರಬಾರಿನೊಳಗಿನ ಮತ್ತು ದೇಶದೊಳಗಿನ ಗೊಂದಲಗಳನ್ನೆಲ್ಲ ಬಿಟ್ಟು, ಒಂದು ಏಕಾಂತವಾದ ಸ್ಥಳಕ್ಕೆ ಬಂದು ಮಾತ್ರ ಕುಳಿತುಕೊಂಡಿದನು. ಆದರೆ ಅವು ವರ್ತಮಾನ ಪತ್ರಗಳಿಂದಲೂ ಮಾಸಿಕ ಪುಸ್ತಕಗಳಿಂದಲೂ ದಿನಂಪ್ರತಿ ಅವನಿಗೆ ಸಾದ್ಯಂತವಾಗಿ ತಿಳಿಯುತ್ತಿದ್ದವು. ಅವುಗಳಿಗೆ ಬಹುಕಾಲದವರೆಗೆ ಸ್ಥಾನವಾಗಿದ್ದ ಅವನ ಮನಸು ಅವುಗಳ ಕಡೆಗೆ ಹರಿಯದಿರಬಹುದೆ? ಇಷ್ಟು ದಿವಸಗಳವರೆಗೆ ದೊಡ್ಡ ದೊಡ್ಡ ವಾಕ್ಕೋವಿದರನ್ನು ಎಸಿಸಿ ಮಾತನ್ನಾಡಗೊಡದ ಅವನ ಹರಿತುಳ್ಳ ನಾಲಿಗೆಯು ಸುಮ್ಮನಿರಬಹುದೇ? ಇವು ಎಂದಿಗೂ ಆಗದ ಕೆಲಸಗಳು. ಹೀಗಿದ್ದರೂ ಅವನು ರಾಜ್ಯದಾಡಳಿತದ ದೊಡ್ಡ ದೊಡ್ಡ ಪ್ರಕರಣಗಳನ್ನು ತಾನಾಗಿಯೇ ಎತ್ತಿ ಎಂದೂ ಮಾತನಾಡುತ್ತಿದ್ದಿಲ್ಲ; ಆದರೆ ಅವುಗಳ ವಿಷಯವಾಗಿ ಅವನ ಅಭಿಪ್ರಾಯವನ್ನು ಕೇಳುವ ಕಾಂಕ್ಷೆಯುಳ್ಳ ದೊಡ್ಡ ದೊಡ್ಡ ಗೃಹಸ್ಥರು ಅವನ ಬಳಿಗೆ ಮೇಲಿಂದ ಮೇಲೆ ಬರುತ್ತಿದ್ದರು. ಈ ಪ್ರಸಂಗಗಳಲ್ಲಿ ಮಾತ್ರ ಅವನು ಅವರನ್ನು ಸತ್ಕರಿಸಿ, ಅವರೊಂದಿಗೆ ಅವುಗಳನ್ನು ಕುರಿತು ಮನಃಪೂರ್ವಕವಾಗಿ ಸಂಭಾಷಣೆ ಮಾಡಿ, ಅವರ ಸಂಶಯಗಳನ್ನು ನಿವಾರಿಸಿ, ಅವರನ್ನು ಕಳುಹಿಸಿ ಕೊಡುತ್ತಿದ್ದನು. ಆದರೂ ಅವನು ನಿಯಮಿತ ವೇಳೆಯಲ್ಲಿ ಬೇರೆ ಬೇರೆ ಗ್ರಂಥಗಳನ್ನು ಓದುವ ಮತ್ತು ತನ್ನ ಪ್ರೀತಿಯ ವಿಷಯಗಳ ಮೇಲೆ ಲೇಖಗಳನ್ನು ಬರೆಯುವ ಕೃತ್ಯಗಳಿಗೆ ಎಂದೂ ವ್ಯತ್ಯಯ ಬರಗೊಡುತ್ತಿದ್ದಿಲ್ಲ. ವೇಳೆಯ ಸದ್ವ್ಯಯವೆ ಇದೇ ಸರಿ.

ಮೇಕಾರ್ಥಿ ಎಂಬ ಚರಿತ್ರಕಾರನು ಸ್ವಾನುಭವದಿಂದ ಗ್ಲ್ಯಾಡ್‌ಸ್ಟನ್ನನ ವಿಷಯವಾಗಿ ಹೇಳುವದೇನಂದರೆ:—"ಅವರು ಹಾಸಿಗೆಯಲ್ಲಿ ಸಹ ಒಮ್ಮೊಮ್ಮೆ ಹತ್ತು ಹತ್ತು ತಾಸುಗಳವರೆಗೆ ಉದ್ಯೋಗ ಮಾಡುತ್ತಿದ್ದರು. ಈ ಹೊತ್ತಿಗೆ ಅವರು ಬೇರೆ ಬೇರೆ ವಿಷಯಗಳ ಮೇಲೆ ಲೇಖಗಳನ್ನೂ ನಿಬಂಧಗಳನ್ನೂ ಬರೆಯುತ್ತಿದ್ದರು. ಎಲ್ಲ ವಿಷಯಗಳಿಗಿಂತ ಧರ್ಮದ ಮೇಲೆ ಅವರ ಪ್ರೀತಿಯು ಹೆಚ್ಚು. ಅವರು ಬಟ್ಲರನಿಂದ ಬರೆಯಲ್ಪಟ್ಟ "ಧರ್ಮ" ಎಂಬ ವ್ಯಾಖ್ಯಾನದ ಮೇಲೆ ಒಂದು ದೊಡ್ಡ ಗ್ರಂಥವನ್ನು ತಮ್ಮ ವಿಶ್ರಾಂತಿಯ ಕಾಲದಲ್ಲಿ ಬರೆದಿರುವರು. ಅದು ಶ್ರೇಷ್ಠ ಜನರಿಗೆ ಮಾನ್ಯವಾಗಿದೆ. ಇವುಗಳ ಹೊರತು "ಕ್ರಿಸ್ತೀ ಧರ್ಮದ ಬೇರೆ ಬೇರೆ ಪಂಥಗಳಿಗೆ ಸೇರಿದವರೊಳಗಿನ ಒಗ್ಗಟ್ಟು" ಎಂಬ ವಿಷಯದ ಮೇಲೆ ಎಷ್ಟೋ ನಿಬಂಧಗಳನ್ನೂ ಲೇಖಗಳನ್ನೂ ಬರೆದಿರುವರು. ಅವೆಲ್ಲ ಲೋಕಪ್ರಿಯವಾಗಿವೆ. ಹರಿಡನ್ನನೆಂಬ ಪ್ರಸಿದ್ಧ ಕವಿಯ ಗುಣಗಳನ್ನು ಇದ್ದಕ್ಕಿದ್ದ ಹಾಗೆಯೇ ವರ್ಣಿಸಿದ್ದಾರೆ."

ಅಬೇರಿಸ್ಟ್ವಿತ್ಥದಲ್ಲಾದ ಪದವೀದಾನಸಮಾರಂಭವು ೧೮೯೬, ಜೂನ ೨೬,

ಗ್ಲ್ಯಾಡ್‌ಸ್ಟನ್ನನ ಉಪಾಂತ್ಯ ಕಾಲದಲ್ಲಿಯದೊಂದು ಸಮಾರಂಭವು ಸನ್ ೧೮೯೬ನೆಯ ಇಸವಿಯ ಜೂನ ತಿಂಗಳಿನ ೨೬ನೆಯ ತಾರೀಖಿನ ದಿವಸ ವೇಲ್ಸ ಪ್ರಾಂತದೊಳಗಿನ ಅಬೇರಿಸ್ಟ್ವಿತ್ಥದಲ್ಲಾಯಿತು. ಅದು ವರ್ಣಿಸತಕ್ಕದ್ದಾಗಿದೆ. ಅದರ ವಿವರವು ಹೇಗೆಂದರೆ:—ಅಲ್ಲಿಯ ವಿಶ್ವವಿದ್ಯಾಲಯದವರು ಯುವರಾಜರನ್ನು ಅಂದರೆ ನಾಮದಾರ ಪ್ರಿನ್ಸ್ ಆಫ್ ವೇಲ್ಸರನ್ನು ತಮ್ಮ ವಿದ್ಯಾಲಯದ ಚಾನ್ಸಲರನ್ನಾಗಿ ನಿಯಮಿಸಿದ್ದರು. ಈ ಅಧಿಕಾರವನ್ನು ಸ್ವೀಕರಿಸುವದಕ್ಕಾಗಿ ಯುವರಾಜರು ತಮ್ಮ ಧರ್ಮಪತ್ನಿಗಳೊಡನೆ ಅಲ್ಲಿಗೆ ಹೋಗಿದ್ದರು. ಅದೇ ಸಮಾರಂಭದಲ್ಲಿ ಆ ವಿದ್ಯಾಲಯದವರು ಯುವರಾಜ್ಞಿಯರಿಗೂ ಗ್ಲ್ಯಾಡಸ್ಟನ್ನನಿಗೂ ಬಹುಮಾನದ ಪದವಿಗಳನ್ನು ಕೊಡಲು ನಿರ್ಣಯಿಸಿದ್ದರು. ಸ್ವತಃ ಪ್ರಿನ್ಸ್-ಆಫ್-ವೇಲ್ಸರು ಆ ಪದವಿಗಳನ್ನು ಅರ್ಪಿಸತಕ್ಕವರು; ಅವುಗಳನ್ನು ಅವರ ಪತ್ನಿಗಳಾದ ಯುವರಾಜ್ಞಿಯರೂ ಗ್ಲ್ಯಾಡ್‌ಸ್ಟನ್ನನೂ ಸ್ವೀಕರಿಸತಕ್ಕವರು. ಅಂದಬಳಿಕ ಕೇಳುವದೇನದು! ಆ ಸಮಾರಂಭವು ವಜ್ರಕ್ಕೆ ಕುಂದಣವಿಟ್ಟಂತೆ ವಿಶೇಷ ಆಡಂಬರದಿಂದ ನೆರವೇರಿಸಲ್ಪಟ್ಟಿತು. ಈ ಪ್ರಸಂಗದಲ್ಲಿ ಯುವರಾಜರು ಅತ್ಯುತ್ತಮವಾದದ್ದೊಂದು ಭಾಷಣ ಮಾಡಿದರು. ಅದರ ತಾತ್ಪರ್ಯವೇನಂದರೆ:—ಗ್ಲ್ಯಾಡ್‌ಸ್ಟನ್ ದೊರೆಗಳು ನಮ್ಮ ಮಾತೋಶ್ರೀಯವರ ವಿಸ್ತಾರವಾದ ರಾಜ್ಯವನ್ನು ಬಹುಕಾಲದವರೆಗೆ ದಕ್ಷತೆಯಿಂದ ಪರಿಪಾಲಿಸಿದ ರಾಜ್ಯಕಾರ್ಯ ಧುರಂಧರರೂ, ಘನ ವಿದ್ವಾಂಸರೂ ಆಗಿರುವರು. ಇವರು ಈಗ ಮುಪ್ಪಿನಿಂದ ತೀರ ಹಣ್ಣಾಗಿದ್ದರೂ ಈ ವಿಶ್ವವಿದ್ಯಾಲಯದ ಯೋಗ್ಯತೆಯನ್ನು ಹೆಚ್ಚಿಸುವದಕ್ಕೂ ಅವರ

ಚಾನ್ಸಲರನ ಉದ್ಯೋಗವನ್ನು ಹೊಸದಾಗಿ ಸ್ವೀಕರಿಸಿರುವ ನಮಗೆ ಯೋಗ್ಯ ಸನ್ಮಾನಗಳನ್ನೀಯುವದಕ್ಕೂ ಮಾರ್ಗಾಯಾಸವನ್ನು ಲಕ್ಷಿಸದೆ, ದೂರದ ಪ್ರವಾಸ ಮಾಡಿ, ಇಲ್ಲಿಗೆ ಬಂದು, ನಮ್ಮ ಮೇಲೆ ವಿಶೇಷ ಅನುಗ್ರಹ ಮಾಡಿರುವರು. ಇದರಗೋಸ್ಕರ ನಾವೆಲ್ಲರು ಇವರ ಉಪಕಾರವನ್ನು ನೆನಿಸುವದು ತಕ್ಕದ್ದಾಗಿದೆ. ಇವರು ಸಾಮಾನ್ಯರಲ್ಲ. ನಮ್ಮ ರಾಷ್ಟ್ರದೊಳಗಿನ ಉತ್ತಮ ರಾಜ್ಯಕಾರ್ಯ ಕುಶಲರಲ್ಲಿ ಇವರು ಶ್ರೇಷ್ಠರಾಗಿರುವರು. ವಿದ್ವಾಂಸರ ಸಮೂಹದಲ್ಲಿಯೂ ಅದ್ವಿತೀಯರಾಗಿರುವರು. ಇವರು ತಮ್ಮ ಹೆಸರು ಸ್ಥಿರವಾಗಿ ಉಳಿಯುವಂಥ ಮಹತ್ಕೃತ್ಯಗಳನ್ನೆಷ್ಟೋ ಮಾಡಿರುವರು. ಒಂದು ವೇಳೆ ಇವರು ಅವುಗಳನ್ನು ಮಾಡದೆ ಬಿಟ್ಟಿದ್ದರೂ, ಹಾರೇಸನೆಂಬ ಕವಿಯ ಕಾವ್ಯದ ಇವರ ಭಾಷಾಂತರವೊಂದೇ ಇವರ ಹೆಸರನ್ನು ಚಿರಸ್ಮರಣೀಯವಾಗಿ ಮಾಡುವಂತಿದೆ ಎಂಬಲ್ಲಿ ನಮಗೆ ಅಣುಮಾತ್ರವೂ ಸಂಶಯವಿಲ್ಲ. ಇಂಥ ಶ್ರೇಷ್ಠ ಪುರುಷರಿಗೆ ಪದವಿಯನ್ನು ಕೊಡುವ ಪ್ರಸಂಗವು ನಮಗೆ ಬಂದದ್ದು ನಮ್ಮ ಇಡೀ ಆಯುಷ್ಯದಲ್ಲಿ ಅತಿ ಗೌರವವುಳ್ಳದ್ದೆಂದು ನಾವು ಎಣಿಸುತ್ತೇವೆ. ಈ ಕಾಲದಲ್ಲಿ ಆ ಪತಿಸಂತಾಯ ಣಾರಾದ ಮತ್ತು ಆ ಮಹಾ ಭಾಗ್ಯಶಾಲಿಗಳಾದ ಇವರ ಅರ್ಧಾಂಗಿನಿಯವರನ್ನು ಸಹ ಇವರಷ್ಟೇ ಅಭಿನಂದಿಸುತ್ತೇವೆ."

ಯುವರಾಜರ ಈ ಭಾಷಣವನ್ನು ಕೇಳಿ ಗ್ಲ್ಯಾಡ್‌ಸ್ಟನ್ನನು ಬಹು ಸಂತೋಷಪಟ್ಟನು; ಆದರೆ 'ನಾನೇ ದೊಡ್ಡವನು, ನನಗೆ ಸರಿಯಾದವರು ಯಾರೂ ಇಲ್ಲ' ಎಂಬ ಅಹಂಕಾರವು ಮಾತ್ರ ಎಳ್ಳಷ್ಟಾದರೂ ಅವನಿಗೆ ಬರಲಿಲ್ಲ. ಈ ಪೂರ್ವದಲ್ಲಿಯೇ ಅವನು ಪ್ರಸಿದ್ಧ ವಿಶ್ವವಿದ್ಯಾಲಯದವರಿಂದ ಬಹುಮಾನದ ಬಿರುದುಗಳನ್ನು ವಿಪುಲವಾಗಿ ಪಡೆದಿದ್ದನು. ಈ ಬಿರುದುಗಳು ಸಿಗುತ್ತ ಹೋದ ಹೋದ ಹಾಗೆ ಅವನು ಹೆಚ್ಚು ಹೆಚ್ಚು ನಮ್ರಸ್ವಭಾವದವನಾಗುತ್ತ ಹೋದನೇ ಹೊರತು ಇವುಗಳಿಂದ ತನ್ನ ಪ್ರತಿಷ್ಠೆಯು ಬೆಳೆಯುತ್ತ ಹೋಯಿತೆಂದು ಅವನು ತನ್ನ ಮನಸ್ಸಿನ ಕನಸುಗಳಲ್ಲಿ ಸಹ ಎಣಿಸಲಿಲ್ಲ. ಇವುಗಳನ್ನು ಅವನಿಗೆ ಕೊಟ್ಟವರು ಮಾತ್ರ ತಮ್ಮ ಕೀರ್ತಿಯು ಬೆಳೆಯಿತೆಂತಲೂ ತಮ್ಮ ಪ್ರತಿಷ್ಠೆಯು ಹೆಚ್ಚಿತೆಂತಲೂ ತಿಳಿದುಕೊಳ್ಳುತ್ತಿದ್ದರು.

ಯುವರಾಜರ ಮಗಳ ಲಗ್ನಕ್ಕಾಗಿ ಗ್ಲ್ಯಾಡ್‌ಸ್ಟನ್ನನು ಲಂಡನ ಪಟ್ಟಣಕ್ಕೆ ಹೋದದ್ದು. ೧೮೯೬, ಜುಲಾಯಿ ೨೨.

ಮುಂದೆ ಕೆಲವು ದಿವಸಗಳಲ್ಲಿಯೇ ನಾಮದಾರ ಪ್ರಿನ್ಸ್-ಆಫ್-ವೇಲ್ಸರ ಮಗಳ ಲಗ್ನವಾಯಿತು. ಆ ಲಗ್ನಸಮಾರಂಭಕ್ಕೆ ಯುವರಾಜರು ಗ್ಲ್ಯಾಡ್‌ಸ್ಟನ್ನನನ್ನು ಆದರದಿಂದ ಕರೆಯಿಸಿಕೊಂಡರು. ಆ ಮದುವೆಯು ಲಂಡನ ಪಟ್ಟಣದಲ್ಲಿ ಸನ್ ೧೮೯೬ ನೆಯ ಇಸವಿಯ ಜುಲಾಯಿ ತಿಂಗಳಿನ ೨೨ ನೆಯ ತಾರೀಖಿನ ದಿವಸ ಬಲು ಸಡಗರದಿಂದಾಯಿತು. ಅದು ಸಾಧಾರಣ ಜನರ ಮನೆಯ ಲಗ್ನವಲ್ಲ;

(Helen Gladstone) ಹೆಲೆನ್ ಗ್ಲ್ಯಾಡ್‌ಸ್ಟನ್ನಳು ಉಚ್ಚ ಪ್ರತಿಯ ಶಿಕ್ಷಣವನ್ನು ಪಡೆದಿರುವಳು. ಇವಳು ಕೆಂಬ್ರಿಜ್ ಕಾಲೇಜದಲ್ಲಿ "ವ್ಹಾಯಿಸ್ ಪ್ರಿನ್ಸಿಪಾಲ" ಎಂಬ ಮಹತ್ವದ ಉದ್ಯೋಗವನ್ನು ಬಹು ವರ್ಷಗಳ ವರೆಗೆ ಮಾಡಿ ೧೯೦೧ ನೆಯ ವರ್ಷದಿಂದಿತ್ತ ಕೆಂಬ್ರಿಜ್ ಯುನಿವ್ಹರ್ಸಿಟಿಯೊಳಗಿನ (Women's Settlement Southwark) ವೂಮೆನ್ಸ ಸೆಟಲ್‌ಮೆಂಟ್ ಸೌಥವರ್ಕ ಎಂಬ ಶಾಖೆಯ ಮುಖ್ಯ ಗುರುವಿನ ಉದ್ಯೋಗವನ್ನು ಕೈಕೊಂಡಿರುವಳು. ಈ ಯಾವತ್ತು ಮಕ್ಕಳು ಸುಶೀಲರೂ ಸದಾಚಾರಸಂಪನ್ನರೂ ಅತ್ಯಂತ ಪಿತೃಭಕ್ತರೂ ಆಗಿರುವರು. ಇವರಲ್ಲಿ ಕೆಲವರು ಮಕ್ಕಳನ್ನು ಪಡೆದಿರುವರು. ಈ ಮೇರೆಗೆ ಗ್ಲ್ಯಾಡ್‌ಸ್ಟನ್ನನು ಸದ್ಗುಣಿಗಳಾದ ಹೆಂಡರು-ಮಕ್ಕಳು-ಮೊಮ್ಮಕ್ಕಳುಗಳೊಡನೆ ಸುಖದಿಂದ ಕಾಲಕ್ಷೇಪ ಮಾಡುತ್ತಿದ್ದನು. ಅವನ ತಂದೆಯಾದ ಸರ್ ಜಾನ್-ಗ್ಲ್ಯಾಡ್‌ಸ್ಟನ್ನನು ಬ್ರಿಟಿಷ್ ಪಾರ್ಲಮೆಂಟಿನಲ್ಲಿ ತನ್ನ ಮಗನು (ನಮ್ಮ ಚರಿತ್ರನಾಯಕನು) ಸಭಾಸದನಾದದ್ದನ್ನ ನೋಡಿ ಸಂತೋಷಪಟ್ಟಂತೆ, ಸ್ವತಃ ಗ್ಲ್ಯಾಡ್‌ಸ್ಟನ್ನನಾದರೂ ತನ್ನ ಕಿರಿಯ ಮಗನು ಪಾರ್ಲಮೆಂಟಿನೊಳಗಿನ ತನ್ನ ಸ್ಥಳವನ್ನೇ ಆಕ್ರಮಿಸಿದ್ದನ್ನು ನೋಡಿ ಪರಮ ಸಂತೋಷಪಟ್ಟನು. ಈ ಮನೆತನವನ್ನು ನೋಡಿದರೆ:—

> ಸಾನಂದಂ ಸದನಂ ಸುತಾಶ್ಚ ಸುಧಿಯಃ ಕಾಂತಾ ನ ದುರ್ಭಾಷಿಣೀ।
> ಸನ್ಮಿತ್ರಂ ಸಧನಂ ಸ್ವಯೋಷಿತಿ ರತಿಶ್ಚಾಜ್ಞಾಪರಾಃ ಸೇವಕಾಃ ॥
> ಆತಿಥ್ಯಂ ಶಿವಪೂಜನಂ ಪ್ರತಿದಿನೇ ಮಿಷ್ಟಾನ್ನಪಾನಂ ಗೃಹೇ।
> ಸಾಧೋಃ ಸಂಗಮುಪಾಸತೇ ಹಿ ಸತತಂ ಧನ್ಯೋ ಗೃಹಸ್ಥಾಶ್ರಮಃ ॥

ಅಂದರೆ ಆನಂದಮಯವಾದ ಮನೆಯು, ಬುದ್ಧಿಶಾಲಿಗಳಾದ ಮಕ್ಕಳು, ನಿಷ್ಠುರ ಮಾತುಗಳನ್ನಾಡದ ಹೆಂಡತಿಯು, ಒಳ್ಳೇ ಗೆಳೆಯನು, ಸಂಪತ್ತು, ಹೆಂಡತಿಯಲ್ಲಿ ಅನುರಾಗವು, ವಿಧೇಯರಾದ ಸೇವಕರು, ದಿನಂಪ್ರತಿ ಅತಿಥಿಗಳ ಸತ್ಕಾರವು, ದೇವತಾರ್ಚನೆಯು, ರುಚಿಕರವಾದ ಅನ್ನಪಾನಗಳು, ನಿರಂತರ ಸಾಧು ಪುರುಷರ ಸಮಾಗಮವು, ಇವುಗಳೆಲ್ಲ ಗೃಹಸ್ಥಾಶ್ರಮವು ಧನ್ಯವಾದದ್ದು ಎಂಬ ವಚನವು ನೆನಪಿಗೆ ಬರುತ್ತದೆ. ಇದೂ ಅಲ್ಲದೆ.—

> ಯದಿ ರಾಮಾ ಯದಿ ಚ ರಮಾ ಯದಿ ತನಯೋ ವಿನಯಧೀಗುಣೋಪೇತಃ।
> ತನಯೇ ತನಯೋತ್ಪತ್ತಿಃ ಸುರವರನಗರೇ ಕಿಮಾಧಿಕ್ಯಮ್ ॥

ಅಂದರೆ, ಮನೋಹರಳಾದ ಹೆಂಡತಿಯೂ, ಸಂಪತ್ತೂ, ಬುದ್ಧಿವಿನಯ ಸದ್ಗುಣಗಳಿಂದ ಯುಕ್ತನಾದ ಮಗನೂ ಮೊಮ್ಮಕ್ಕಳೂ ಇಲ್ಲಿಯೇ ಇದ್ದ ಪಕ್ಷದಲ್ಲಿ, ಸ್ವರ್ಗಲೋಕದ ರಾಜಧಾನಿಯಾದ ಅಮರಾವತಿಯಲ್ಲಿ ಹೆಚ್ಚಿನದೇನುಂಟು? (ಏನೂ ಇರುವದಿಲ್ಲ) ಎಂಬ ವಚನವಾದರೂ ಲಕ್ಷ್ಯದಲ್ಲಿ ಬಾರದೇ ಇರುವದಿಲ್ಲ.

ಸಾರಾಂಶ ಗ್ಲ್ಯಾಡ್‌ಸ್ಟನ್ನನ ಮನೆತನವು ಯಾವ ಬಗೆಯಿಂದ ನೋಡಿದರೂ ಈ ಪ್ರಪಂಚದೊಳಗಿನ ಸಮಸ್ತ ಸುಖಸಮಾಧಾನಗಳಿಗೆ ತವರ್ಮನೆಯಾಗಿತ್ತು.

ಗ್ಲ್ಯಾಡ್‌ಸ್ಟನ್ನನ ದರ್ಶನಕ್ಕೆ ದೊಡ್ಡ ದೊಡ್ಡ ಜನರ ಆಗಮನವು.

ಇತ್ತಿತ್ತಲಾಗಿ ಗ್ಲ್ಯಾಡ್‌ಸ್ಟನ್ನನ ವಿರುದ್ಧ ಪಕ್ಷದವರು ತಮ್ಮ ಮನಸಿನೊಳಗಿನ ಸ್ವಪಕ್ಷಾಭಿಮಾನವನ್ನು ಬಿಟ್ಟು ಅವನ ಪರಮ ಭಕ್ತರಾದರೆಂದು ಹೇಳಿದರೆ, ಅದು ಅತಿಶಯೋಕ್ತಿಯಾಗಲಾರದು. ಪಾರ್ಲಮೆಂಟ್ ಸಭೆಯಲ್ಲಿ ಬಹು ದಿವಸಗಳ ವರೆಗೆ ಅವನ ಕೂಡ ನಾ, ನಾ, ಎಂದು ಹೆಣಗಾಡಿದಂಥ ದೊಡ್ಡ ದೊಡ್ಡ ಮಂತ್ರಿಗಳು ಸಹ ಅವನ ಬಳಿಗೆ ಬಂದು, ಅವನ ಅನುಭವದ ಸಂಗತಿಗಳನ್ನು ಕೇಳಲಾರಂಭಿಸಿದರು. ಇದಲ್ಲದೆ ಪ್ರತ್ಯಕ್ಷ ಸಿಂಹಾಸನಾಧಿಪತಿಗಳೂ, ಅರಸುಮನೆತನದವರೂ ದೇಶದೊಳಗಿನ ದೊಡ್ಡ ದೊಡ್ಡ ಭೂಮಿಗಳ ಒಡೆಯರೂ ಪಂಡಿತರೂ ಅವನ ದರ್ಶನಕ್ಕಾಗಿ ಮೇಲಿಂದಮೇಲೆ ಬರಹತ್ತಿದರು. ಗ್ಲ್ಯಾಡ್‌ಸ್ಟನ್ನನು ಅವರವರಿಗೆ ತಕ್ಕ ಮಾನಮರ್ಯಾದೆಗಳನ್ನು ಕೊಟ್ಟು, ಅವರನ್ನು ಸಂತೋಷಬಡಿಸಿ ಕಳುಹಿಸಿಕೊಡುತ್ತಿದ್ದನು. ಸನ್ ೧೮೯೭ನೆಯ ಇಸವಿಯ ಮೇ ತಿಂಗಳಿನ ೧೦ನೆಯ ತಾರೀಖಿನ ದಿವಸ ಸ್ವತಃ ವಿಕ್ಟೋರಿಯಾ ಮಹಾರಾಣೀಸಾಹೇಬರು, ಯುವರಾಜರನ್ನೂ ಯುವರಾಜ್ಞಿಯರನ್ನೂ, ವೆಸ್ಟಮಿನ್‌ಸ್ಟರದ ಡ್ಯೂಕರನ್ನೂ ಅವರ ಪತ್ನಿಗಳನ್ನೂ ತಮ್ಮ ಸಂಗಡ ಕರೆದುಕೊಂಡು, ಹವಾರ್ಡೀನ್ ಕಾಸಲ್ಲಿಗೆ ಬಂದು, ತಮ್ಮ ವೃದ್ಧನಾದ ಹಿಂದಿನ ಮುಖ್ಯ ಮಂತ್ರಿಯ ದರ್ಶನವನ್ನು ತೆಗೆದುಕೊಂಡರು! ಈ ಸಮಯದಲ್ಲಿ ಗ್ಲ್ಯಾಡ್‌ಸ್ಟನ್ನನು ತನ್ನ ಹೆಂಡರು-ಮಕ್ಕಳು-ಆಪ್ತರಿಷ್ಟರೊಡನೆ ಈ ರಾಜಕುಲೋತ್ಪನ್ನರನ್ನೂ ಉತ್ತಮ ರೀತಿಯಿಂದ ಸತ್ಕರಿಸಿದನು. ಈ ಆದರ-ಸತ್ಕಾರಗಳು ಅತಿಥಿಗಳಿಗೆ ಆನಂದಕರವಾಗಿಯೂ ಗ್ಲ್ಯಾಡ್‌ಸ್ಟನ್ನನಿಗೆ ಭೂಷಣಪ್ರದವಾಗಿಯೂ ಆದವು. ಇದೇ ಸಮಯದಲ್ಲಿ ಒಂದು ಭಾವಚಿತ್ರವು ತೆಗೆಯಲ್ಪಟ್ಟಿತು. ಇದನ್ನು ತೆಗೆಯುವ ಕಾಲದಲ್ಲಿ ಯುವರಾಜರೂ ಗ್ಲ್ಯಾಡ್‌ಸ್ಟನ್ನನ ಪತ್ನಿಯೂ ಖುರ್ಚಿಗಳ ಮೇಲೆ ಮುಂದುಗಡೆ ಕುಳಿತುಕೊಂಡರು. ಅವರ ಹಿಂದೆ ಯುವರಾಜ್ಞಿಯರು ತಮ್ಮ ಬಲಗಡಿಗೆ ಗ್ಲ್ಯಾಡಸ್ಟನ್ನನನ್ನು ನಿಲ್ಲಿಸಿಕೊಂಡರು. ಈ ಅರಸುಮನೆತನದವರೊಡನೆ ನಿಂತುಕೊಳ್ಳಲು ಗ್ಲ್ಯಾಡ್‌ಸ್ಟನ್ನನು ಸಂಕೋಚಪಡಹತ್ತಲು, ಸ್ವತಃ ಯುವರಾಜ್ಞಿಯರು ನಮ್ರತೆಯಿಂದ ಹೇಳಿಕೊಂಡು, ಅವನನ್ನು ಕೈಹಿಡಿದು ಕರೆದುಕೊಂಡು ಬಂದು, ತಮ್ಮ ಬಲಗಡೆಯಲ್ಲಿ ನಿಲ್ಲಿಸಿಕೊಂಡರು!! ಈ ಸಂದರ್ಶನದ ಹೊತ್ತಿಗೆ ಪರಸ್ಪರ ಅಂತಃಕರಣದ ಸಂಭಾಷಣೆಗಳೆಷ್ಟೋ ನಡೆದವು. ಅವುಗಳೊಳಗಿನದೊಂದನ್ನೇ ನಾವು ಇಲ್ಲಿ ಹೇಳುತ್ತೇವೆ ಈ ರಾಜಕುಟುಂಬದವರು ಅಲ್ಲಿಂದ ಹೊರಡುವ ಕಾಲದಲ್ಲಿ ಯುವರಾಜ್ಞಿಯರು ಗ್ಲ್ಯಾ

ಡ್‌ಸ್ಟನ್ನನ ಧರ್ಮಪತ್ನಿಗೆ ನಮ್ರಭಾವದಿಂದ “ ಅವ್ವಾ, ಹೋಗಿ ಬರುತ್ತೇನೆ, ಅಪ್ಪಣೆಕೊಡು ” ಎಂದು ನುಡಿದರು. ಈ ನುಡಿಯು ಕಿವಿಗೆ ಬಿದ್ದ ಕೂಡಲೆ, ಆ ಸಾಧ್ವಿಯು ಮುಗುಳ್ನಗೆ ನಗುತ್ತ ಅವರನ್ನು ತಬ್ಬಿಕೊಂಡು ಪ್ರೀತಿಯಿಂದ ಮುದ್ದಿಟ್ಟಳು! ಇವೆಲ್ಲ ಸಂಗತಿಗಳಿಂದ ಯುವರಾಜರೂ ಯುವರಾಜ್ಞಿಯೂ ಆ ವೃದ್ಧ ದಂಪತಿಗಳಿಗೆ ತಮ್ಮನ್ನು ಹಡೆದ ತಾಯಿತಂದೆಗಳಿಗೆ ಯೋಗ್ಯವಾದ ಮನ್ನಣೆಗಳನ್ನಿತ್ತರೆಂದು ಸ್ಪಷ್ಟವಾಗಿ ತಿಳಿಯುವದು. ಅರಸುಮನೆತನದವರಿಂದ ಇಷ್ಟು ಮನ್ನಣೆಯನ್ನು ಪಡೆಯುವದು ಸಾಧಾರಣವಾದ ಸಂಗತಿಯಲ್ಲ. ಇದಕ್ಕೆ ಅವರಲ್ಲಿದ್ದ ಉತ್ತಮ ಗುಣಗಳೇ ಕಾರಣವು. “ ಗುಣಾಃ ಪೂಜಾಸ್ಥಾನಂ ” ಎಂಬ ವಚನಕ್ಕೆ ಇದೊಂದು ತಕ್ಕ ದೃಷ್ಟಾಂತವಾಗಿದೆ.

*ಗ್ಲ್ಯಾಡ್‌ಸ್ಟನ್ನನು ತನ್ನ ರೈತರಿಗೆ ತೋರಿಸಿದ ಪ್ರೀತಿಯು.*

ಗ್ಲ್ಯಾಡ್‌ಸ್ಟನ್ನನೂ ಅವನ ಮನೆತನದವರೂ ತಮ್ಮ ರೈತರನ್ನು ಸ್ವಂತ ಮಕ್ಕಳಂತೆ ಬಲು ಅಕ್ಕರತೆಯಿಂದ ನಡೆಯಿಸಿಕೊಳ್ಳುತ್ತಿದ್ದರು. ಆ ರೈತರಾದರೂ ಅವರ ಅಡಿಗೆರಗಿ ನಡೆಯುತ್ತಿದ್ದರು. ಹವಾರ್ಡೀನದಲ್ಲಿ ಗ್ಲ್ಯಾಡಸ್ಟನ್ನನ ಭಾವ ಚಿತ್ರವು ಇಲ್ಲದಂಥ ಒಂದು ಮನೆಯಾಗಲಿ ಅಥವಾ ಒಂದು ಗುಡಿಸಲವಾಗಲಿ ಇದ್ದಿಲ್ಲ. ಅವನು ಅಕಸ್ಮಾತ್ ಅವರ ಮನೆಗಳಿಗೆ ಹೋದರೆ, ಪ್ರತ್ಯಕ್ಷ ದೇವರೇ ತಮ್ಮ ಮನೆಗೆ ಬಂದನೆಂದು ಅವರು ತಿಳಿದುಕೊಂಡು, ಅವನಿಗೆ ತಮ್ಮಿಂದಾದಷ್ಟು ಆದರ ಸತ್ಕಾರಗಳನ್ನು ಮಾಡಿ, ಅವನ ಸದ್ಗುಣಗಳನ್ನು ಕೊಂಡಾಡುತ್ತಿದ್ದರು ಮತ್ತು ತಮ್ಮ ಹೊಲಗಳಲ್ಲಿ ಇಂಥಿಂಥ ಸುಧಾರಣೆಗಳನ್ನು ಮಾಡಬೇಕಾಗಿವೆ ಅವುಗಳಿಗೆ ಸಹಾಯಮಾಡಬೇಕೆಂತಲೂ ಇಲ್ಲವೆ ತಮ್ಮ ಮನೆತನದಲ್ಲಿ ಇಂತಿಂಥ ತೊಂದರೆಗಳುಂಟಾಗಿವೆ ಅವುಗಳನ್ನು ಪರಿಹರಿಸಬೇಕೆಂತಲೂ ಅವನಿಗೆ ಬೇಡಿಕೊಳ್ಳುತ್ತಿದ್ದರು. ಅವನು ಅವುಗಳನ್ನು ಸಮಾಧಾನ ಚಿತ್ತದಿಂದ ಕೇಳಿಕೊಂಡು ಅವರಿಗೆ ತನ್ನಿಂದಾದಷ್ಟು ಸಹಾಯಮಾಡುತ್ತಿದ್ದನು. ದುಡ್ಡಿನ ಆಶೆಯಿಂದ ಅವರ ಹೊಲಗಳ ತೆರಿಗೆಯನ್ನು ಅನ್ಯಾಯವಾಗಿ ಅವನು ಎಂದೂ ಹೆಚ್ಚಿಸನು. ಯಾವ ದೇಶದಲ್ಲಿಯೇ ಆಗಲಿ ಭೂಮಿಗಳ ಒಡೆಯರು ರೈತರ ಕಲ್ಯಾಣಕ್ಕಿಂತಲು ತಮ್ಮ ಆದಾಯದ ಕಡೆಗೆ ಹೆಚ್ಚು ಲಕ್ಷ್ಯಗೊಡುವ ಪದ್ಧತಿಯುಂಟು. ಅವರು ಕರಿಕೆಹತ್ತಿದ ತಮ್ಮ ಹೊಲಗಳನ್ನು ರೈತರಿಗೆ ಮೊದಲು ತುಸು ಹಣಕ್ಕೆ ಕೊಡುವರು. ಆ ಮೇಲೆ ರೈತರು ಮೈಮುರಿ ದುಡಿದು ಆ ಹೊಲಗಳನ್ನು ಸುಧಾರಿಸಿ, ಅವುಗಳಲ್ಲಿ ಪೈರುಗಳನ್ನು ಬೆಳೆಯಿಸಹತ್ತಿದರೆ, “ ಹೊಲವು ಹಚ್ಚಗಾಯಿತು, ಒಡೆಯನ ಕಣ್ಣುಗಳು ಕೆಂಪಗಾದವು ” ಎಂಬ ಗಾದೆಯ ಮಾನಂತೆ ಆ ಒಡೆಯರಲ್ಲಿ ದುಡ್ಡಿನ ಆಶೆಯು ಹುಟ್ಟಿ, ಆ ಹೊಲಗಳ ತೆರಿಗೆಗಳನ್ನು ಹೆಚ್ಚಿಸುತ್ತ ಹೋಗುವರು. ಒಂದು ವೇಳೆ

ರೈತರು ಅಷ್ಟು ಹಣವನ್ನು ಕೊಡದಿದ್ದರೆ ಅವರು ಮಾಡಿದ ಶ್ರಮವನ್ನು ಲಕ್ಷಿಸದೆ, ಅವರಿಂದ ಆ ಹೊಲಗಳನ್ನು ಕಸಕೊಂಡು ಬೇರೆ ರೈತರಿಗೆ ಕೊಡುವರು. ಈ ತರದ ಉದಾಹರಣೆಗಳು ನಮ್ಮ ದೇಶದಲ್ಲಿ ಬೇಕಾದಷ್ಟು ದೊರೆಯುವವು. ಇದರ ಪರಿಣಾಮವು “ಹುಲ್ಲಿಪ್ಪನ ಮೇಲೆ ಮಣ್ಣಾಪ್ಪ”ನನ್ನು ಮಾಡಲು ಅಂದರೆ ತಮ್ಮ ಕರ್ತವ್ಯಗಳನ್ನು ದುರ್ಲಕ್ಷಿಸಲು ರೈತರಿಗೆ ಕಲಿಸಿ ಕೊಟ್ಟಂತಾಗುವದು. ಇದರಿಂದ ಆ ಭೂಮಿಗಳ ಆದಾಯವು ಅಂದರೆ ಆ ದೇಶದ ಆದಾಯವು ಕಡಿಮೆ ಯಾಗುತ್ತ ಹೋಗುವದೆಂಬ ಮಾತು ಸ್ಪಷ್ಟವೇ. ಈ ಮಹತ್ವದ ಸಂಗತಿಯನ್ನು ತಿಳಿದುಕೊಂಡು ಗ್ಲ್ಯಾಡಸ್ಟನ್ನನು ಒಮ್ಮೆ ಕೊಟ್ಟ ಹೊಲಗಳನ್ನು ರೈತರಿಂದ ಬಿಡಿಸಿಕೊಳ್ಳದೆ ಅವರಿಗೇ ನಡಿಸಿ, ಅವರನ್ನು ತನ್ನ ಮಕ್ಕಳಂತೆ ಪ್ರೀತಿಸುತ್ತಿದ್ದರಿಂದ, ಅವರು ತಮ್ಮ ತಮ್ಮ ಹೊಲಗಳಲ್ಲಿ ಧಾನ್ಯಗಳನ್ನು ವಿಪುಲವಾಗಿ ಬೆಳೆದು, ಹೆಂಡರು ಮಕ್ಕಳುಗಳೊಡನೆ ಸಮಾಧಾನ ಚಿತ್ತದಿಂದಲೂ ಸುಖದಿಂದಲೂ ಕಾಲಕಳೆಯುತ್ತಿದ್ದರು ಮಾತ್ರವಲ್ಲ. ಅದರೆ 'ತಾವು ಗ್ಲ್ಯಾಡ್‌ಸ್ಟನ್ನನ ರೈತರು' ಎಂದೆನಿಸಿ ಕೊಳ್ಳಲು ವಿಶೇಷ ಅಭಿಮಾನಪಡುತ್ತಿದ್ದರು. ಒಕ್ಕಲಿಗರನ್ನು ಕುರಿತು (Goldsmith) ಗೋಲ್ಡ್‌ಸ್ಮಿಥ್ಥನೆಂಬ ಪ್ರಸಿದ್ಧ ಇಂಗ್ಲಿಷ್ ಕವಿಯು ಹೇಳುವದೇನಂದರೆ:—

But a bold peasantry their coutry's pride,
When once destroyed can never be supplied.

ಅಂದರೆ ದೇಶದ ಉನ್ನತಿಗೆ ಆಧಾರಭೂತರಾದ ಧಿಟ್ಟ ಒಕ್ಕಲಿಗರನ್ನು ಒಮ್ಮೆ ನಾಶಪಡಿಸಿದ ಮೇಲೆ, ತಿರುಗಿ ಅವರನ್ನು ಹುಟ್ಟಿಸುವದು ಎಂದಿಗೂ ಆಗದು.

ಮೇಲಿನ ಅಭಿಪ್ರಾಯವು ಯಥಾಯೋಗ್ಯವಾಗಿರುವದು. ಇದನ್ನು ಭೂಮಿಗಳ ಒಡೆಯರು ಲಕ್ಷದಲ್ಲಿಟ್ಟು ವರ್ತಿಸುವದು, ದೇಶಕ್ಕೆ ಹಿತಕರವಾದದ್ದು.

ಗ್ಲ್ಯಾಡ್‌ಸ್ಟನ್ನನ ಕಾಗದಪತ್ರಗಳು.

ಗ್ಲ್ಯಾಡ್‌ಸ್ಟನ್ನನು ಹವಾರ್ಡೀನ್ ಕಾಸಲ್ಲನೊಳಗಿನದೊಂದು ಕೋಣೆಯಲ್ಲಿ ತನ್ನ ಕಾಗದಪತ್ರಗಳನ್ನೆಲ್ಲ ಬಲು ಜೋಕೆಯಿಂದಲೂ ವ್ಯವಸ್ಥೆಯಿಂದಲೂ ಇಟ್ಟಿರುವನು. ಅವುಗಳಲ್ಲಿ ಮಹತ್ವದ ವಿಷಯಗಳ ಮೇಲೆ ದೊಡ್ಡ ದೊಡ್ಡ ಗೃಹಸ್ಥರಿಂದ ಬರೆಯಲ್ಪಟ್ಟ ಲೇಖಗಳೆಷ್ಟೋ ಇರುವವು. ಅವು ಒಂದು ವೇಳೆಗೆ, ಯಾವನೊಬ್ಬ ಚತುರ ಇತಿಹಾಸಕಾರನ ಕೈಸೇರಿದ ಪಕ್ಷದಲ್ಲಿ, ಅವನು ಅವುಗಳ ಸಹಾಯದಿಂದ ಇಂಗ್ಲಂಡ ದೇಶದ ಇತಿಹಾಸವನ್ನು ಇನ್ನೂ ಹೆಚ್ಚು ಪೂರ್ಣಾವಸ್ಥೆಗೆ ತರುವ ಲೇಖಗಳನ್ನು ಬರೆಯಲು ಶಕ್ತನಾಗಬಹುದು. ಆ ಯೋಗವು ಒಂದಿಲ್ಲೊಂದು ದಿನ ನಿಶ್ಚಯವಾಗಿ ಬರುವದು.

ಉಪಾಂತ್ಯ ಕಾಲದಲ್ಲಿ ಗ್ಲಾಡ್‌ಸ್ಟನ್ನನ ವರ್ತನವು.

ಗ್ಲ್ಯಾಡ್‌ಸ್ಟನ್ನನು ಮುದುಕನಾಗುತ್ತ ಹೋದ ಹಾಗೆ, ತನ್ನ ನಿತ್ಯಕ್ರಮಕ್ಕೆ ಹೆಚ್ಚು ಹೆಚ್ಚು ಲಕ್ಷ್ಯಗೊಡುತ್ತ ಹೋದನು! ಅವನು ಅಶಕ್ತನಾದರೂ, ಕಣ್ಣುಗಳು ನೋಯ ಹತ್ತಿದರೂ, ಬೆಳಗಿನ ೮ ಗಂಟೆಯಿಂದ ೧೦ ಗಂಟೆಯವರೆಗೆ ಎಂದಿನಂತೆಯೇ ಓದುತ್ತ ಕೂಡ್ರುವನು. ಆ ಮೇಲೆ ಅವನು ಎದ್ದು ಹೋಗಿ, ಉಪಹಾರವನ್ನು ತೆಗೆದುಕೊಳ್ಳುವನು. ತರುವಾಯ ವಸ್ತ್ರಗಳನ್ನು ಧರಿಸಿಕೊಂಡು, ತನ್ನ ಶಾಂತಿಮಂದಿರಕ್ಕೆ ಹೋಗಿ, ಗ್ರಂಥಗಳನ್ನೋದುತ್ತಲೂ ಇಲ್ಲವೆ ಲೇಖಗಳನ್ನು ಬರೆಯುತ್ತಲೂ ಕೂಡ್ರುವನು. ಈ ಉದ್ಯೋಗದಲ್ಲಿ ಅವನು ೪-೫ ತಾಸುಗಳನ್ನು ಕಳೆಯುವನು. ತನಗೆ ಪತ್ರಗಳನ್ನು ಬರೆದವರಿಗೆ ಹೊತ್ತು ಹೊತ್ತಿಗೆ ಉತ್ತರಗಳನ್ನು ಬರೆದು ಕಳುಹಿಸುವನು. ಅವನ ಓದುವ ಪದ್ಧತಿಯು ಲಕ್ಷ್ಯದಲ್ಲಿಡಲು ತಕ್ಕದ್ದಾಗಿದೆ. ಅವನು ಬೇರೆ ಬೇರೆ ವಿಷಯಗಳ ಮೂರು ಗ್ರಂಥಗಳನ್ನು ತನ್ನ ಬಳಿಯಲ್ಲಿಯೇ ಇಟ್ಟುಕೊಂಡಿರುವನು. ಅವನು ಒಂದು ಪುಸ್ತಕವನ್ನು ಓದಿ ಬೇಸತ್ತರೆ ಎರಡನೆಯದನ್ನು, ಆ ಎರಡನೆಯದನ್ನು ಓದಿ ಬೇಸತ್ತರೆ ಮೂರನೆಯದನ್ನು, ಅದನ್ನೂ ಓದುವದರಿಂದ ತನಗೆ ಬೇಸರಿಕೆ ಬಂದರೆ, ಮತ್ತೆ ಮೊದಲನೆಯದನ್ನು ಈ ಕ್ರಮದಿಂದ ಅವುಗಳನ್ನು ಸರತಿಯ ಮೇಲೆ ಓದುವನು. ಈ ಮೇರೆಗೆ ಪುಸ್ತಕಗಳನ್ನು ಬದಲು ಮಾಡುವದರಿಂದ, ಆಗಾಗ್ಗೆ ಬಂದ ಬೇಸರಿಕೆಯು ಇಲ್ಲದಂತಾಗಿ, ಪ್ರತಿಯೊಂದು ಪುಸ್ತಕದ ವಾಚನವು ಒಂದೇ ಸಮನೆ ಉತ್ಸಾಹದಿಂದ ಸಾಗುವದು. ತಾನು ಓದಿದ್ದನ್ನು ತನ್ನದಾಗಿ ಮಾಡಿಕೊಳ್ಳುವದೊಂದು ವಿಶೇಷ ಗುಣವು ಅವನಲ್ಲಿತ್ತು. ಇದರಿಂದ ಅವನು ತನ್ನ ಅಂತ್ಯಕಾಲದ ವರೆಗೆ ಜ್ಞಾನವನ್ನು ಅಭಿವೃದ್ಧಿಸಲು ಶಕ್ತನಾದನು. ಅವನು ಹುಟ್ಟಿದಂದಿನಿಂದ ಸಾಯುವವರೆಗೆ ವಿದ್ಯಾರ್ಥಿಯೇ ಆಗಿದ್ದನೆಂದು ಹೇಳಬಹುದು. ಈಗಿನ ನಮ್ಮ ತರುಣರು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿ ಪದವಿಗಳನ್ನು ಪಡೆದ ಮಾತ್ರಕ್ಕೆ ಕೃತಾರ್ಥರಾದೆವೆಂದೆಣಿಸಿ, ತಮ್ಮ ವಿದ್ಯಾವ್ಯಾಸಂಗವನ್ನೇ ಬಿಟ್ಟು ಬಿಡುವರು. ತಾವು ಪಡೆದಿರುವ ಶಿಕ್ಷಣದ ಲಾಭವನ್ನು ದೇಶಬಾಂಧವರಿಗೆ ಮಾಡಿಕೊಡಬೇಕೆಂಬ ಸದಿಚ್ಛೆಯಿಂದ, ಇಂಗ್ಲಿಷ ಭಾಷೆಯಲ್ಲಿರುವ ಉಪಯುಕ್ತ ಗ್ರಂಥಗಳನ್ನು ಓದಿ, ಅವುಗಳ ಸಹಾಯದಿಂದ ದೇಶ ಭಾಷೆಯಲ್ಲಿ ಗ್ರಂಥಗಳನ್ನಾಗಲಿ ಲೇಖಗಳನ್ನಾಗಲಿ ಬರೆದು ಪ್ರಸಿದ್ಧಿಸುವವರು ಹತ್ತಕ್ಕೊಬ್ಬರಂತೆ ಸಿಗುವದು ಸಹ ಅಪರೂಪವಾಗಿದೆ. ಈ ಮೇರೆಗೆ ತಮ್ಮ ಜ್ಞಾನವನ್ನು ಬೆಳಿಸಲಿಕ್ಕೂ ತಾವು ಸದ್ಯಕ್ಕೆ ಪಡೆದಿರುವ ಜ್ಞಾನವನ್ನು ದೇಶಬಾಂಧವರಿಗೆ ಕೊಡಲಿಕ್ಕೂ ತೀರ ಉದಾಸೀನರಾಗಿರುವವರು ನಮ್ಮ ಈ ಚರಿತ್ರನಾಯಕನು ತನ್ನ ಮುಪ್ಪಿನ ಕಾಲದಲ್ಲಿ ಸಹ ವಿದ್ಯಾರ್ಜನೆಯ ಉದ್ಯೋಗ

ದಲ್ಲಿಯೂ ತನ್ನ ಜ್ಞಾನದ ಉಪಯೋಗವನ್ನು ಅನ್ಯರಿಗೆ ಮಾಡಿ ಕೊಡುವ ಪ್ರಸುತ್ನ ದಲ್ಲಿಯೂ ದಕ್ಷನಾಗಿದ್ದದ್ದನ್ನು ನೋಡಿ, ಬುದ್ಧಿಗಲಿಯತಕ್ಕದ್ದು. ಅವನ ಚರಿತ್ರೆಯಿಂದ ತಿಳಿದು ಒರುವ ಇನ್ನೊಂದು ಮಹತ್ವದ ಸಂಗತಿಯು ಏನೆಂದರೆ:—ಅವನು ಎಂಬತ್ತೆಂಟು ವರ್ಷದವನಾಗುವವರೆಗೆ, ಅವನ ಶರೀರ ಬೀವು ಅಲ್ಪವೂ ಕಡಿಮೆಯಾಗಲಿಲ್ಲ. ಆ ಮೇಲೆ ಮಾತ್ರ ಅದು ಕುಂದುತ್ತ ನಡೆಯಿತು. ಅವನ ಕಣ್ಣು ಕಿವಿ ಮುಂತಾದವುಗಳ ಶಕ್ತಿಯು ಹಿಮ್ಮೆಟ್ಟಲಾರಂಭಿಸಿತು. ಆದರೆ ಅವನ ಮನಸ್ಸಿನ ಸಾಮರ್ಥ್ಯವು ಮಾತ್ರ ಎಳ್ಳುಕಾಳಷ್ಟು ಸಹ ಕಡಿಮೆಯಾಗಲಿಲ್ಲ. ಬೇರೆ ಬೇರೆ ವಿಷಯುಗಳನ್ನು ಏಕ ಕಾಲಕ್ಕೆ ಗ್ರಹಿಸುವದು, ಅವುಗಳಲ್ಲಿ ಯಥಾರ್ಥವಾದದ್ದು ಯಾವುದು? ಅಯಥಾರ್ಥವಾದದ್ದು ಯಾವುದು? ಎಂಬದನ್ನು ತಟ್ಟನೇ ಕಂಡು ಹಿಡಿಯುವದು, ಭಿನ್ನ ಭಿನ್ನ ವಿಷಯುಗಳ ಬಗ್ಗೆ ತನ್ನ ಅಭಿಪ್ರಾಯುಗಳನ್ನು ಕೊಡುವದು, ಇವುಗಳನ್ನೆಲ್ಲ ನೆನಪಿನಲ್ಲಿಡುವದು ಇವೇ ಮುಂತಾದ ಅವನ ಮನಸಿನ ವ್ಯಾಪಾರಗಳು ಅಲ್ಪವೂ ಕುಂದಲಿಲ್ಲ ಸಾರಾಂಶ ವಾರ್ಧಿಕ್ಯದ ಪರಿಣಾಮವು ಅವನ ಶರೀರದ ಮೇಲಾಯಿತೇ ಹೊರತು ಅವನ ಮನಸಿನ ಮೇಲಾಗಲಿಲ್ಲ. ಅವನು ಕಡೆಯತನಕ ತನ್ನ ಶರೀರಕ್ಕೂ ಮನಸ್ಸಿಗೂ ಸರಿಯಾಗಿ ಲಕ್ಷಗೊಟ್ಟು, ಆಸಕ್ತಿಯಿಂದ ಅವುಗಳ ಶಕ್ತಿಯನ್ನು ಒಳಿತಾಗಿ ಬಲಿಸಿ, ಅವುಗಳನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡಿದ್ದನು. ಅಂತ್ಯಕಾಲದಲ್ಲಿ ಶರೀರ ಸಾಮರ್ಥ್ಯವು ಮಾತ್ರ ಅವನ ಕೈ ಬಿಟ್ಟಿತು; ಆದರೆ ಮನಸಿನ ಶಕ್ತಿಯು ಕಡಿಮೆಯಾಗಲಿಲ್ಲವಷ್ಟೇ ಅಲ್ಲ; ಅದು ಅಂತ್ಯಕಾಲದ ವರೆಗೆ ಅವನ ಸ್ವಾಧೀನದಲ್ಲಿಯೇ ಉಳಿಯಿತು. ಇದೇ ಅವನ ಆತ್ಮಸುಖಕ್ಕೂ ಅವನ ಉದ್ಧಾರಕ್ಕೂ ಕಾರಣವಾಯಿತೆಂದು ಹೇಳಬಹುದು.

---

## ೭ನೆಯ ಅಧ್ಯಾಯ.

---

### ಅಂತ್ಯವು.

॥ ಭಾಮಿನೀಷಟ್ಪದಿ ॥

ಕಾಯಸಿದ್ಧಿಯ ಪಡೆದ ಹಿರಿಯರು ।
ಮಾಯೆಯುಳಿದ ಮಹಾನುಭಾವರು ।
ಸಾಯಸದಲಷ್ಟಾಂಗಯೋಗಾಭ್ಯಾಸವನು ಮಾಡಿ ॥
ನೋಯದಸುವನು ಬಿಡುವ ಯೋಗಿಗ ।
ಳಾಯತಿಗಳಾವ್ರತಿಗಳೆಲ್ಲರು ।
ಸಾಯದುಳಿದವರಿಲ್ಲ, ಕಾಲಾಧೀನರಾಗಿಹರು ॥ ೧ ॥

(ಒಬ್ಬ ಜೈನಕವಿಯು).

ಗ್ಲ್ಯಾಡ್‌ಸ್ಟನ್ನನಿಗೆ ಜಡ್ಡು ಬರಲು ಅವನು ತನ್ನ ಆರೋಗ್ಯಕ್ಕಾಗಿ ಪರಸ್ಥಳಗಳಿಗೆ ಹೋದದ್ದು.

ಮನುಷ್ಯನಿಗೂ ಅವನ ಶರೀರಕ್ಕೂ ಇರುವಷ್ಟು ಸಿಕ್ಕಟ ಸಂಬಂಧವು ಅವನಿಗೂ ಈ ಜಗತ್ತಿನೊಳಗಿನ ಮತ್ತಾವ ಒಡವೆಗಳಿಗೂ ಇರುವದಿಲ್ಲ. ಹೀಗಿದ್ದರೂ ಹಲವು ಸಾರೆ ಬೇನೆಯನ್ನು ನೋಡಿದ ಮನುಷ್ಯನು ಸಹ, ತನ್ನ ಶರೀರದಲ್ಲಿ ರೋಗವು ಹುಟ್ಟಿದ ಕೂಡಲೆ, ಅದನ್ನು ಕಂಡು ಹಿಡಿಯಲು ಶಕ್ತನಾಗುವದಿಲ್ಲ; ಆದರೆ ಅದು ತಕ್ಕಷ್ಟು ಬಲಿತು, ತನ್ನನ್ನು ಪೀಡಿಸಹತ್ತಿದ ಬಳಿಕ, ಅದನ್ನು ತಿಳಿದುಕೊಳ್ಳುವನು. ಇದೊಂದು ಆಶ್ಚರ್ಯಕರವಾದ ಸಂಗತಿಯಾಗಿದೆ. ಗ್ಲ್ಯಾಡ್‌ಸ್ಟನ್ನನ ಶರೀರ ಪ್ರಕೃತಿಯನ್ನು ನೋಡಿದರೆ, ಅದು ಅವನ ಜನ್ಮದಾರಭ್ಯ ಕಲ್ಲಿನಂತೆ ಗಟ್ಟಿಯಾಗಿತ್ತು. ದೊಡ್ಡ ರೋಗಗಳು ಬಹುಶಃ ಅವನಿಗೆ ಬಂದಿದ್ದಿಲ್ಲ. ಅವನ ಸದೃಢವಾದ ಶರೀರವನ್ನು ಉದ್ದೇಶಿಸಿ (Sir Andrew Clerk) ಸರ್ ಆಂಡ್ರು ಕ್ಲಾರ್ಕನೆಂಬ ವೈದ್ಯನು "ಅಂತ್ಯಕಾಲದಲ್ಲಿ ಜೀವವು ಹೊರಟು ಹೋಗಲಿಕ್ಕೆ ಆಸ್ಪದವಾದ ಸ್ಥಳವೇನೂ ತಮ್ಮ ಶರೀರದಲ್ಲಿ ನನಗೆ ಕಾಣಿಸುವದಿಲ್ಲ" ಎಂದು ಒಮ್ಮೆ ನುಡಿದಿದ್ದನು. ಗ್ಲ್ಯಾಡ್‌ಸ್ಟನ್ನನು ಎಂಬತ್ತೇಳು ವರ್ಷದವನಾಗುವವರೆಗೆ ಸಶಕ್ತನಾಗಿದ್ದನು. ಆದರೆ ಸನ್ ೧೮೯೬ನೆಯ ವರ್ಷದಲ್ಲಿ ಮಾತ್ರ ಅವನಿಗೆ ಕುಸು ಬಲಗುಂದಿದಂತೆ ಅನಿಸಹತ್ತಿತು. ಮರುವರ್ಷ ಸೆಪ್ಟಂಬರ ತಿಂಗಳಿನ ಆರಂಭಕ್ಕೆ ಅವನ ಮೂಗಿನಲ್ಲಿ ನೋವು ಹುಟ್ಟಿ, ಅದು ಕ್ರಮೇಣ ಮೋರೆಯ ತುಂಬ ಹಬ್ಬುತ್ತಲೇ ನಡೆಯಿತು. 'ಇದು ಮಹಾರೋಗಗಳಲ್ಲಿ ಒಂದಾಗಿದ್ದದರಿಂದ ಇದನ್ನು ಬಿಚ್ಚಿ ಹೇಳಿದರೆ, ಅವನ ಕುಟುಂಬದವರು ಈಗಲೇ ಕೈಕಾಲು ಬಿಡುವರು' ಎಂದು ಗ್ರಹಿಸಿ, ವೈದ್ಯರು ಅದನ್ನು ತಮ್ಮ ಮನಸಿನಲ್ಲಿಯೇ ಇಟ್ಟುಕೊಂಡರು. ಈ ಸಮಯದಲ್ಲಿ ಗ್ಲ್ಯಾಡ್‌ಸ್ಟನ್ನನು ಇಂಗ್ಲಂಡದ ವಾಯುಗುಣವು ತನಗೆ ಹಿತಕರವಾಗದ್ದನ್ನು ಕಂಡು, ವೈದ್ಯರ ಅನುಮತಿಯನ್ನು ಪಡೆದು, ಆ ವರ್ಷದ ಚಳಿಗಾಲದಲ್ಲಿ ಕುಟುಂಬ ಸಹಿತವಾಗಿ ಅಲ್ಲಿಂದ ಹೊರಟು, ಫ್ರಾನ್ಸ ದೇಶದ ದಕ್ಷಿಣಭಾಗದಲ್ಲಿರುವ (Cannes) ಕ್ಯಾನೀಜ್ ಎಂಬ ಪಟ್ಟಣಕ್ಕೆ ಹೋಗಿ ಕೆಲವು ತಿಂಗಳುಗಳ ವರೆಗೆ ವಾಸಿಸಿದನು. ಅಲ್ಲಿಯೂ ತನಗೆ ಗುಣವಾಗದ್ದನ್ನು ಕಂಡು, ವೈದ್ಯರು ಹೇಳಿದಂತೆ, ಸನ್ ೧೮೯೮ನೆಯ ಫೆಬ್ರುವರಿ ೧೬ನೆಯ ತಾರೀಖಿನ ದಿವಸ ಅವನು ಅಲ್ಲಿಂದ ಹೊರಟು, ದಾರಿಗುಂಟ ಅಲ್ಲಲ್ಲಿಗೆ ಜನರು ಮಾಡುವ ಸನ್ಮಾನಗಳನ್ನು ಅಂಗೀಕರಿಸುತ್ತ ಇಂಗ್ಲಂಡಕ್ಕೆ ಬಂದು, ಅದರ ದಕ್ಷಿಣ ತೀರದಲ್ಲಿರುವ (Bournemouth) ಬೋರ್ನಮಥಕ್ಕೆ ಫೆಬ್ರುವರಿ ೨೨ನೆಯ ತಾರೀಖಿನ ದಿವಸ ಹೋಗಿ, ಅಲ್ಲಿ ನಿಂತುಕೊಂಡನು. ಆದರೂ ಅವನರೋಗವು ಹಿಮ್ಮೆಟ್ಟುವದರ ಬದಲು ಬಲಿಯುತ್ತಲೇ ನಡೆಯಿತು.

ಬೋರ್ನಮಥದ ನಿವಾಸಿಗಳಿಂದ ಗ್ಲ್ಯಾಡ್‌ಸ್ಟನನು ಪಡೆದ ಮನ್ನಣೆಯು.

ಆ ಮೇಲೆ ವೈದ್ಯರು ಅವನ ಜಿತ್ತ ಹೆಚ್ಚಾದದ್ದನ್ನು ನೋಡಿ, ಇನ್ನು ಮೇಲೆ ಇಲ್ಲಿರುವದಕ್ಕಿಂತ ಹವಾರ್ಡೀನ ಕಾಸಲ್ಲಕ್ಕೆ ಹೋಗುವದೇ ಲೇಸೆಂದು ಹೇಳಲು, ಅವನು ಬೋರ್ನಮಥ್ ಪಟ್ಟಣದಿಂದ ಹೊರಡಲನುವಾದನು. ಆ ವೇಳೆಯಲ್ಲಿ ಆ ಪಟ್ಟಣದ ನಿವಾಸಿಗಳು ಗ್ಲ್ಯಾಡ್‌ಸ್ಟನ್ನನು ತಮ್ಮೂರಿಗೆ ತಿರುಗಿ ಬರುವ ಸಂಭವವಿಲ್ಲೆಂದು ಅರಿತುಕೊಂಡು, ಅವನ ದರ್ಶನಕ್ಕಾಗಿ ಉಗೆಬಂಡೆಯ ನಿಲ್ದಾಣದಲ್ಲಿ ನೆರೆದರು. ಅವನು ರಥದಲ್ಲಿ ಕುಳಿತು ನಿಲ್ದಾಣದ ಸಮೀಪಕ್ಕೆ ಬಂದ ಕೂಡಲೆ, ಅವರೆಲ್ಲರು ತಮ್ಮ ಟೊಪ್ಪಿಗೆಗಳನ್ನು ತೆಗೆದು, ಅವನ ಹೆಸಗೊಂಡು ಜಯು ಜಯುವೆಂದು ಘೋಷಿಸಿದರು. ಇದನ್ನು ನೋಡಿ ಗ್ಲ್ಯಾಡ್‌ಸ್ಟನ್ನನು ತುಂಬಾ ಸಂತೋಷಪಟ್ಟು, ರಥದಿಂದಿಳಿದು, ತನ್ನ ತಲೆಯ ಮೇಲಿನ ಟೊಪ್ಪಿಗೆಯನ್ನು ತೆಗೆದು, ಬಲಗೈಯಲ್ಲಿ ಹಿಡಿದುಕೊಂಡು, ಸಾಲುಗಟ್ಟಿ ನಿಂತಿದ್ದ ಜನರ ಮಧ್ಯದಲ್ಲಿ, ತನ್ನ ಹೆಂಡತಿಯಿಂದೊಡಗೂಡಿ ಸಾವಕಾಶವಾಗಿ ನಡೆಯುತ್ತ, ತನ್ನ ಸಲುವಾಗಿ ಸಿದ್ಧವಾಗಿದ್ದ (Royal Saloon) ರೊಯಲ್ ಸಲೂನವೆಂಬ ವಿಶಾಲವಾದ ಸೊಬಗಿನ ಬಂಡೆಯ ಬಳಿಗೆ ಬಂದನು. ಆ ಸಮಯದಲ್ಲಿ ಉಭಯ ಪಾರ್ಶ್ವಗಳಲ್ಲಿ ನಿಂತುಕೊಂಡಿದ್ದ ಜನರು 'ದೇವರು ತಮ್ಮನ್ನು ಆಶೀರ್ವದಿಸಲಿ, ದೇವರ ದಯವು ಯಾವಾಗಲು ತಮ್ಮ ಮೇಲಿರಲಿ' ಎಂದು ಅವನನ್ನು ಹರಸಿದರು. ಇದನ್ನು ಕೇಳಿ ಗ್ಲ್ಯಾಡ್‌ಸ್ಟನ್ನನು ಸಂತೋಷದ ಮುಖ ಮುದ್ರೆಯಿಂದ ಅವರ ಕಡೆಗೆ ನೋಡಿ, ತನ್ನ ಕೈಗಳನ್ನು ಮೇಲಕ್ಕೆತ್ತಿ, ಅಂತಃಕರಣದ ಸ್ವರದಿಂದ 'ದೇವರು ನಿಮ್ಮೆಲ್ಲರನ್ನು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಆಶೀರ್ವದಿಸಲಿ' ಎಂದು ಗಟ್ಟಿಯಾಗಿ ನುಡಿದು, ಬಂಡೆಯನ್ನು ಹತ್ತಿದನು. ಕೂಡಲೆ ಉಗೆಬಂಡೆಯು ಹೊರಟಿತು. ನೆರೆದ ಜನರು ಏಕಕಾಲಕ್ಕೆ ಅವನ ಹೆಸರಿನಿಂದ ತಿರುಗಿ ಜಯಘೋಷ ಮಾಡಿದರು.

ಗ್ಲ್ಯಾಡ್‌ಸ್ಟನ್ನನ ಬೇನೆಯು ಬಲ್ತದ್ದು.

ಮೇಲೆ ಹೇಳಿದ ಮೇರೆಗೆ ಗ್ಲ್ಯಾಡ್‌ಸ್ಟನ್ನನು ಬೋರ್ನಮಥದಿಂದ ಹೊರಟು ಮಾರ್ಚ ತಿಂಗಳಿನ ೨೨ನೆಯ ತಾರೀಖಿನ ದಿವಸ ಹವಾರ್ಡಿನ್ ಕಾಸಲಕ್ಕೆ ಬಂದು ಸೇರಿದನು. ಈ ಹೊತ್ತಿಗೆ ಅವನ ಬೇನೆಯ ಕಸುವು ಬಲು ಹೆಚ್ಚಾಗಿತ್ತು. ಅವನು ತಮ್ಮ ಕೈ ಬಿಡುವನೆಂದು ಎಲ್ಲರಿಗೂ ಅನಿಸಿತು. ಈ ವೇಳೆಯಲ್ಲಿ ವೈದ್ಯರು ಏನೂ ಬಚ್ಚಿಡದೆ 'ಇವರ ಅಂತ್ಯಕಾಲವು ಸಮೀಪಿಸ ಹತ್ತಿರುವದು' ಎಂದು ಸ್ಪಷ್ಟವಾಗಿ ಹೇಳಿದರು. ಇದನ್ನು ಕೇಳಿ ಗ್ಲ್ಯಾಡ್‌ಸ್ಟನ್ನನು ಅಲ್ಪವೂ ಭಯಪಡಲಿಲ್ಲ ಅಥವಾ ದುಃಖಿಸಲಿಲ್ಲ. ಯಾಕೆಂದರೆ ಈ ಅಸಹ್ಯ ವೇದನೆಯಿಂದ ಬಳಲುವದಕ್ಕಿಂತ

ದೇವರು ಆದಷ್ಟು ಬೇಗ ತನ್ನ ಕಣ್ಣುಗಳನ್ನು ಮುಚ್ಚುವದೇ ಲೇಸೆಂದು ಅವನು ಎಣಿಸುತ್ತಿದ್ದನು. ಇದಲ್ಲದೆ ಅವನು ಪರಮೇಶ್ವರನ ನಿಃಸೀಮ ಭಕ್ತನಾಗಿದ್ದದರಿಂದ ಅವನ ಬಳಿಗೆ ಆದಷ್ಟು ಶೀಘ್ರವಾಗಿ ಹೋಗಬೇಕೆಂದು ಅಪೇಕ್ಷಿಸುತ್ತಿದ್ದನು. ಈ ಹೊತ್ತಿನಿಂದ ಅವನ ಮನಸು ಇಹಲೋಕದ ವಿಚಾರಗಳನ್ನೆಲ್ಲ ಸಂಪೂರ್ಣವಾಗಿ ಮರೆತು, ಪರಲೋಕದ ವಿಚಾರಗಳಲ್ಲಿಯೇ ತೊಡಗಿತು. ಈ ಸಮಯದಲ್ಲಿ ಒಬ್ಬ ಗೃಹಸ್ಥನು ಅವನಿಗೆ "ತಾವು ಇನ್ನೂ ಹತ್ತು ವರ್ಷ ಬಾಳಿದರೆ ಲೇಸಾಗುವದು; ದೇವರ ಅನುಗ್ರಹವಿದ್ದಲ್ಲಿ ಹಾಗೂ ಆಗಬಹುದು" ಎಂದು ಹೇಳಿದನು. ಅದಕ್ಕೆ ಗ್ಲ್ಯಾಡ್‌ಸ್ಟನ್ನನು "ಬೇಡ, ಬೇಡ, ಇನ್ನು ಮೇಲೆ ಆ ವಿಚಾರವೇ ಬೇಡ. ದೇವರು ನನ್ನನ್ನು ಈ ಭವಸಾಗರದಿಂದ ಪಾರ ಮಾಡಲಿ. ನಾನು ನನ್ನ ಒಂದುನೂರು ಎಂಬತ್ತೊಂದು ಅಯನಗಳನ್ನು (ಅರ್ಧ ವರ್ಷಗಳನ್ನು) ಯಾವುದೊಂದು ಬೇನೆ ಬೇಸರಿಕೆ ಇಲ್ಲದೆ ಆನಂದದಲ್ಲಿ ಕಳೆದೆನು. ಈಗ ನಾನು ಇದೊಂದು ಅಯನದ (ಅರ್ಧ ವರ್ಷದ) ನೋವನ್ನು ಸಹಿಸಲು ಹಿಂದು ಮುಂದು ನೋಡುವದು ಸರಿಯಲ್ಲ" ಎಂದು ನುಡಿದನು.

ಸ್ವದೇಶದವರೂ ಪರದೇಶದವರೂ ಗ್ಲ್ಯಾಡ್‌ಸ್ಟನ್ನನಿಗೆ ಕ್ಷೇಮಚಿಂತನೆಯ ಪತ್ರಗಳನ್ನು ಕಳುಹಿಸಿದ್ದು.

ಗ್ಲ್ಯಾಡ್‌ಸ್ಟನ್ನನಿಗೆ ಅಸ್ವಸ್ಥತೆಯುಂಟಾದಂದಿನಿಂದ ಮಹಾರಾಣೀ ಸಾಹೇಬರು ಅವನ ಪ್ರಕೃತಿಯು ವಿಷಯವಾಗಿ ಮೇಲಿಂದ ಮೇಲೆ ಸುದ್ದಿಯನ್ನು ತರಿಸಿಕೊಳ್ಳುತ್ತಿದ್ದರು. ಅವನು ಪರಸ್ಥಳಗಳಿಗೆ ಹೋದ ಸಮಯಗಳಲ್ಲಿ ಅವನ ಆರೋಗ್ಯದ ಬಗ್ಗೆ ಆಗಾಗ್ಗೆ ಪತ್ರಗಳನ್ನು ತರಿಸಿಕೊಳ್ಳುವ ವ್ಯವಸ್ಥೆಯನ್ನು ಸಹ ಮಾಡಿದ್ದರು. ಈ ಪತ್ರಗಳಿಗೆ ಅವರು ಸ್ವತಃ ಉತ್ತರಗಳನ್ನು ಬರೆಯುತ್ತಿದ್ದರು. ಡೆನ್ಮಾರ್ಕ ದೇಶದ ಅರಸನೂ ಅವನ ದೇಹಸ್ಥಿತಿಯು ವಿಷಯವಾಗಿ ಮೇಲಿಂದಮೇಲೆ ತಿಳಿದುಕೊಳ್ಳಲು ಹವಣಿಸುತ್ತಿದ್ದನು. ಆದರೆ ಗ್ಲ್ಯಾಡ್‌ಸ್ಟನ್ನನ ಪ್ರಕೃತಿಯು ದಿನೇ ದಿನೇ ಕ್ಷೀಣವಾಗುತ್ತ ನಡೆದಿರುವ ಸುದ್ದಿಯನ್ನು ಕೇಳಿ, ಗ್ರೇಟ್‌ಬ್ರಿಟನ್ ಮತ್ತು; ಐರ್ಲಂಡ ದೇಶಗಳೊಳಗಿನ ಪ್ರತಿ ಒಂದು ಸಂಸ್ಥೆಯವರೂ, ಇಟಲಿ, ಗ್ರೀಸ್, ರಸಿಯಾ, ಆಫ್ರಿಕಾ, ಅಮೇರಿಕಾ ಮುಂತಾದ ಪರದೇಶದವರೂ ಖೇದಗೊಂಡು ಅವನ ಕ್ಷೇಮಚಿಂತನೆಯ ವಿಷಯವಾಗಿ ಪತ್ರಗಳನ್ನೂ ತಂತಿಗಳನ್ನೂ ಕಳುಹಿಸಹತ್ತಿದರು.

ಗ್ಲ್ಯಾಡ್‌ಸ್ಟನ್ನನ ಕಡೆ

ಮೇ ತಿಂಗಳಿನ ಮಧ್ಯದಲ್ಲಿ ಅವನ ಕುಟುಂಬದವರಿಗೂ ಆಪ್ತರಿಷ್ಟರಿಗೂ ಇಷ್ಟಮಿತ್ರರಿಗೂ, ಅವನು ಬೇಗನೆ ತಮ್ಮ ಕೈಬಿಡುವಂತೆ ತೋರಿತು. ಈ ಸಮಯದಲ್ಲಿ ಲಾರ್ಡ ರೋಜಬರಿ,

ಯ ದರ್ಶನಕ್ಕಾಗಿ ದೊಡ್ಡ ದೊಡ್ಡ ಜನರ ಆಗಮನವು.

ಸರ್ ಆರ್ಥರ ಗಾಡ್ಲೆ, ಜಾನ್ ಮೋರ್ಲೆ, ಜಿ. ಡಬ್ಲಿಯು. ಈ. ರಸೇಲ್ ಮುಂತಾದ ಮಿತ್ರರು ಅವನ ದರ್ಶನಕ್ಕಾಗಿ ಬಂದರು. ಅವನು ಅವರನ್ನು ಹರಸಿ, ಅವರ ಸಂಗಡ ಒಂದೆರಡು ಮಾತುಗಳನ್ನಾಡಿದನು. ಆ ಮಾತುಗಳಲ್ಲಿ ಪರಲೋಕದ ಮತ್ತು ಪಾರಮಾರ್ಥದ ಹೊರತು ಇಹಲೋಕಸಂಬಂಧದ ಒಂದು ಶಬ್ದವಾದರೂ ಇದ್ದಿಲ್ಲ. ತನಗೆ ಅಪರಿಮಿತ ವೇದನೆಯಾಗುತ್ತಿದ್ದರೂ ಅವನು ಸಂಕಟದಿಂದ ಅತ್ತಿತ್ತ ಹೊರಳಾಡದೆ, ಮೋರೆಯನ್ನು ಕಿವಚದೆ, ಬೇಸರದ ಒಂದು ನುಡಿಯನ್ನಾದರೂ ನುಡಿಯದೆ, ಶಾಂತಚಿತ್ತದಿಂದ ಮಲಗಿದವನಂತೆ ತೋರುತ್ತಿದ್ದನು. "ನನ್ನ ವಿಶ್ವಾಸವು ದೇವರಲ್ಲಿ ದೃಢವಾಗಿದೆ, ನನ್ನ ವಿಶ್ವಾಸವು ದೇವರಲ್ಲಿ ದೃಢವಾಗಿದೆ" ಎಂದು ಮಾತ್ರ ಆಗಾಗ್ಗೆ ನುಡಿಯುತ್ತಿದ್ದನು. ಅವನ ದೃಷ್ಟಿಯು ಎಡಬಲದಲ್ಲಿದ್ದವರ ಮೇಲೆ ಅಪ್ಪಿತಪ್ಪಿ ಬಿದ್ದಾಗ್ಗೆ "ಮರಣದ ತರುವಾಯ ನಾವೆಲ್ಲರು ಜೀವಿಸುವೆವು; ಕೃತಾಪರಾಧಗಳಿಗಾಗಿ ಪಶ್ಚಾತ್ತಾಪಪಟ್ಟು, ದೇವರನ್ನು ಭಕ್ತಿಭಾವದಿಂದ ನಂಬಿ, ಈ ಲೋಕವನ್ನು ಬಿಡುವವರು ಈ ಲೋಕಕ್ಕಿಂತ ಶ್ರೇಷ್ಠವಾದ ಪರಲೋಕದಲ್ಲಿ ಒಬ್ಬರನ್ನೊಬ್ಬರು ತಿರುಗಿ ನೋಡುವರು" ಎಂದು ಒಮ್ಮೊಮ್ಮೆ ಅನ್ನುತ್ತಿದ್ದನು. ಈ ಸಮಯದಲ್ಲಿ ಅವನು ಏಕಾಗ್ರಚಿತ್ತವುಳ್ಳವನಾಗಿದ್ದಂತೆ ತೋರುತ್ತಿದ್ದನು.

ಗ್ಲ್ಯಾಡ್‌ಸ್ಟನ್ನನ ಹಿತಕ್ಕಾಗಿ ದೇಶದಲ್ಲಿ ನಡೆದ ದೇವತಾ ಸ್ತೋತ್ರಗಳು.

ಗ್ಲ್ಯಾಡ್‌ಸ್ಟನ್ನನ ಬೇನೆಯು ಹೆಚ್ಚಾಗಿದೆಂತಲೂ ಅವನು ಬದುಕುವ ಆಶೆಯು ಇಲ್ಲೆಂತಲೂ ದುಸ್ಸಹವಾದ ವೇದನೆಗಳಿಗೊಳಗಾದರೂ ಅವನು ಬಲು ತಾಳ್ಮೆಯಿಂದ ಅವುಗಳನ್ನು ಸಹಿಸಿಕೊಳ್ಳುತ್ತಿರುವನೆಂತಲೂ ಜನರಿಗೆ ತಿಳಿದಾಗ್ಗೆ, ಅವರು ಅವನ ವಿಷಯವಾಗಿ ಬಹು ಖೇದಗೊಂಡು, ಆ ವೇದನೆಗಳಿಂದ ಅವನನ್ನು ಬೇಗನೆ ಮುಕ್ತನನ್ನಾಗಿ ಮಾಡಬೇಕೆಂದು ದೇವರನ್ನು ಪ್ರಾರ್ಥಿಸುವ ಕ್ರಮ ನಡಿಸಿದರು. ಈ ತರದ ಪ್ರಾರ್ಥನೆಗಳು ದೇಶದ ತುಂಬಾ ಸಾಗಿದವು. (St. Paul) ಸೆಂಟ್ ಪಾಲ್ ಎಂಬ ಭಜನಾಲಯದಲ್ಲಿ (Canon Scott Hallond) ಕ್ಯಾನನ್ ಸ್ಕಾಟ್ ಹಾಲಂಡನೆಂಬ ಧರ್ಮಾಧಿಕಾರಿಯು ಜನರಿಗೆ ಉಪದೇಶ ಮಾಡುತ್ತಿರುವಾಗ್ಗೆ ಹೇಳಿದ್ದೇನೆಂದರೆ:—"ಈಗ ಒಬ್ಬ ದೊಡ್ಡ ಮನುಷ್ಯನು ಕಷ್ಟದಲ್ಲಿ ಬಿದ್ದಿರುವನು. ತನಗೆ ಮೃತ್ಯುವು ಬೇಗ ಬಂದಷ್ಟು ಲೇಸೆಂದೆಣಿಸುತ್ತಿರುವನು; ಆದರೆ ಅದು ಬರಲೊಲ್ಲದು. ಆದದರಿಂದ ಅವನನ್ನು ಈ ಸಂಸಾರಬಂಧನದಿಂದ ಶೀಘ್ರವಾಗಿ ಬಿಡಿಸೆಂದು ಪರಮೇಶ್ವರನನ್ನು ನೀವು ಪ್ರಾರ್ಥಿಸತಕ್ಕದ್ದು. ಜನ್ಮದಾರಭ್ಯ ಮಹಾ ಪರಾಕ್ರಮದ ಕೃತ್ಯಗಳನ್ನೆಸಗಿದ ಸಿಂಹಕ್ಕೆ ಮುಪ್ಪಿನ ಕಾಲದಲ್ಲಿ ಬೇಟೆಗಾರನ ಗುಂಡುಗಳು ಮರ್ಮಸ್ಥಾನಕ್ಕೆ ಬಡಿದರೆ ಇಲ್ಲವೆ

ಕೆಟ್ಟ ಬೇನೆಯು ಬಂದರೆ, ಅದು ಪರಾಧೀನವಾಗಿ ಒತ್ತಟ್ಟಿಗೆ ಬಿದ್ದುಕೊಳ್ಳುವಂತೆ, ಆ ಗೃಹಸ್ಥನು ತನ್ನ ಆಯುಷ್ಯದ ಮುಖ್ಯ ಭಾಗವನ್ನು ಸ್ವದೇಶ-ಪರದೇಶಗಳ ಸೇವೆಯಲ್ಲಿಯೂ ಪರೋಪಕಾರಗಳಲ್ಲಿಯೂ ಕಳೆದು, ವೃದ್ಧಾಪ್ಯದಲ್ಲಿ ರೋಗಗ್ರಸ್ತನಾಗಿ ಹವಾರ್ಡೀವ ಕಾಸಲ್ಲದಲ್ಲಿ ಈಗ ಬಿದ್ದಿರುವನು. ತಡೆಯಲಾರದ ನೋವನ್ನು ಆ ಸತ್ವಶಾಲಿಯಾದ ಪುರುಷನು ಶಾಂತಚಿತ್ತದಿಂದ ಸಹಿಸಿಕೊಂಡು, ತನ್ನ ಹೊತ್ತನ್ನು ಸುತ್ತಲಿನ ಜನರನ್ನು ಆಶೀರ್ವದಿಸುವದರಲ್ಲಿಯೂ, ಅವರ ಕ್ಷೇಮಚಿಂತನೆಯಲ್ಲಿಯೂ ಹಾಕುತ್ತಿರುವನು. ಇಂಥ ಸಮಯದಲ್ಲಿ ಸಮಸ್ತ ರಾಷ್ಟ್ರಗಳ ಜನರು ಅವನ ಈ ಕಷ್ಟಗಳನ್ನು ವಿಮೋಚನೆ ಮಾಡಿ, ಅವನ ಆತ್ಮಕ್ಕೆ ಸ್ಥಿರವಾದ ಶಾಂತಿಯನ್ನೀಯೆಂದು ದಯಾಸಾಗರನಾದ ಪರಮಾತ್ಮನನ್ನು ಬೇಡಿಕೊಂಡು, ಅವನಿಗೆ ನೆರವಾಗಬೇಕಾಗಿದೆ.

ಗ್ಲ್ಯಾಡ್‌ಸ್ಟನ್ನನ ಅಂತ್ಯಕಾಲದ ನುಡಿಗಳು.

ಮೇ ೧೬ ನೆಯ ತಾರೀಖಿನ ದಿವಸ ಗ್ಲ್ಯಾಡ್‌ಸ್ಟನ್ನನ ಬೇನೆಯು ಪರಮಾವಧಿ ಹೆಚ್ಚಾಯಿತು. ಅವನ ನೋವಂತು ಮೇರೆದಪ್ಪಿತು. ಅವನ ಶರೀರವು ಅವನಿಗೇ ಭಾರವಾಯಿತು. ಆದರೆ ಅವನ ಮನಸಿನ ಶಾಂತಿಯು ಮಾತ್ರ ರವಷ್ಟಾದರೂ ಕಡಿಮೆಯಾಗಲಿಲ್ಲ. ಅವನು ತನ್ನ ಅಳಿಯನಿಗೆ ಒಂದು ಸಾರೆ "ಪರಮೇಶ್ವರನ ಕೃಪೆಯ ಮೇಲೆಯೂ ಅವನ ಭಕ್ತವತ್ಸಲತೆಯ ಮೇಲೆಯೂ ನನ್ನ ಸಂಪೂರ್ಣ ನಂಬಿಗೆಯುಂಟು. ಅದಕ್ಕೆ ಎಂದೂ ಕುಂದು ಬರಲಾರದು. ನಾನು ಈಗ ದುಃಖದೊಳಗಿರುವೆನೆಂದು ನೀನು ಎಣಿಸಬೇಡ. ನನಗಿರುವ ಈಗಿನ ಶಾಂತಿಯನ್ನು ನೋಡಿ ನನಗೇ ಆಶ್ಚರ್ಯವಾಗುತ್ತಿದೆ. ನಮ್ಮ ರಾಷ್ಟ್ರದ ತುಂಬಾ ನನ್ನ ಸಲುವಾಗಿ ನಡೆದಿರುವ ಪ್ರಾರ್ಥನೆಗಳ ಸುದ್ದಿಯನ್ನು ಕೇಳಿ ನನಗೆ ಪರಮ ಸಂತೋಷವಾಗಿದೆ" ಎಂದು ಹೇಳಿದನು. ಅವನ ಹಾಸಿಗೆಯ ಎದುರಿನ ಗೋಡೆಯ ಮೇಲೆ ಕ್ರಿಸ್ತೀ ಧರ್ಮಶಾಸ್ತ್ರದೊಳಗಿನ "ಸ್ಥಿರ ಚಿತ್ತವು ಯಾವಾಗಲೂ ಸಮಾಧಾನದಲ್ಲಿರುವದು. ಯಾಕೆಂದರೆ ಅದು ದೇವರಲ್ಲಿಯೇ ಲೀನವಾಗಿರುವದು" ಎಂಬ ವಚನವನ್ನು ಅವನ ಗೆಳೆಯರು ಥಳಥಳವಾದ ಅಕ್ಷರಗಳಿಂದ ಬರೆದು, ಅದು ಸಹಜವಾಗಿ ಅವನ ಕಣ್ಣಿಗೆ ಬೀಳುವಂತೆ ಮಾಡಿದ್ದರು. ಅದರ ಮೇಲೆಯೇ ಅವನ ಲಕ್ಷ್ಯವಿತ್ತು. ಅವನ ಬದಿಯಲ್ಲಿದ್ದ ಒಬ್ಬ ಸ್ನೇಹಿತನು "ತಮಗೆ ವೇದನೆಯಾಗುವದೋ?" ಎಂದು ಅವನನ್ನು ಕೇಳಿದನು. ಅದಕ್ಕವನು "ಇಲ್ಲ, ಇಲ್ಲ; ನನಗೆ ಈಗ ಏನೂ ವೇದನೆಯಾಗುವದಿಲ್ಲ. ನಾನು ಮೃತ್ಯುವಿನ ಮಾರ್ಗವನ್ನು ನಿರೀಕ್ಷಿಸುತ್ತೇನೆ" ಎಂದು ಉತ್ತರ ಕೊಟ್ಟನು. ಅವನು ಆಗಾಗ್ಗೆ ತನ್ನ ಸುತ್ತಲು ನೋಡಿ, ಬಳಿಕ ಮೇಲಕ್ಕೆ ದೃಷ್ಟಿಯನ್ನಿಟ್ಟು, ಬಹು ಕೃತಜ್ಞತೆಯಿಂದ "ಆಹಹಾ, ದೇವರ ಕೃಪೆಯು

ಎಷ್ಟು! ಇದೆಷ್ಟು ದೇವರ ಕೃಪೆಯು! ನೋಡಿದಲ್ಲೆಲ್ಲ ಆತನ ಕೃಪೆಯೇ ತುಂಬಿಕೊಂಡಿದೆ” ಎಂದು ಅನ್ನುತ್ತಿದ್ದನು. ಸುತ್ತಲಿನ ಜನರು ತನ್ನ ಸೇವೆಯಲ್ಲಿ ತೊಡಗಿರುವದಕ್ಕೂ ತನ್ನ ಶರೀರಕ್ಕೆಷ್ಟು ವ್ಯಥೆಯಾಗುತ್ತಿದ್ದರೂ ತನ್ನ ಬುದ್ಧಿಯು ಸ್ಥಿರವಾಗಿರುವದಕ್ಕೂ, ಚಿತ್ತವಂತು ದೇವರಲ್ಲಿಯೇ ತೊಡಗಿರುವದಕ್ಕೂ ಆತನ ಕೃಪೆಯೇ ಕಾರಣವೆಂಬದು ಅವನ ನುಡಿಯ ತಾತ್ಪರ್ಯವು.

ಗ್ಲ್ಯಾಡ್‌ಸ್ಟನ್ನನ ಅಂತ್ಯವು, ೧೮೯೮, ಮೇ ೧೯.

ಕಟ್ಟಕಡೆಗೆ ಅವನ ಅಂತ್ಯಕಾಲವು ತೀರ ಸಮೀಪಿಸಿತು. ಮೇ ತಿಂಗಳಿನ ೧೮ನೆಯ ತಾರೀಖಿನ ರಾತ್ರಿಯಲ್ಲಿ ಯಾರೂ ಕಣ್ಣಿಗೆ ಕಣ್ಣು ಹಚ್ಚಿ ಮಲಗಲಿಲ್ಲ. ಆ ದಿನ ದೊಡ್ಡ ದೊಡ್ಡ ಗೃಹಸ್ಥರು ತಮ್ಮ ಅನುತಾಪಸೂಚಕ ಪತ್ರಗಳನ್ನು ತಂತಿಗಳ ಮೂಲಕ ಅವನ ಕುಟುಂಬದವರಿಗೆ ಕಳುಹಿಸಿದರು. ಯುವರಾಜರು ಗ್ಲ್ಯಾಡ್‌ಸ್ಟನ್ನನ ಜ್ಯೇಷ್ಠ ಚಿರಂಜೀವನಿಗೆ ಕಳುಹಿಸಿದ ತಂತಿಯಲ್ಲಿ “ಈ ಸಹಿಸಲಸಾಧ್ಯವಾದ ದುಃಖದ ಪ್ರಸಂಗವು ಒಮ್ಮಿಂದೊಮ್ಮೆ ನಿಮ್ಮ ಮೇಲೆ ಬಂದದ್ದನ್ನು ನೋಡಿ, ನಮಗೆ ಬಹು ಖೇದವಾಗಿದೆ. ನಮ್ಮ ಲಕ್ಷವೆಲ್ಲ ನಿಮ್ಮ ತಂದೆಗಳ ಕಡೆಗೆ, ನಿಮ್ಮ ತಾಯಿಗಳ ಕಡೆಗೆ, ನಿಮ್ಮ ಕುಟುಂಬದೊಳಗಿನ ಜನರ ಕಡೆಗೆ ಇರುತ್ತದೆ. ನಿಮ್ಮ ತಂದೆಗಳು ಸಹಿಸಬೇಕಾಗಿರುವ ಕ್ಲೇಶಗಳನ್ನು ಕಡಿಮೆ ಮಾಡಬೇಕೆಂದು ನಾವು ದೇವರನ್ನು ಅನನ್ಯಭಾವದಿಂದ ಪ್ರಾರ್ಥಿಸುತ್ತೇವೆ” ಎಂದು ಕಾಣಿಸಿದ್ದರು. ಬೆಳಗಿನ ಮೂರು ಬಡಿಯುವ ಹೊತ್ತಾಯಿತು. ಈ ಸಮಯದಲ್ಲಿ ಗ್ಲ್ಯಾಡ್‌ಸ್ಟನ್ನನ ಬಳಿಯಲ್ಲಿದ್ದ ವೈದ್ಯರು ಅವನ ಅವಸಾನಕಾಲವು ಬಂತೆಂದು ಹೇಳಿದರು. ಅವನನ್ನು ಒಂದು ವಿಶಾಲವಾದ ಕೋಣೆಯಲ್ಲಿ ಪಲಂಗದ ಮೇಲೆ ಮಲಗಿಸಿದ್ದರು. ಅವನ ಮಸ್ತಕವನ್ನು ಎತ್ತರವಾದ ತಲೆಗಿಂಬಿನ ಮೇಲಿಟ್ಟು, ಕುತ್ತಿಗೆಯ ವರೆಗೆ ಬೆಚ್ಚಗಿನ ಅರಿವೆಗಳನ್ನು ಹೊದಿಸಿದ್ದರು. ಅವನ ಅರ್ಧಾಂಗಿನಿಯು ಅವನ ಕೈಗಳನ್ನು ಒತ್ತುತ್ತಲೂ ಮೇಲಿಂದ ಮೇಲೆ ಅವುಗಳನ್ನು ಚುಂಬಿಸುತ್ತಲೂ ಅವನ ಮುಖವನ್ನು ಎವೆ ಹಾಕದೆ ನೋಡುತ್ತಲೂ ಎಡಗಡೆಗೆ ಕುಳಿತುಕೊಂಡಿದ್ದಳು. ಅವನ ಗಂಡು ಮಕ್ಕಳೂ ಹೆಣ್ಣು ಮಕ್ಕಳೂ ಸೊಸೆಯಂದಿರೂ ಅವನ ಹಾಸಿಗೆಯ ಸುತ್ತಲು ನಿಂತುಕೊಂಡಿದ್ದರು. ಈ ವೇಳೆಯಲ್ಲಿ ರೆವ್ಹರೆಂಡ್ ಸ್ಟೀಫನ್ ಗ್ಲ್ಯಾಡ್‌ಸ್ಟನ್ನನು ತಂದೆಯ ಬದಿಯಲ್ಲಿ ನಿಂತು, ಪ್ರಾರ್ಥನಾಗ್ರಂಥದೊಳಗಿನ ಗೀತಗಳನ್ನು ಕೆಲವು ಸಾರೆ ಓದಿದನು. ಗ್ಲ್ಯಾಡ್‌ಸ್ಟನ್ನನು ಒಮ್ಮೆ ಮಾತ್ರ ಗೀತದ ಅಂತ್ಯದಲ್ಲಿ (Amen) “ಆಮೇನ್” ಅಂದರೆ “ತಥಾಸ್ತು” ಎಂದು ಸ್ಪಷ್ಟವಾಗಿ ನುಡಿದನು. ಇದೇ ಅವನ ಅಂತ್ಯದ ನುಡಿಯು. ತಾರೀಖು ೧೯ನೆಯ ದಿನ * (ಗುರುವಾರ)

* ಇಂಗ್ಲಿಷ್ ಜನರಲ್ಲಿ ಮಧ್ಯರಾತ್ರಿಯಿಂದ ಮಧ್ಯರಾತ್ರಿಯವರೆಗೆ ಒಂದು ದಿವಸವೆಂದು ಎಣಿಸುವ ಪದ್ಧತಿಯುಂಟು.

ಬೆಳಗಿನ ೫ ಘಂಟೆಯ ಸುಮಾರಕ್ಕೆ ಅವನ ಕೈಕಾಲುಗಳು ತಣ್ಣಗಾಗುತ್ತ ನಡೆದವು. ಶ್ವಾಸದ ಗತಿಯು ಕುಗ್ಗುತ್ತ ಹೋಯಿತು. ಮುಖಚರ್ಯವು ಕ್ರಮೇಣ ಬದಲಾಗುತ್ತ ಸಾಗಿತು. ಈ ಸಮಯದಲ್ಲಿ ಎಲ್ಲರೂ ಮೊಣಕಾಲೂರಿ, ಬಹು ದೀನವಾಣಿಯಿಂದ ಅವನ ಆತ್ಮಕ್ಕೆ ಸ್ಥಿರವಾದ ಶಾಂತಿಯನ್ನೀಯೆಂದು ದೇವರನ್ನು ಪ್ರಾರ್ಥಿಸಿದರು, ಮತ್ತು ಅವನ ಪ್ರೀತಿಯ ಭಜನ ಗೀತಗಳನ್ನು ಎಲ್ಲರೂ ಕೂಡಿ ಹಾಡಿದರು. ಆ ಮೇಲೆ ದುಃಖಾಶ್ರುಗಳಿಂದ ತುಂಬಿದ ಅವರ ಕಣ್ಣುಗಳು ಗ್ಲ್ಯಾಡ್‌ಸ್ಟನ್ನನ ಮುಖದ ಕಡೆಗೆ ತಿರುಗಿದವು. ನಮ್ಮ ಆಧಾರವು ಹೋಯಿತು; ನಾವು ನಿರಾಶ್ರಯರಾದೆವು; ನಮ್ಮ ವೈಭವದ ಸ್ತಂಭವು ಮುರಿಯಿತು ಎಂಬ ಮನೋವ್ಯಥೆಗಳು ಪ್ರತಿ ಒಬ್ಬರ ಮೋರೆಯ ಮೇಲೆ ಸ್ಪಷ್ಟವಾಗಿ ತೋರಹತ್ತಿದವು. ಗ್ಲ್ಯಾಡ್‌ಸ್ಟನ್ನನ ದೇಹಾವಸಾನವು ಸಮಿಸಮೀಪಿಸಿದಂತೆ ಸುತ್ತಲಿನ ಜನರ ಮುಖಚರ್ಯೆಗಳಲ್ಲಿ ವಿರಹಜನ್ಯ ದುಃಖವು ಹೆಚ್ಚುತ್ತಲೇ ಹೋಯಿತು. ಕಟ್ಟಕಡೆಗೆ ಗ್ಲ್ಯಾಡ್‌ಸ್ಟನ್ನನ ಚಲನವಲನಾದಿಗಳೆಲ್ಲ ನಿಂತು, ಜೀವಾತ್ಮನು ದೇಹವನ್ನು ಬಿಟ್ಟು ಹೊರಟು ಹೋದನು. ಅಲ್ಲಿದ್ದ ಒಬ್ಬ ಗೃಹಸ್ಥನು ಈ ಸಂಗತಿಯನ್ನು ಹೀಗೆ ವರ್ಣಿಸಿರುವನು:- “ಒಂದು ಚಿಕ್ಕ ಮಗುವಿಗೆ ನಿದ್ರೆಯು ಸಮಾಧಾನದಿಂದ ಮೆಲ್ಲಮೆಲ್ಲನೆ ಹತ್ತುತ್ತ ಹೋಗಿ, ಕಡೆಗೆ ಗಾಢನಿದ್ರೆಯು ಹತ್ತುವಂತೆ ಗ್ಲ್ಯಾಡ್‌ಸ್ಟನ್ನನಿಗೆ ಮಹಾ ನಿದ್ರೆಯು ಹತ್ತಿತು. ಅವನಿಗೆ ಕಸವಿಸಿಯು ಅಲ್ಪವೂ ಆಗಲಿಲ್ಲ.” ಇನ್ನೊಬ್ಬನು ಇದೇ ಸಂಗತಿಯನ್ನು ಬಣ್ಣಿಸಿರುವದು ಹೇಗೆಂದರೆ:—“ಮಹಾ ಪ್ರಖ್ಯಾತನಾದ, ಅತಿ ಶ್ರೇಷ್ಠನಾದ, ತೀರ ಸಾದಾ ನಡತೆಯವನಾದ, ಮುಖ್ಯ ಮಂತ್ರಿಯು ಇಲ್ಲಿ ಮಲಗಿರುವನು. ಇವನ ಶುಭ್ರವಾದ ಶಿರಸ್ಸಿಗೆ ಏನೂ ಅಲಂಕಾರವಿಲ್ಲ; ಕನಿಷ್ಟಪಕ್ಷಕ್ಕೆ ಕೆಲವು ಹೂವುಗಳಾದರೂ ಇಲ್ಲ. ಈ ಯೋಗ್ಯತೆಯೂ ಈ ದೊರಗುತನವೂ ಗ್ರೀಸದ ಪ್ರಸಿದ್ಧ ಕವಿಯಾದ ಹೋಮರನ ಸ್ವಭಾವದ ಸಂಪೂರ್ಣ ಪ್ರತಿರೂಪಗಳಾಗಿವೆಂಬಲ್ಲಿ ಏನೂ ಸಂಶಯವಿಲ್ಲ. ಈ ಮುಖವನ್ನು ಲಕ್ಷ್ಯಗೊಟ್ಟು ನೋಡಿದರೆ, ಇದರಲ್ಲಿ ಜೀವಕಳೆ ಇರುವಂತೆಯೂ ಇದು ಆಗಾಗ್ಗೆ ಸಂತೋಷ ಪಡುವಂತೆಯೂ ಒಮ್ಮೊಮ್ಮೆ ಮುಗುಳುನಗೆ ನಗುವಂತೆಯೂ ಭಾಸವಾಗುತ್ತಿದೆ. ಇದರಲ್ಲಿ ನಿರ್ಜೀವ ಮುಖದ ಚಿನ್ಹವು ಅಲ್ಪವೂ ತೋರುವದಿಲ್ಲ. ಇದು ದಿವ್ಯಾನಂದದಲ್ಲಿ ಮಗ್ನವಾಗಿ ಸುಖನಿದ್ರೆಗೈಯುವಂತೆ ತೋರುತ್ತಿದೆ. ಸಾರಾಂಶ, ಸ್ವತಂತ್ರದೇವಿಯ ಈ ಪೂರ್ಣಾಭಿಮಾನಿಯು ಶರೀರವನ್ನು ಆತ್ಮನು ಬಿಟ್ಟು ಹೋದ ಬಳಿಕ, ಇವನ ಮುಖದಷ್ಟು ಗಂಭೀರವಾದ, ಶಾಂತವಾದ ಮತ್ತು ಸುಂದರವಾದ ಮುಖವನ್ನು ನಾನೆಂದೂ ನೋಡಿದ್ದಿಲ್ಲ.” ಮೇಲೆ ವಿವರಿಸಿದ ಮೇರೆಗೆ ಗ್ಲಾಡ್‌ಸ್ಟನ್ನನು ಮರಣ ಹೊಂದಿದ ಕೂಡಲೆ, ಅವರೆಲ್ಲರ ಮೇಲೆ ಆಕಾಶವೇ ಹರಕೊಂಡು ಬಿದ್ದಂತಾಯಿತು.

ಸಮಸ್ತರೂ ಮೋರೆಗೆ ಸೆರಗು ಹಾಕಿಕೊಂಡು ಘೋರೆಂದು ಅತ್ತರು. ಅವನ ಪತ್ನಿಯ ಸ್ಥಿತಿಯು ಹೇಗಾಯಿತೆಂಬದನ್ನು ಇಲ್ಲಿ ವರ್ಣಿಸುವದು ಅಸಾಧ್ಯವು. ಅದನ್ನು ವಾಚಕರೇ ಸುಲಭವಾಗಿ ಊಹಿಸಬಹುದು. ಕೈ ಬಿಟ್ಟಿರು, ದೊರೆಗಳು ನಮ್ಮೆಲ್ಲರ ಕೈ ಬಿಟ್ಟರು ಎಂದು ನುಡಿಯುತ್ತ ಅವಳು ಭೂಮಿಗೆ ಒರಗಿದಳು. ಇಷ್ಟರಲ್ಲಿಯೇ ವರ್ತಮಾನ ಪತ್ರಗಳ ಎಷ್ಟೋ ಜನ ಸುದ್ದಿಗಾರರೂ ಬಹುಜನ ಚಿತ್ರ ತೆಗೆಯುವವರೂ ಬಂದು ಕುಳಿತುಕೊಂಡಿದ್ದರು. ಅಲ್ಲಿ ಸಂಭವಿಸಿದ ಹೃದಯದ್ರಾವಕ ಸಂಗತಿಗಳನ್ನು ಸುದ್ದಿಗಾರರು ತಂತಿಗಳ ಮುಖಾಂತರವಾಗಿ ಸುತ್ತಲೂ ಕಳುಹಿಸಿದರು. ಚಿತ್ರ ತೆಗೆಯುವವರು ಮೃತಶರೀರವಿದ್ದ ಸ್ಥಳದ ಸಮಗ್ರ ಚಿತ್ರಗಳನ್ನು ಯಂತ್ರಗಳ ಸಹಾಯದಿಂದ ತೆಗೆದುಕೊಂಡರು. ಗ್ಲ್ಯಾಡ್‌ಸ್ಟನ್ನನು ಪಂಚತ್ವವನ್ನೈದಿದ ಸ್ವಲ್ಪ ಕಾಲದಲ್ಲಿಯೇ ಈ ದುಃಖದ ವಾರ್ತೆಯು ವಿದ್ಯುಲ್ಲತೆಯಷ್ಟು ತೀವ್ರವಾಗಿ ಜಗತ್ತಿನ ತುಂಬಾ ಹಬ್ಬಿತು.

ಗ್ಲ್ಯಾಡ್‌ಸ್ಟನ್ನನು ಎಷ್ಟು ದೊಡ್ಡ ಮನುಷ್ಯನಾಗಿದ್ದನು, ಅವನು ಇಂಗ್ಲಂಡಕ್ಕೆ ಮಾತ್ರವಲ್ಲ, ಸುಧಾರಿಸಿದ ಎಲ್ಲ ರಾಷ್ಟ್ರಗಳಿಗೂ ಎಷ್ಟು ಪ್ರಿಯನಾಗಿದ್ದನು ಎಂಬ ಸಂಗತಿಯನ್ನು ಸಾದ್ಯಂತವಾಗಿ ವಿವರಿಸಿದರೆ, ಅದೊಂದು ದೊಡ್ಡ ಗ್ರಂಥವೇ ಆಗುವದು. ಆದದ್ದರಿಂದ ನಾವು ಈ ಹವ್ಯಾಸಕ್ಕೆ ಬೀಳದೆ, ಅವನು ತೀರಿಕೊಂಡ ಸುದ್ದಿಯನ್ನು ಕೇಳಿದ ಕ್ಷಣವೇ ಸ್ವದೇಶದ ಮತ್ತು ಪರದೇಶಗಳ ಜನರಲ್ಲಿ ವರ್ತಿಸಿದ ಮುಖ್ಯ ಮುಖ್ಯ ಸಂಗತಿಗಳನ್ನು ಮಾತ್ರ ಇಲ್ಲಿ ಹೇಳುವೆವು. ಅಷ್ಟರಿಂದಲೇ ಅವನು ಜನರಿಗೆ ಎಷ್ಟು ಬೇಕಾಗಿದ್ದನೆಂಬದು ವಾಚಕರ ಲಕ್ಷ್ಯದಲ್ಲಿ ಸಹಜವಾಗಿ ಬರಬಹುದು.

ಗ್ಲ್ಯಾಡ್‌ಸ್ಟನ್ನನು ತೀರಿಕೊಂಡ ಸುದ್ದಿಯನ್ನು ಕೇಳಿ, ಲಾರ್ಡರ ಸಭೆಯವರೂ ಕಾಮನ್ನರ ಸಭೆಯವರೂ ಶೋಕಾಕುಲರಾಗಿ, ಬಹು ಕಾಲದ ವರೆಗೆ ತಮ್ಮ ಮಧ್ಯದಲ್ಲಿ ಒಂದು ದೇದೀಪ್ಯಮಾನವಾದ ನಕ್ಷತ್ರದಂತೆ ಪ್ರಕಾಶಿಸುತ್ತಿದ್ದ ಆ ದೊಡ್ಡ ಮನುಷ್ಯನ ಮಾನಾರ್ಥವಾಗಿ, ತಮ್ಮ ಸಭೆಗಳನ್ನು ೧೯ ನೆಯ ತಾರೀಖಿನ ದಿವಸ ಬಂದುಮಾಡಿದರು. ಮರು ದಿವಸ ಆ ಎರಡೂ ಸಭೆಗಳಲ್ಲಿ ಅವನ ಮರಣದ ವಿಷಯವಾಗಿ ದೊಡ್ಡ ದೊಡ್ಡ ವಾಗೀಶರು ದುಃಖಪ್ರದರ್ಶಕ ಭಾಷಣಗಳನ್ನು ಮಾಡಿ, ಅವನ ಪ್ರೇತ ಸಂಸ್ಕಾರಗಳನ್ನು ಸಾರ್ವಜನಿಕ ಮಾನಮರ್ಯಾದೆಗಳಿಂದ ನೆರವೇರಿಸಬೇಕೆಂದು ನಿರ್ಣಯಿಸಿದರು. ಆ ನಿರ್ಣಯಗಳು ೧೯ ನೆಯ ಶತಮಾನದಲ್ಲಿ ವರ್ತಿಸಿದ ಐತಿಹಾಸಿಕ ಸಂಗತಿಗಳಲ್ಲಿ ಅತಿ ಮಹತ್ವವುಳ್ಳವುಗಳಾಗಿವೆ.

ಗ್ಲ್ಯಾಡ್‌ಸ್ಟನ್ನನ ಮರಣದ ಶ್ರಮವಾಯ ಲಾರ್ಡರ ಸಭೆಯಲ್ಲಿಯೂ ಕಾಮನ್ನರ ಸಭೆಯಲ್ಲಿಯೂ ದೊಡ್ಡ ದೊಡ್ಡ ಗೃಹಸ್ಥರು ಅವನ ಮಾನಾರ್ಥವಾಗಿ ಭಾಷಣ ಮಾಡಿದ್ದು.

ಲಾರ್ಡರ ಸಭೆಯಲ್ಲಿ ಲಾರ್ಡ ಸಾಲಿಸಬರಿಯು "ನೇಕ್ ನಾಮದಾರ ಉಲಿಯಮ್ ಎವರ್ಟ ಗ್ಲ್ಯಾಡ್‌ಸ್ಟನ್ ದೊರೆಗಳ ಪ್ರೇತ ಸಂಸ್ಕಾರಗಳನ್ನು ಎಲ್ಲ ಸಾರ್ವಜನಿಕ ಮಾನಮರ್ಯಾದೆಗಳಿಂದ ನಡಿಸಲಿಕ್ಕೂ, ವೆಸ್ಟಮಿನ್‌ಸ್ಟರದೊಳಗಿನ ಸೆಂಟ-ಪೀಟರ್-ಕಾಲೇಜಿಯೆಟ್-ಚರ್ಚ ಎಂಬ ಭಜನಾಲಯದಲ್ಲಿ ಅವರ ಜ್ಞಾಪಕಾರ್ಥವಾಗಿ ಒಂದು ಸ್ತಂಭವನ್ನು ನಿಲ್ಲಿಸಿ, ಅದರ ಮೇಲೆ ಅವರು ಪಡೆದಿರುವ ಸಾರ್ವಜನಿಕ ಮೆಚ್ಚಿಕೆಯನ್ನೂ ಅನುರಾಗವನ್ನೂ, ಅವರಲ್ಲಿದ್ದ ಅಪೂರ್ವವಾದ ಮತ್ತು ಪ್ರಸಿದ್ಧವಾದ ಹುಟ್ಟುಗುಣಗಳನ್ನೂ, ಪಾರ್ಲಮೆಂಟ್ ಸಭೆಯಲ್ಲಿಯೂ ರಾಜ್ಯಕಾರಭಾರದ ಮಹತ್ಕೃತ್ಯಗಳಲ್ಲಿಯೂ ಅವರು ತೋರಿಸಿದ ಆಸಕ್ತಿಯನ್ನೂ ವ್ಯಕ್ತಪಡಿಸುವ ವಿಳಾಸವನ್ನು ಹಾಕಲಿಕ್ಕೂ, ವ್ಹಿಕ್ಟೋರಿಯಾ ಮಹಾರಾಣೀ ಸಾಹೇಬರ ಮಂಜೂರಿಯನ್ನು ಪಡೆಯಬೇಕು" ಎಂದು ಸೂಚಿಸಿದನು. ಈ ಘನವಾದ ಲಾರ್ಡನು ಮತ್ತೂ ಹೇಳಿದ್ದೇನೆಂದರೆ:—ಗ್ಲ್ಯಾಡ್‌ಸ್ಟನ್ ದೊರೆಗಳು ತಮ್ಮ ಎಲ್ಲ ಕೃತ್ಯಗಳನ್ನು ಮತ್ತು ತಮ್ಮ ಎಲ್ಲ ಪ್ರಯತ್ನಗಳನ್ನು ಶುದ್ಧಾಂತಃಕರಣದಿಂದಲೂ ಪವಿತ್ರವಾದ ಮನಸಿನಿಂದಲೂ ಮಾಡಿ, ನಮ್ಮ ದೇಶದೊಳಗಿನ ಎಲ್ಲ ಜನರಿಂದಲೂ ಹೊಗಳಿಸಿಕೊಂಡರು. ಅವರು ರಾಜ್ಯದಾಡಳಿತದ ಘನವಾದ ಕಾರ್ಯವನ್ನು ಕೆಲವು ವರ್ಷಗಳ ವರೆಗೆ ಎಡೆಬಿಡದೆ ಸಾಗಿಸಿದರೂ, ಆ ಕಾಲದಲ್ಲಿ ದೊಡ್ಡ ದೊಡ್ಡ ಹೆಚ್ಚುಕಡಿಮೆಗಳು ವೆಗ್ಗಳವಾಗಿ ಸಂಭವಿಸಿದರೂ, ನಿಕರದ ಹೋರಾಟಗಳು ನಡೆದರೂ, ಅವರು ತಮ್ಮ ನ್ಯಾಯದೃಷ್ಟಿಗೆ ಎಂದೂ ಕಲಂಕವನ್ನು ಹಚ್ಚಿಕೊಳ್ಳಲಿಲ್ಲ. ಅವರ ಚರಿತ್ರೆಯು ಈಗಿನ ರಾಜಕೀಯ ಮತ್ತು ಸಾಮಾಜಿಕ ವಿಚಾರಗಳ ಮೇಲೆ ಸ್ಥಿರವಾದ ಮತ್ತು ಅತ್ಯಂತ ಹಿತಕರವಾದ ಪರಿಣಾಮವನ್ನುಂಟು ಮಾಡುವದು. ಅವರು ಎಸಗಿದ ಕೃತ್ಯಗಳೂ ಅವರು ಮಾಡಿದ ಹಂಚಿಕೆಗಳೂ ಪ್ರತಿ ಒಬ್ಬರ ಮನಸಿನಲ್ಲಿ ಆಗಲೇ ಮನೆಮಾಡಿಕೊಂಡಿವೆ. ಈ ದೇಶದ ಸಮಗ್ರ ಇತಿಹಾಸವನ್ನು ಶೋಧಿಸಿದರೆ, ಧರ್ಮಶೀಲಪಲ್ಲಂತೂ ಅವರನ್ನು ಸಂಗಟ್ಟುವವರು ಯಾರೂ ದೊರೆಯಲಿಕ್ಕಿಲ್ಲ.

ಮೇಲಿನ ಸೂಚನೆಗೆ ಅನುಮೋದನ ಕೊಡುವಾಗ್ಗೆ (Lord Kimberley) ಲಾರ್ಡ ಕಿಂಬರ್ಲೀ ದೊರೆಯು "ಗ್ಲ್ಯಾಡ್‌ಸ್ಟನ್ನರ ಮರಣದಿಂದ ನಮಗಾಗಿರುವ ಪರಮಾವಧಿ ನಷ್ಟವನ್ನು ಲಾರ್ಡ ಸಾಲಿಸಬರಿ ದೊರೆಗಳು ಯಥಾಯೋಗ್ಯವಾದ ನುಡಿಗಳಿಂದ ವ್ಯಕ್ತಪಡಿಸಿದರು. ಇಂಗ್ಲಿಷ್ ಜನಾಂಗಕ್ಕೆ ಇಷ್ಟು ಘೋರವಾದ ಮತ್ತು ಇಷ್ಟು ವ್ಯಾಪಕವಾದ ದುಃಖವನ್ನುಂಟು ಮಾಡಲು, ಗ್ಲ್ಯಾಡ್‌ಸ್ಟನ್ ದೊರೆಗಳಲ್ಲಿದ್ದ ಉದಾರ ಮನಸೂ ಹೊಯಿದಾಡದ ಸತ್ಯವಂತಿಕೆಯೂ ಜೋಡಿಲ್ಲದ ಹುಟ್ಟುಗುಣಗಳೂ ರಾಜ್ಯಕಾರ್ಯ ಕುಶಲತೆಯೂ ಅಷ್ಟೇನು ಕಾರಣವಲ್ಲ; ಆದರೆ ಈ ದೇಶದೊಳಗಿನ ಉಚ್ಚ ಪ್ರತಿಯ ಜನರಿಗೂ ಕನಿಷ್ಠ ಪ್ರತಿಯ ಜನರಿಗೂ ಮೇ

ಲಾದ ವರ್ತನಕ್ರಮವನ್ನು ತೋರಿಸಿಕೊಟ್ಟ ಗೃಹಸ್ಥರನ್ನು ನಾವು ಒಮ್ಮಿಂದೊಮ್ಮೆ ಕಳಕೊಂಡದ್ದು ವಿಶೇಷ ಕಾರಣವಾಗಿದೆ" ಎಂದು ಹೇಳಿದನು. ಲಾರ್ಡ್ ರೋಜಬರಿಯು ಹೀಗೆ ಮಾತನಾಡಿದನು:—"ಗ್ಲಾಡ್‌ಸ್ಟನ್ ದೊರೆಗಳು ಮುಖ್ಯಮಂತ್ರಿಯ ಉದ್ಯೋಗವನ್ನು ಕಡೆಯ ಸಾರೆ ಬಿಟ್ಟ ವೇಳೆಯಲ್ಲಿ ನೆರೆದ ಸಭೆಯಲ್ಲಿ ಲಾರ್ಡ್ ಸಾಲಿಸಬರಿ ದೊರೆಗಳು, ಪಾರ್ಲಮೆಂಟು ಸ್ಥಾಪಿಸಲ್ಪಟ್ಟಂದಿನಿಂದ ಈವೊತ್ತಿನವರೆಗೆ ಸ್ವದೇಶದ ಸೇವೆಯನ್ನು ಮಾಡಿದವರಲ್ಲಿ ಗ್ಲಾಡ್‌ಸ್ಟನ್ ದೊರೆಗಳೇ ಶ್ರೇಷ್ಠರು, ಎಂದು ಹೇಳಿದ ಮಾತನ್ನು ನಾನೆಂದೂ ಮರೆಯಲಾರೆನು. ನಾವೆಲ್ಲರು ಗ್ಲಾಡ್‌ಸ್ಟನ್ ದೊರೆಗಳ ಜೊತೆಗಾರರಾಗಿರುವದರಿಂದ, ಅವರ ಮರಣದಿಂದ ಜಗತ್ತಿನಲ್ಲಿ ಈಗ ಎಷ್ಟು ಸ್ಥಳವು ಬರಿದಾಗಿದೆಂಬದನ್ನೂ ಸದ್ಯದ ಜನರ ಮನಸಿನ ಮೇಲೆ ಅವರ ಕೃತಿಗಳ ಪರಿಣಾಮವು ಎಷ್ಟು ಮಟ್ಟಿಗೆ ಆಗಿದೆಂಬದನ್ನೂ ನಾವು ಚೆನ್ನಾಗಿ ಬಲ್ಲೆವು. ಭೂತದಯವಂತು ಅವರಲ್ಲಿ ಅಪ್ರತಿಮವಾಗಿತ್ತು. ಕೆಲಸವು ಸಣ್ಣದಿರಲಿ, ದೊಡ್ಡದಿರಲಿ, ಅದು ಸತ್ಪಕ್ಷವಾಗಿದ್ದಲ್ಲಿ, ಇದೇ ಮೇರೆಗೆ ಮನುಷ್ಯನು ಸಣ್ಣವನಿರಲಿ, ದೊಡ್ಡವನಿರಲಿ, ಅವನು ಹಿಡಿದ ಕೆಲಸವು ನ್ಯಾಯಕ್ಕನುಗುಣವಾಗಿದ್ದ ಪಕ್ಷದಲ್ಲಿ, ಅವರು ಅವುಗಳಿಗೆ ತ್ರಿಕರಣಪೂರ್ವಕವಾಗಿ ಸಹಾಯ ಮಾಡಿದರು. ಇದರಿಂದ ಅವರು ದಿಗಂತ ಕೀರ್ತಿಯನ್ನು ಗಳಿಸಿಕೊಂಡರು. ಇದಲ್ಲದೆ ಉದ್ಯೋಗವನ್ನು ಉತ್ಸಾಹದಿಂದ ಹೇಗೆ ಮಾಡಬೇಕು, ವಿಪತ್ಕಾಲದಲ್ಲಿ ಹೇಗೆ ಧೈರ್ಯಪಡಬೇಕು, ದೇವಭಕ್ತನು ಹೇಗಾಗಬೇಕು, ಸದಾಚಾರಗಳಲ್ಲಿ ನಿರತನಾಗಿ ಸತ್ಪರಿಣಾಮದ ಮೇಲೆ ಲಕ್ಷವನ್ನಿಟ್ಟು ಹೇಗೆ ವರ್ತಿಸಬೇಕು, ಇವೇ ಮುಂತಾದ ಉತ್ಕೃಷ್ಟ ದೃಷ್ಟಾಂತಗಳು ಈಗಿನ ಮತ್ತು ಮುಂದಿನ ಸಂತತಿಯವರಿಗೆ ಅವರ ಚರಿತ್ರೆಯಲ್ಲಿ ಬೇಕಾದಷ್ಟು ದೊರೆಯುವವು." ಈ ಭಾಷಣಗಳಾದ ಮೇಲೆ ಲಾರ್ಡ್ ಸಾಲಿಸಬರಿಯ ಸೂಚನೆಯು ಸರ್ವಾನುಮತದಿಂದ ಮಂಜೂರು ಆಯಿತು.

ಕಾಮನ್ಸರ ಸಭೆಯಲ್ಲಿ ಮೇಲೆ ಹೇಳಿದ ಸೂಚನೆಯನ್ನು ಆ ಸಭೆಯ ಮುಂದಾಳಾದ ಆರ್ಥರ್ ಬಾಲಫರ್ ದೊರೆಯು ಮಾಡುವಾಗ್ಗೆ ಹೇಳಿದ್ದೇನೆಂದರೆ:—"ವಾದವಿವಾದಗಳನ್ನು ಮಾಡುವವರು ಬಹು ಜನರಿರುವರು; ವ್ಯಾಖ್ಯಾನಗಳನ್ನು ಕೊಡುವವರು ಸಹ ಬಹಳ ಜನರಿರುವರು. ಆದರೆ ವಾದವಿವಾದಗಳನ್ನು ಮಾಡುವ ಮತ್ತು ವ್ಯಾಖ್ಯಾನಗಳನ್ನು ಕೊಡುವ ಎರಡೂ ಗುಣಗಳುಳ್ಳವರು ತೀರ ಅಪರೂಪ. ಮೇಲಾದ ಇವೆರಡೂ ಗುಣಗಳು ಗ್ಲಾಡ್‌ಸ್ಟನ್ ದೊರೆಗಳಲ್ಲಿ ಸಂಪೂರ್ಣವಾಗಿದ್ದವು. ಇದಲ್ಲದೆ ಅವರು ಪಾರ್ಲಮೆಂಟ್ ಸಭೆಯ ಹಿತಕ್ಕೆ ಸಂಬಂಧಿಸಿದ ಒಂದು ಮಹತ್ಕೃತ್ಯವನ್ನು ಮಾಡಿರುವರು. ಅದನ್ನು ಯಥಾರ್ಥವಾಗಿ ವರ್ಣಿಸುವದು ಅಸಾಧ್ಯವು. ಅವರು ತಮ್ಮ ಬುದ್ಧಿಸಾಮರ್ಥ್ಯದಿಂದ ಈ ಸಭೆಯ ಕೃತ್ಯಗಳ ಮಹತ್ವವನ್ನು ಪರಮಾವಧಿ ಬೆಳೆಸಿ, ಅವುಗಳಿಗೆ ಶ್ರೇಷ್ಠತ್ವವನ್ನು

ಕೊಟ್ಟರು. ಪಾರ್ಲಮೆಂಟಿನ ಪ್ರತಿ ಒಂದು ವಿಚಾರವು ದೀರ್ಘ ಆಲೋಚನೆಯಿಂದ ಸ್ಥಾಪಿಸಲ್ಪಟ್ಟ ಒಂದು ಗಂಭೀರವಾದ ವಿವೇಚನೆಯ ಫಲವಾಗಿದೆಂಬದನ್ನು ಅವರು ಎಲ್ಲರ ಅನುಭವಕ್ಕೆ ತಂದು ಕೊಟ್ಟರು" ಸರ್ ವಿಲಿಯಮ್ ಹಾರ್ಕೋರ್ಟ ದೊರೆಯು ಈ ಸೂಚನೆಗೆ ಅನುಮೋದನ ಕೊಡುವಾಗ್ಗೆ ಹೇಳಿದ್ದೇನೆಂದರೆ:— "ಗ್ಲ್ಯಾಡ್‌ಸ್ಟನ್ ದೊರೆಗಳು ತಮಗೆ ನ್ಯಾಯವಾಗಿ ತೋರಿದ ಕೃತ್ಯಗಳನ್ನು ಅಂಗೀಕರಿಸಿ ಅವುಗಳನ್ನೆಸಗುವದು ಹಿತಕರವೆಂದು ಗ್ರಹಿಸಿ, ಅವುಗಳನ್ನು ಮನಸುಗೊಟ್ಟು ಮಾಡುತ್ತಿದ್ದರು. ಈ ವಿಷಯಲ್ಲಿ ಒಂದು ಎಳ್ಳುಕಾಳಷ್ಟು ಸಹ ಸಂಶಯವಿಲ್ಲ ಯಾವುದೊಂದು ಮಾತಿನಲ್ಲಿ ವಿಶ್ವಾಸವಿಡಬೇಕೆಂದು ಮನಸಿನಲ್ಲಿ ಬಂದ ಕೂಡಲೆ, ಅವರು ಅದರಲ್ಲಿ ವಿಶ್ವಾಸವನ್ನಿಟ್ಟರು. ಒಂದಾನೊಂದು ಕೆಲಸವನ್ನು ಮಾಡಬೇಕೆಂದು ಮನಸಿನಲ್ಲಿ ಬಂದ ಕ್ಷಣವೇ ಅವರು ಆ ಕೆಲಸಕ್ಕೆ ಹತ್ತಿದರು. ಇದರಲ್ಲಿ ಅವರು ರವಷ್ಟಾದರೂ ಸಂದೇಹಪಡಲಿಲ್ಲ. ಇದು ಅವರ ಹುಟ್ಟುಗುಣವಾಗಿತ್ತು. ಪಾರ್ಲಮೆಂಟ ಸಭೆಯು ತಮಗೆ ಪರಮ ಪೂಜ್ಯವಾದದ್ದೆಂತಲೂ ಅದು ತಮ್ಮ ಸ್ವತಂತ್ರ ರಾಷ್ಟ್ರದ ಪ್ರತ್ಯಕ್ಷ ಮನೋದೇವತೆಯೆಂತಲೂ ಅವರು ನಂಬಿದರು. ಮತ್ತು ಆದೇ ನಂಬಿಗೆಯನ್ನು ಎಲ್ಲರಲ್ಲಿ ಹುಟ್ಟಿಸುವ ಪ್ರಯತ್ನವನ್ನು ಎಡೆಬಿಡದೆ ನಡಿಸಿದರು. ಅವರು ಸ್ವತಃ ಒಳ್ಳೆಯ ಶಿಷ್ಟಸಂಪ್ರದಾಯದವರಾಗಿದ್ದರು. ಅವರು ತಮ್ಮ ಬಳಿಗೆ ಬಂದವರನ್ನೆಲ್ಲ ತಕ್ಕ ಮಾನ ಮರ್ಯಾದೆಗಳಿಂದ ಸತ್ಕರಿಸಿದರು. ಅವರು ಒಳ್ಳೇ ರಾಜ್ಯಕಾರಸ್ಥನಿಯ ಪುರುಷರಾಗಿದ್ದಂತೆಯೇ ಸಜ್ಜನರೂ ಆಗಿದ್ದರು. ಅವರ ಧರ್ಮನಿಷ್ಠೆಯ ಮತ್ತು ಅವರ ಪವಿತ್ರಾಚರಣೆಗಳ ಉತ್ತಮ ಪರಿಣಾಮವು ಜನರ ವರ್ತನಗಳ ಮೇಲೆ ಆದದ್ದನ್ನು ಎಷ್ಟು ಬಣ್ಣಿಸಿದರೂ ಅಲ್ಪವೇ. ಸಜ್ಜನರು ಉಪದೇಶ ಮಾಡುತ್ತ ಬಂದಿರುವಂತೆ, ಅವರು ಸ್ವತಃ ನಡೆದು ತೋರಿಸಿದರು. ನುಡಿಯಂತೆ ನಡೆ ಇರಬೇಕೆಂಬ ಸಾಧು ವಚನಕ್ಕೆ ಅವರ ಚರಿತ್ರೆಯು ಒಂದು ತಕ್ಕ ದೃಷ್ಟಾಂತವಾಗಿದೆ. ದಿಕ್ಕಿಲ್ಲದವರಿಗೂ ದೀನರಿಗೂ ದುಃಖಿತರಿಗೂ ಅವರು ತಮ್ಮ ಆಯುಷ್ಯವನ್ನೇ ಮಾರಿಕೊಂಡು ಬಿಟ್ಟಿದ್ದರು. ಅವರು ಅತಿಶಯ ದಯಾಸಾಗರರೂ ಕ್ಷಮಾಶೀಲರೂ ಶಾಂತಿಪ್ರಿಯರೂ ಆಗಿದ್ದರು. ಹೀಗಿರುವದು ಸತ್ಪುರುಷರ ಮುಖ್ಯ ಲಕ್ಷಣವಾಗಿದೆ. ನಮ್ಮ ದೇಶದ ತುಂಬ ಹುಡುಕಿದರೂ ಅವರನ್ನು ಹಾಡಿ ಹರಸದ ಒಂದು ಹುಲ್ಲು ಗುಡುಸಲವು ಸಹ ನಮ್ಮ ದೃಷ್ಟಿಗೆ ಬೀಳಲಿಕ್ಕಿಲ್ಲ. ಅವರು ತಮ್ಮ ದೇಶದ ಮತ್ತು ಸಿಂಹಾಸನಾಧಿಪತಿಗಳ ಸೇವೆಯನ್ನು ಉತ್ತಮ ರೀತಿಯಿಂದ ಮಾಡಿ, ನಾಲ್ಕು ಜನರಲ್ಲಿ ಹೌದೆನಿಸಿಕೊಂಡು, ತಮ್ಮ ಐಹಿಕ ಯಾತ್ರೆಯನ್ನು ಮುಗಿಸಿದರು. ಅವರು ಮಾಡಿದ ಸೇವೆಯನ್ನು ಸಿಂಹಾಸನಾಧಿಪತಿಗಳು ಲಕ್ಷ್ಯದಲ್ಲಿ ತಂದು ಅವರು ಜೀವಿಸುವ ಕಾಲದಲ್ಲಿಯೇ ಅವರಿಗೆ ಬಹುಮಾನದ ಪದವಿಗಳನ್ನು ಕೊ

ಡಮೋಚಿಸಿದರು. ಆದರೆ ಅವರು ಅನ್ನಗಳಲ್ಲಿ ಒಂದನ್ನಾದರೂ ಸ್ವೀಕರಿಸಲಿಲ್ಲ. ಈ ಸಂಗತಿಯು ಅವರ ಉಜ್ವಲ ಕೀರ್ತಿಯನ್ನು ಮತ್ತಿಷ್ಟು ಹೆಚ್ಚಿಸಲಿಕ್ಕೆ ಕಾರಣವಾಯಿತು. ಇಷ್ಟು ಉದಾರ ಮನಸ್ಸಿನ ಮತ್ತು ಇಷ್ಟು ನಿರಪೇಕ್ಷ ಬುದ್ಧಿಯ ಸದ್ಗೃಹಸ್ಥರ ಮೃತಶರೀರಕ್ಕಾದರೂ ಸಿಂಹಾಸನಾಧಿಪತಿಗಳೂ ಪ್ರಜೆಗಳೂ ತಮ್ಮ ಕೈಯಲ್ಲಿರುವ ಸಮಸ್ತ ಉತ್ತಮೋತ್ತಮ ಮಾನಮನ್ನಣೆಗಳನ್ನೀಯುವದಕ್ಕೆ ಅನುಕೂಲವಾದ ಪ್ರಸಂಗವು ಈಗ ಬಂದಿದೆ. ಇದನ್ನು ಅವರು ವ್ಯರ್ಥವಾಗಿ ಕಳಕೊಳ್ಳಲಿಕ್ಕಿಲ್ಲ.'' ಐರ್ಲಂಡದ ಪಕ್ಷಪಾತಿಯಾದ (Mr. Dillon) ಮಿಸ್ಟರ್ ಡಿಲನ್ ದೊರೆಯು ಹೇಳಿದ್ದೇನೆಂದರೆ:— '' ತಮಗೆ ತಡೆಯಲಾರದಷ್ಟು ನೋವು ಆಗುತ್ತಿದ್ದರೂ ಸಾಯುವ ಸಮಯವು ತೀರ ಸಮೀಪಿಸಿದ್ದರೂ, ನಿರಾಶೆ ಪರಾಜಯ ಮುಂತಾದವುಗಳ ಪ್ರಾದುರ್ಭಾವದಿಂದ ಅವರ ಅಪ್ರತಿಮವಾದ ಧೈರ್ಯವು ಅಲ್ಪವಾದರೂ ಕುಗ್ಗಲಿಲ್ಲ. ನಾನು ಈವೊತ್ತಿನವರೆಗೆ ನೋಡಿರುವ ದೊಡ್ಡ ದೊಡ್ಡ ಮನುಷ್ಯರಲ್ಲಿ ಅಥವಾ ನಾನು ಓದಿರುವ ಮಹಾ ಮಹಾ ಪುರುಷರ ಚರಿತ್ರಗಳಲ್ಲಿ ವೃದ್ಧಾಪ್ಯದಿಂದ ಬುದ್ಧಿಭ್ರಂಶವಾಗದವರು, ಭೂತದಯವು ಕಡಿಮೆಯಾಗದವರು, ದುಃಖದಲ್ಲಿರುವವರ ಪ್ರಾರ್ಥನೆಗಳನ್ನು ಹುಸಿಹೋಗಗೊಡದವರು ಗ್ಲ್ಯಾಡ್‍ಸ್ಟನ್ನರ ಹೊರತು ಮತ್ತ್ಯಾರೂ ನನಗೆ ತೋರಲಿಲ್ಲ. ಅವರು ಇಂಗ್ಲಿಷ್ ಜನರಲ್ಲಿ ಅಗ್ರೇಸರೆಂಬ ಮಾತಿಗೂ ಅವರನ್ನು ಸರಿಗಟ್ಟುವವರು ಈ ಕಾಲದಲ್ಲಿ ಯಾರು ಇಲ್ಲೆಂಬ ಮಾತಿಗೂ ಪ್ರತಿಒಬ್ಬರು ಒಪ್ಪಿಕೊಳ್ಳುವರು."

ಮೇಲಿನ ಭಾಷಣಗಳು ನಡೆದಾಗ್ಗೆ ಅತ್ಯಂತ ಚಿತ್ತವೇಧಕವಾದ ಎರಡು ಸಂಗತಿಗಳು ವರ್ತಿಸಿದವು. ಅವು ಯಾವವೆಂದರೆ:—ಲಾರ್ಡ್ ರೋಜಬರಿಯು ಲಾರ್ಡರ ಸಭೆಯಲ್ಲಿ ಮಾತನಾಡುವಾಗ್ಗೆ, ಗ್ಲ್ಯಾಡ್‍ಸ್ಟನ್ನನು ದೊಡ್ಡವರಿಗೂ ಸಣ್ಣವರಿಗೂ ಅಷ್ಟೇ ಮಮತೆಯನ್ನು ತೋರಿಸಿದನೆಂಬ ಮಾತಿಗೆ ಎರಡು ಉದಾಹರಣೆಗಳನ್ನು ಕೊಟ್ಟನು. ಒಂದುಸಾರೆ ಗ್ಲ್ಯಾಡಸ್ಟನ್ನನು ಅನಾಥ ಗೃಹದೊಳಗಿನ ತೀರ ಮುದುಕರ ಬಳಿಗೆ ಹೋಗಿ, ಅವರಿಗೆ ಪ್ರೀತಿಯ ಮತ್ತು ದುಃಖಶಾಂತಿಯ ಉಪದೇಶವನ್ನು ಮಾಡಿದ್ದನು. ಎರಡನೆಯ ಉದಾಹರಣೆಯು ಯಾವುದೆಂದರೆ, ಕೆಲವು ದಿವಸಗಳ ಹಿಂದೆ ಸಾಲಿಸಬರಿಯು ರಥದ ಮೇಲಿಂದ ಬಿದ್ದು, ಬಹಳೇ ಪೆಟ್ಟು ಹಚ್ಚಿಕೊಂಡಿದ್ದನು. ಈ ಸುದ್ದಿಯನ್ನು ಕೇಳಿದಾಗ್ಗೆ ಗ್ಲ್ಯಾಡ್‍ಸ್ಟನ್ನನು ಬೇನೆಯಿಂದ ತೀರ ನೆಲಹಿಡಿದಿದ್ದರೂ ತನಗೆ ವಿಶೇಷ ವೇದನೆಯಾಗುತ್ತಿದ್ದರೂ ಅದನ್ನು ಮರೆತು, ತನ್ನ ಕೈಯಿಂದಲೇ ಖೇದದರ್ಶಕ ಪತ್ರವನ್ನು ಬರೆದು, ಅದನ್ನು ಅವನ ಹೆಂಡತಿಗೆ ಕಳುಹಿಸಿದ್ದನು. ಲಾರ್ಡ್ ರೋಜಬರಿಯು ಇವೆರಡು ಸಂಗತಿಗಳನ್ನು ವಿವರಿಸುವಾಗ್ಗೆ ದುಃಖದಿಂದ ಅವನ ಸ್ವರವು ಕುಗ್ಗಿತು, ಮುಖವು ಕಂದಿತು, ಕಣ್ಣೀ

ರು ಧಾರಾಳವಾಗಿ ಸುರಿದವು. ಅವನ ಈ ಕನಿಕರದ ಭಾಷಣವನ್ನು ಕೇಳಿ, ಆ ಸಭೆಯೊಳಗಿನ ದೊಡ್ಡ ದೊಡ್ಡ ಗೃಹಸ್ಥರೂ ಕಣ್ಣೀರು ಹಾಕಿದರು. ಕಾಮನ್ಸರ ಸಭೆಯಲ್ಲಿ ಸಹ ಸರ್ ವಿಲಿಯಮ್ ಹಾರ್ಕೋರ್ಟ ದೊರೆಯು, ಗ್ಲ್ಯಾಡ್‌ಸ್ಟನ್ನನು ತನ್ನ ಗೆಳೆಯರ ಕೂಡ ಮತ್ತು ತನ್ನ ಸಹೋದ್ಯೋಗಿಗಳ ಕೂಡ ಹೇಗೆ ವರ್ತಿಸಿದನು ಎಂಬದನ್ನು ವಿವರಿಸುತ್ತಿರುವಾಗ್ಗೆ ಒಮ್ಮಿಂದೊಮ್ಮೆ ದುಃಖದಿಂದ ಅವನ ಕುತ್ತಿಗೆಯ ಸಿರಗಳು ಉಬ್ಬಿದವು; ಮಾತುಗಳೇ ಕಟ್ಟಿದವು; ಕಣ್ಣೀರು ಹಳ್ಳಗಟ್ಟಿ ಸುರಿಯಲಾರಂಭಿಸಿದವು. ಇದನ್ನು ನೋಡಿ ಆ ಸಭೆಯವರು ಕಣ್ಣೀರಿನಿಂದ ಕೈತೊಳೆದರು.

ಗ್ಲ್ಯಾಡ್‌ಸ್ಟನ್ನನ ಮರಣವಾರ್ತೆಯನ್ನು ಕೇಳಿ ಪರದೇಶದವರು ಹೊರಗೆಡವಿದ ದುಃಖೋದ್ಗಾರಗಳು.

ಈ ತರದ ಭಾಷಣಗಳು ಇಂಗ್ಲಂಡದ ಪಾರ್ಲಮೆಂಟ ಸಭೆಯಲ್ಲಿ ನಡೆದಿರಲು, ಕಾನಡಾದ ಪಾರ್ಲಮೆಂಟಿನಲ್ಲಿ ಆ ದೇಶದ ಮುಖ್ಯ ಮಂತ್ರಿಯಾದ ಸರ್ ವಿಲ್‌ಫ್ರೆಡ್ ಲಾರಿಯರನು ಹೀಗೆ ಮಾತನಾಡಿದನು. "ಗ್ಲ್ಯಾಡ್‌ಸ್ಟನ್ ದೊರೆಗಳು ಎಲ್ಲ ರಾಷ್ಟ್ರಗಳ ವಿದ್ಯಾಚಾರ ಸಂಪನ್ನತೆಯನ್ನು ಬಹಳವಾಗಿ ಬೆಳೆಯಿಸಿದರು. ಅವರ ಸದುಪದೇಶಗಳೂ ಸದ್ವರ್ತನವೂ ಈ ಜಗತ್ತನ್ನೇ ತಿದ್ದಲು ವಿಶೇಷ ಕಾರಣವಾಗುವವೆಂದು ಹೇಳಿದರೆ, ಅದು ಅತಿಶಯೋಕ್ತಿಯಾಗಲಾರದು. ಸುಧಾರಿಸಿದ ರಾಷ್ಟ್ರಗಳೆಲ್ಲ ಅವರೊಬ್ಬ ನ್ಯಾಯದೇವತೆಯ ಅವತಾರವಾಗಿರುವರೆಂದು ಗ್ರಹಿಸುವವು. ನಪೋಲಿಯನ್ ಬೋನಾಪಾರ್ಟನ ಕಾಲದಿಂದಿತ್ತ ಗ್ಲ್ಯಾಡ್‌ಸ್ಟನ್ ದೊರೆಗಳಿಗೆ ಸಮಾನರಾದ ಮೇಲು ಬುದ್ಧಿಯ ಪುರುಷರು ಯಾರೂ ಹುಟ್ಟಿರುವದಿಲ್ಲ. ಅತ್ಯಂತ ಭೂತದಯೆಯೂ ನ್ಯಾಯದಲ್ಲಿ ಸಂಪೂರ್ಣಾನುರಾಗವೂ ಪರಪೀಡೆಯ ನಿರೋಧವೂ ಅವರಲ್ಲಿ ಯಾವಾಗಲು ಜಾಗ್ರತವಾಗಿದ್ದವು. ವಿಪತ್ತಿಗೆ ಗುರಿಯಾದ ಐರಿಷ್ ಪ್ರಜೆಗಳಿಗೆ ನ್ಯಾಯವನ್ನೀಯುವ ಕೆಲಸದಲ್ಲಿ ಆ ಮಹಾಪುರುಷರು ತಮ್ಮ ಇಷ್ಟಮಿತ್ರರನ್ನು ತೊರೆದರು, ಅಧಿಕಾರವನ್ನು ತ್ಯಜಿಸಿದರು, ದೇಶಬಾಂಧವರ ಅಪ್ರೀತಿಗೊಳಗಾದರು. ಅವರು ಈಗ ಒಮ್ಮಿಂದೊಮ್ಮೆ ತನ್ನ ಕೈಬಿಟ್ಟು ಹೊರಟು ಹೋದದ್ದನ್ನು ಇಂಗ್ಲಂಡ ದೇಶವು ಕಂಡು ಬಹು ದುಃಖಪಡುತ್ತಿರುವದು; ಆದರೆ ಆ ದೇಶವು ಗ್ಲ್ಯಾಡಸ್ಟನ್ನರಂಥ ಸತ್ಪುತ್ರರು ತನ್ನಲ್ಲಿ ಜನಿಸಿ, ತನ್ನ ಕೀರ್ತಿಯನ್ನು ದಿಗಂತ ಮೆರೆಯಿಸಿದ್ದನ್ನು ನೋಡಿ, ಆ ದುಃಖವನ್ನು ಮರೆಯಬೇಕು. ಆ ಸತ್ಪುತ್ರರು ಆರಂಭಿಸಿದ ಕಾರ್ಯಗಳು ಇನ್ನೂ ಮುಗಿದಿಲ್ಲ; ಬೇಗನೆ ಮುಗಿಯತಕ್ಕವುಗಳೂ ಅಲ್ಲ; ಆದರೆ ಅವು ಕಲ್ಪಕಲ್ಪಾಂತರಗಳವರೆಗೆ ಸಾಗತಕ್ಕವುಗಳಾಗಿವೆ. ಅವರು ಹಾಕಿಕೊಟ್ಟಿರುವ ವರ್ತನಕ್ರಮವಂತು ಜಗತ್ತಿಗೆಲ್ಲ ಮೇಲು ಪಂಕ್ತಿಯಾಗಿ ನಿರಂತ

ರ ಉಳಿಯುವದು. ಅವರು ತಮ್ಮ ಅಮೃತ ಹಸ್ತದಿಂದ ಹಚ್ಚಿರುವ ಸದ್ವರ್ತನವೆಂಬ ಸುವೃಕ್ಷದ ಸಸಿಯು ಪರಮೇಶ್ವರನ ಕೃಪೆಯಿಂದ ಕ್ರಮೇಣ ಬೆಳೆದು, ದೊಡ್ಡ ಮರವಾಗಿ, ತಕ್ಕ ಕಾಲದಲ್ಲಿ ಹೂವು ಕಾಯಿಗಳನ್ನು ವಿಪುಲವಾಗಿ ಕೊಡುವದು.” ಅಮೇರಿಕದೊಳಗಿನ ಸ್ವತಂತ್ರಸಂಸ್ಥಾನಗಳ ಅಧ್ಯಕ್ಷನಾದ ಮಾಕಿನಲೀದೊರೆಯು ಹೇಳಿದ್ದು:—“ಈ ಶತಮಾನದಲ್ಲಿ ಗ್ಲ್ಯಾಡ್‌ಸ್ಟನ್ ದೊರೆಗಳು ಎಲ್ಲರಿಗೂ ಶ್ರೇಷ್ಠರಾಗಿದ್ದರು. ಇನ್ನು ಮೇಲೆ ಅಂಥವರು ಹುಟ್ಟುವದು ಅಪರೂಪ. ನಿರಪೇಕ್ಷವಾದ ಸ್ವದೇಶಾಭಿಮಾನದಲ್ಲಿ ಅವರು ನಮ್ಮ ಜಾರ್ಜವಾಶಿಂಗ್ಟನ್ ದೊರೆಗಳಿಗೆ ಸಮಾನರಾಗಿದ್ದರು.”

ನ್ಯೂಯಾರ್ಕದ ಟಾಯಿಮ್ಸ್ ಎಂಬ ವರ್ತಮಾನಪತ್ರಕರ್ತರು ಹೇಳಿದ್ದೇನಂದರೆ:—“ಇಂಗ್ಲಂಡಕ್ಕೆ ಶುದ್ಧ ನೀತಿಯ ರಾಜ್ಯವೆಂಬ ಕೀರ್ತಿಯನ್ನು ಗಳಿಸಿಕೊಡಬೇಕೆಂಬ ಉತ್ಕಟೇಚ್ಛೆಯಿಂದ ಗ್ಲ್ಯಾಡ್‌ಸ್ಟನ್ ದೊರೆಗಳು ಭಗೀರಥ ಪ್ರಯತ್ನ ಮಾಡಿದರು. ಹೇಗಾದರು ಮಾಡಿ ಇಂಗ್ಲಂಡದ ಗೌರವವನ್ನು ಉಳಿಸಿಕೊಂಡರಾಯಿತೆಂದೆಣಿಸುವವರಲ್ಲಿ ಬಹು ಜನರು ಅವರ ಈ ಸ್ತುತ್ಯ ಪ್ರಯತ್ನಗಳಿಗೆ ಅಡ್ಡ ಬಂದರು ಮಾತ್ರವಲ್ಲ ಆದರೆ ಅವರ ಬದ್ಧದ್ವೇಷಿಗಳಾದರು!”

ಗ್ಲ್ಯಾಡ್‌ಸ್ಟನ್ನನ ಕುಟುಂಬದವರಿಗೆ ಬಂದ ಸಹಾನುಭೂತಿಯ ಪತ್ರಗಳು.

ಗ್ಲ್ಯಾಡ್‌ಸ್ಟನ್ನನು ತೀರಿಕೊಂಡ ದಿವಸ ಮೊದಲ್ಗೊಂಡು ಕೆಲವು ದಿವಸಗಳವರೆಗೆ ಅವನ ಕುಟುಂಬದವರಿಗೆ ಸ್ವದೇಶ ಪರದೇಶಗಳ ದೊಡ್ಡ ದೊಡ್ಡ ಅರಸರಿಂದಲೂ ಮಂತ್ರಿಗಳಿಂದಲೂ ಪ್ರಸಿದ್ಧ ಸಂಸ್ಥೆಗಳಿಂದಲೂ ಸಹಾನುಭೂತಿಯ ಪತ್ರಗಳು ಅಂಚೆಯ ಮಾರ್ಗವಾಗಿಯೂ ತಂತಿಯ ಮುಖಾಂತರವಾಗಿಯೂ ಮೇರೆದಪ್ಪಿ ಬರಹತ್ತಿದವು. ಅವುಗಳಿಗೆಲ್ಲ ಪ್ರತ್ಪ್ರತ್ಯೇಕವಾಗಿ ಉತ್ತರಗಳನ್ನೀಯುವದು ಶಿಷ್ಟಸಂಪ್ರದಾಯವಿದ್ದರೂ ಆ ಕಾಲದಲ್ಲಿ ಹಾಗೆ ಮಾಡುವದು ಅಸಾಧ್ಯವಾಯಿತು. ಅದುಕಾರಣ ಗ್ಲ್ಯಾಡ್‌ಸ್ಟನ್ನನ ಪತ್ನಿಯು ವರ್ತಮಾನ ಪತ್ರಗಳ ಮುಖಾಂತರವಾಗಿ ಆ ಪತ್ರಗಳನ್ನು ಕಳುಹಿಸಿದವರ ಉಪಕಾರವನ್ನು ಒಟ್ಟಾಗಿ ನೆನಸಿದಳು. ಆ ತಂತಿಗಳೊಳಗಿನ ಕೆಲವುಗಳನ್ನು ಸಾರಾಂಶರೂಪವಾಗಿ ಇಲ್ಲಿ ಮಾದರಿಗಾಗಿ ಹೇಳುವೆವು.

ಫ್ರಾನ್ಸದ ಪ್ರಜಾಸತ್ತಾತ್ಮಕ ರಾಜ್ಯದ ಅಧ್ಯಕ್ಷರು ಕಳುಹಿಸಿದ್ದು:— ತಮ್ಮ ಮೇಲೆ ಈ ದುಃಖದ ಪ್ರಸಂಗವು ಬಂದ ಸುದ್ದಿಯನ್ನು ನಾನು ಈಗಲೇ ಕೇಳಿದೆನು. ನಾನು ತಮ್ಮ ಸಹದುಃಖಿಗಳಲ್ಲಿ ಒಬ್ಬನಾಗಿದ್ದೇನೆಂದು ತಿಳಿದುಕೊಳ್ಳಬೇಕು. ಗ್ಲ್ಯಾಡ್‌ಸ್ಟನ್ ದೊರೆಗಳು ತಮ್ಮ ಪವಿತ್ರಾಚರಣೆಯಿಂದ, ಪರಮೌದಾರ್ಯ ಬುದ್ಧಿಯಿಂದ ಮತ್ತು ರಾಜ್ಯಾಡಳಿತಕ್ಕೆ ಸಂಬಂಧಪಟ್ಟ ಉದಾತ್ತ ವಿಚಾರಗಳಿಂದ ಸ್ವದೇಶದ ಮೇ

ಲೆ ಮಾತ್ರವಲ್ಲ ಆದರೆ ಎಲ್ಲ ಮನುಷ್ಯಜಾತಿಯ ಮೇಲೆ ಅನಂತ ಉಪಕಾರಗಳನ್ನು ಮಾಡಿದ್ದಾರೆ. ಅವುಗಳನ್ನು ಯಾರೂ ಮರೆಯಲಿಕ್ಕಿಲ್ಲ.

ಚೀನ ದೇಶದ ಪ್ರಧಾನಿಯು ಕಳುಹಿಸಿದ್ದು:— ತಾವು ದುಃಖ ಸಾಗರದಲ್ಲಿ ಮುಳುಗಿದ್ದನ್ನು ಕೇಳಿ, ನಮಗೆ ಮಿತಿ ಮೀರಿ ಖೇದವಾಗಿದೆ. ತಮ್ಮ ಹಿರಿಯರು ಬಲಾತ್ಕಾರದ ಕೂಡ ಧೈರ್ಯದಿಂದ ಹೋರಾಡುವ ಒಂದು ಹೆಸರ್ಗೊಂಡ ಕೂಸ್ತ್ರ ಲವಾಗಿಯೂ ನ್ಯಾಯದ ಮತ್ತು ದಯದ ಪ್ರತ್ಯಕ್ಷ ಮೂರ್ತಿಗಳಾಗಿಯೂ ಇದ್ದರು.

ಗ್ರೀಸದೇಶದ ಅರಸನು ಕಳುಹಿಸಿದ್ದು:— ಗ್ಲ್ಯಾಡ್‌ಸ್ಟನ್ ದೊರೆಗಳು ಅಪ್ರತಿಮ ರಾಜ್ಯಕಾರ್ಯ ವಿಶಾರದ ಪುರುಷರಾಗಿದ್ದರು. ಗ್ರೀಸದೇಶದ ಮೇಲೆ ಅವರು ಮಾಡಿರುವ ಉಪಕಾರಗಳನ್ನು ನಾವು ಎಂದೂ ಮರೆಯಲಿಕ್ಕಿಲ್ಲ. ಪ್ರಜೆಗಳ ಬಯಕೆಯನ್ನು ಈಡೇರಿಸುವ ಕಾರ್ಯಗಳಲ್ಲಿ ಅವರು ಯಾವಾಗಲು ದಕ್ಷರಾಗಿದ್ದರು. ಇಷ್ಟು ಪ್ರಜಾಪಕ್ಷಾಭಿಮಾನಿಗಳನ್ನು ಒಮ್ಮಿಂದೊಮ್ಮೆ ಕಳಕೊಂಡದ್ದಕ್ಕಾಗಿ ನಾವು ಬಹು ಖೇದ ಪಡುತ್ತೇವೆ. ಅವರ ಹೆಸರು ನಮ್ಮ ದೇಶದೊಳಗಿನ ದೊಡ್ಡವರಿಗೂ ಸಣ್ಣವರಿಗೂ ಪ್ರಿಯವಾಗಿದೆ.

ಇಟಲಿದೇಶದ ಮುಖ್ಯ ಮಂತ್ರಿಯು ಕಳುಹಿಸಿದ್ದು:— ಗ್ಲ್ಯಾಡ್‌ಸ್ಟನ್ ದೊರೆಗಳ ಮರಣದಿಂದ ಇಂಗ್ಲಂಡಕ್ಕೆ ಮಾತ್ರ ಹಾನಿಯುಂಟಾಗಲಿಲ್ಲ; ಆದರೆ ಸ್ವಾತಂತ್ರ್ಯಪ್ರಿಯ ಸರ್ವ ರಾಷ್ಟ್ರಗಳಿಗೂ ಹಾನಿಯುಂಟಾಯಿತು. ಇದಕ್ಕೆ ಮನುಷ್ಯನ ಯುಕ್ತಿ ಇಲ್ಲ. ಆ ಮಹಾಪುರುಷರು ಮಾಡಿರುವ ಉಪಕಾರಗಳನ್ನು ಇಟಲಿದೇಶವು ಮರೆತಿಲ್ಲ; ಅವುಗಳನ್ನು ಅದು ಎಂದೂ ಮರೆಯಲಿಕ್ಕಿಲ್ಲ. ಯಾಕಂದರೆ ಅದು ಈಗ ಅನುಭವಿಸುತ್ತಿರುವ ಸ್ವಾತಂತ್ರ್ಯ ಸುಖಕ್ಕೆ ಅವರ ಪ್ರಯತ್ನಗಳೇ ಕಾರಣವು.

ಗ್ಲ್ಯಾಡ್‌ಸ್ಟನ್ನನ ಕಡೆಯ ವಿಶ್ರಾಂತಿ ಸ್ಥಾನದ ಬಗ್ಗೆ ವಿಚಾರಗಳು.

ಗ್ಲ್ಯಾಡ್‌ಸನ್ನನ ಕಡೆಯ ವಿಶ್ರಾಂತಿಸ್ಥಾನದ ವಿಷಯವಾಗಿ ಪಾರ್ಲಮೆಂಟ ಸಭೆಯವರು ಚರ್ಚೆ ನಡಿಸಿ, ಅವನ ಔರ್ಧ್ವದೇಹಿಕ ಸಂಸ್ಕಾರಗಳನ್ನು ಸಾರ್ವಜನಿಕ ಸಮಸ್ತ ಮಾನಮರ್ಯಾದೆಗಳಿಂದ ನೆರವೇರಿಸಬೇಕೆಂತಲೂ ಅವನ ಶರೀರವನ್ನು ವೆಸ್ಟ ಮಿನ್‌ಸ್ಟರ ಅಬ್ಬೇ ಎಂಬ ಪ್ರಸಿದ್ಧ ದೇವಾಲಯದಲ್ಲಿ ದಫನ ಮಾಡಬೇಕೆಂತಲೂ ಸರ್ವಾನುಮತದಿಂದ ನಿರ್ಣಯಿಸಿದರು. ಈ ರಾಷ್ಟ್ರನಮ್ರತೆಯನ್ನು ಒಪ್ಪಿಕೊಳ್ಳುವ ಸಮಯದಲ್ಲಿ ಅವನ ಕುಟುಂಬದವರು, "ನಮ್ಮ ಹಿರಿಯರ ಮೃತ್ಯುಪತ್ರದಲ್ಲಿ, 'ನನ್ನ ಶರೀರವನ್ನಿಟ್ಟ ಸ್ಥಳದಲ್ಲಿಯೇ ನನ್ನ ವಿಧೇಯಳಾದ ಅರ್ಧಾಂಗಿನಿಯು ಮಹಾನಿದ್ರೆಗೊಳಗಾದ ಬಳಿಕ, ಅವಳ ಶರೀರವನ್ನು ಸಹ ಇಡಬೇಕು; ಮತ್ತು ನನ್ನ ಉತ್ತರ ಕ್ರಿಯೆಗಳನ್ನು ಬಲು ಸಾದಾ ರೀತಿ

ಯಿಂದ ತೀರಿಸಬೇಕು’ ಎಂಬ ಲೇಖವಿರುವದು. ಇವೆರಡು ಸಂಗತಿಗಳಿಗೆ ಅವಶ್ಯವಾಗಿ ಲಕ್ಷ್ಯಗೊಡತಕ್ಕದ್ದು” ಎಂದು ಹೇಳಿದರು. ಇವುಗಳಲ್ಲಿಯ ಮೊದಲನೆಯ ಮಾತಿಗೆ ಅಧಿಕಾರಸ್ಥರೆಲ್ಲರು ಬಹು ಆನಂದದಿಂದ ಒಮ್ಮೆಲೇ ಒಪ್ಪಿಕೊಂಡರು; ಆದರೆ ಎರಡನೆಯ ಮಾತಿಗೆ ಒಪ್ಪುವದು ಜೀವದ ಸುತ್ತು ಬಂದರೂ ಅವರು ಆ ಮಹಾ ಸಾಧುಪುರುಷನ ಇಚ್ಛೆಯನ್ನು ತೃಪ್ತಿಗೊಳಿಸುವದು ತಮ್ಮ ಕರ್ತವ್ಯವಾಗಿದೆಂದು ತಮ್ಮ ತಮ್ಮೊಳಗೆ ಮಾತನಾಡಿಕೊಂಡು, ಅದಕ್ಕೂ ಸಮ್ಮತಿಸಿ, ಇವೆರಡೂ ಸಂಗತಿಗಳಿಗೆ ಮಂಜೂರಿಯನ್ನು ದಯಪಾಲಿಸಬೇಕೆಂದು ಸಿಂಹಾಸನಾಧಿಪತಿಗಳಿಗೆ ಬೇಡಿಕೊಂಡರು. ಆ ಪರಮ ದಯಾಳುಗಳಾದ ರಾಜ್ಞಿಯರು ಬಹು ಸಂತೋಷದಿಂದ ಅವುಗಳಿಗೆ ತಮ್ಮ ಒಪ್ಪಿಗೆಯನ್ನು ಕೊಟ್ಟರು.

೨೩ನೆಯ ತಾರೀಖಿನ ದಿವಸ ಗ್ಲ್ಯಾಡ್‌ಸ್ಟನ್ನನ ಮಗನಾದ ಮಿಸ್ಟರ್ ಹರ್ಬರ್ಟ್ ಗ್ಲ್ಯಾಡಸ್ಟನ್ನನು ಒಂದು ಪತ್ರವನ್ನು ಪ್ರಸಿದ್ಧಿಸಿ, ಅದರಲ್ಲಿ ‘ನಮ್ಮ ಹಿರಿಯರ ಪ್ರೇತಸಂಸ್ಕಾರಗಳು ಸಾರ್ವಜನಿಕ ಮಾನಮರ್ಯಾದೆಗಳಿಂದ ನೆರವೇರಿಸಲ್ಪಡಬೇಕೆಂದು ನಿರ್ಣಯಿಸಲ್ಪಟ್ಟಿದೆಯಷ್ಟೇ. ಆದರೆ ಅವುಗಳನ್ನು ೨೮ನೆಯ ತಾರೀಖಿಗಿಂತ ಹೆಚ್ಚು ಮುಂದೆ ಹಾಕಬಾರದೆಂದು ನಾವು ಬೇಡಿಕೊಳ್ಳುತ್ತೇವೆ. ಯಾಕೆಂದರೆ ನಮ್ಮ ಮಾತೋಶ್ರೀಯವರ ಮೇಲೆ ಪರಮೇಶ್ವರನು ಈಗ ತಂದಿರುವ ದುಃಖವನ್ನು ಅವರು ಹೆಚ್ಚು ದಿವಸಗಳವರೆಗೆ ತಡಕೊಳ್ಳಲಾರರು. ಈ ಅನಿವಾರ್ಯ ಶೋಕದಿಂದ ಅವರ ಪ್ರಕೃತಿಯು ದಿನ ದಿನಕ್ಕೆ ಹೆಚ್ಚು ಹೆಚ್ಚಾಗಿ ಕೆಡುತ್ತ ನಡೆದದೆ. ಆದುಕಾರಣ ಈ ಅಂತ್ಯವಿಧಿಗಳನ್ನು ಆದಷ್ಟು ಬೇಗನೆಯೂ ನಮ್ಮ ತಂದೆಗಳ ಅಪೇಕ್ಷೆಯಂತೆಯೂ ಕೈಲಾದ ಮಟ್ಟಿಗೆ ಸಾದಾ ರೀತಿಯಿಂದ ತೀರಿಸತಕ್ಕದ್ದು’ ಎಂದು ಬರೆದಿದ್ದನು. ಆ ಪತ್ರವನ್ನು ಪಾರ್ಲಮೆಂಟ ಸಭೆಯವರು ನೋಡಿ, ಅದೇ ದಿವಸ ಸಾಯಂಕಾಲದಲ್ಲಿ ನೆರೆದು ಆ ಪತ್ರದೊಳಗಿನ ಸೂಚನೆಯು ಯೋಗ್ಯವಾದದ್ದೆಂದೆಣಿಸಿ, ಗ್ಲ್ಯಾಡ್‌ಸ್ಟನ್ ದೊರೆಯ ಅಂತ್ಯವಿಧಿಯನ್ನು ಮುಂದಿನ ಶನಿವಾರ ಅಂದರೆ ೨೮ನೆಯ ತಾರೀಖಿನ ದಿವಸ ತೀರಿಸಬೇಕೆಂತಲೂ, ಅದಕ್ಕೆ ಲಾರ್ಡರ ಸಭೆಯವರೂ ಕಾಮನ್ಸರ ಸಭೆಯವರೂ ಹೋಗಬೇಕೆಂತಲೂ ನಿರ್ಣಯಿಸಿ, ಸ್ವತಃ ಈ ಕೆಲಸಕ್ಕೆ ತೊಡಗಿದರು. ಅವರಲ್ಲಿ (Duke of Norfolk) ಡ್ಯೂಕ್-ಆಫ್-ನಾರ್ಫಕ್ ದೊರೆಯೇ ಮುಂದಾಳಾಗಿ ನಿಂತು, ಗ್ಲ್ಯಾಡ್‌ಸ್ಟನ್ನನ ಶವವನ್ನು ಹವಾರ್ಡೀನ್ ಕಾಸಲದಿಂದ ಲಂಡನ ಪಟ್ಟಣಕ್ಕೆ ೨೫ನೆಯ ತಾರೀಖಿನ ದಿವಸ ತರಿಸಿ, ಅದನ್ನು (Westminster Hall) ವೆಸ್ಟಮಿನಸ್ಟರ್ ಹಾಲವೆಂಬ ವಿಸ್ತೀರ್ಣವಾದ ಸಭಾಸ್ಥಾನದಲ್ಲಿ ಯೋ

ಗ್ಲ್ಯಾಡ್‌ಸ್ಟನ್ನನ ಅಂತ್ಯವಿಧಿಗಳನ್ನು ಸನ್ ೧೮೯೮ ನೆಯ ಮೇ ತಿಂಗಳಿನ ೨೮ ನೆಯ ತಾರೀಖಿನ ದಿವಸ ನೆರವೇರಿಸಬೇಕೆಂದು ಪಾರ್ಲಮೆಂಟಿನವರು ನಿರ್ಣಯಿಸಿದ್ದು.

ಗ್ಯ ವ್ಯವಸ್ಥೆಯಿಂದಿರಿಸಿ, ತಾರೀಖು ೨೬ ನೆಯ ಮತ್ತು ೨೭ ನೆಯ ದಿವಸಗಳಲ್ಲಿ ಗ್ಲ್ಯಾಡ ಸ್ಟನ್ ದೊರೆಯ ಅಂತ್ಯದರ್ಶನವನ್ನು ಜನರು ತೆಗೆದುಕೊಳ್ಳಬಹುದೆಂದು ಪ್ರಕಟಿಸಿದನು. ಈ ಎರಡು ದಿವಸಗಳಲ್ಲಿ ಕೂಡಿ ಸುಮಾರು ೧,೩೦,೦೦೦ ಜನರು ಆ ಮಹಾ ಪುರುಷನ ಕಡೆಯ ದರ್ಶನವನ್ನು ತೆಗೆದುಕೊಂಡರು! ಗ್ಲ್ಯಾಡ್‌ಸ್ಟನ್ನನ ಪ್ರೇತ ಸಂಸ್ಕಾರಗಳು ಒಬ್ಬ ದೊಡ್ಡ ಬಾದಶಹನ ಪ್ರೇತ ಸಂಸ್ಕಾರಗಳಂತೆ ಸರಕಾರದ ಹಣದಿಂದ ಜರಿಗಿದವು! ಸ್ಮಶಾನಯಾತ್ರೆಗೆ ೩,೦೦,೦೦೦ ಜನರು ನೆರೆದಿದ್ದರು! ಆದರೆ ಅಲ್ಪಾವಕಾಶದಲ್ಲಿಯೇ ಇಷ್ಟು ಜನಸಮ್ಮರ್ದಕ್ಕೆ ಸಾಕಾಗುವಷ್ಟು ಸ್ಥಳದ ವ್ಯವಸ್ಥೆ ಮಾಡುವದು ಅಸಾಧ್ಯವಾಯಿತು. ಕೂಡಿದ ಜನರಲ್ಲಿ ಇಂಗ್ಲಂಡದ ಜನರಂತು ಇದ್ದೇ ಇದ್ದರು. ಇವರ ಹೊರತು ಇಟಲಿ, ಬೆಲ್ಜಮ್ ಮತ್ತು ಸ್ವೀಡನ್ ದೇಶಗಳ ಪ್ರತಿನಿಧಿಗಳು ಸಹ ಆ ದೊಡ್ಡ ಮನುಷ್ಯನಿಗೆ ಕಡೆಯ ಮನ್ನಣೆಗಳನ್ನು ಕೊಡುವಸಕ್ಕಾಗಿ ಬಂದಿದ್ದರು!

ಗ್ಲ್ಯಾಡ್‌ಸ್ಟನ್ನನ ಅಂತ್ಯವಿಧಿಗಳ ದಿವಸ ರಾಜ್ಞೀಯವರು ಗ್ಲ್ಯಾಡ್‌ಸ್ಟನ್ನನ ಹೆಂಡತಿಗೆ ಕಳುಹಿಸಿದ ದುಃಖ ಪ್ರದರ್ಶನ ತಂತಿಯು.

ಪ್ರೇತ ಸಂಸ್ಕಾರಗಳ ದಿವಸ ಅಂದರೆ ೨೮ ನೆಯ ತಾರೀಖಿನ ದಿವಸ ವಿಕ್ಟೋರಿಯಾ ಚಕ್ರವರ್ತಿನಿಗಳು ಗ್ಲ್ಯಾಡ್‌ಸ್ಟನ್ನನ ಪತ್ನಿಗೆ (Balmoral) ಬಾಲ್‌ಮೋರಲ್ಲದಿಂದ ಕಳುಹಿಸಿದ ತಂತಿಯು:—ಈವೊತ್ತಿನ ದಿವಸವು ನಿಮ್ಮ ಪತಿಗಳ ಅಂತ್ಯವಿಧಿಗಳ ದಿವಸವಾಗಿರುವದರಿಂದ, ನಮ್ಮ ಮನಸೆಲ್ಲ ನಿಮ್ಮ ಕಡೆಗೇ ಇರುತ್ತದೆ. ಈ ದಿವಸದಲ್ಲಿ ಆಗುವ ಪ್ರೇತ ಸಂಸ್ಕಾರಗಳು ನಿಮಗೆ ಅತಿಶಯ ದುಃಖಪ್ರದವಾಗಬಹುದು. ಆದರೂ ನಮ್ಮ ಆಳಿಕೆಯಲ್ಲಿ ನಿಮ್ಮ ಪತಿಗಳು ಅತ್ಯುತ್ತಮ ಸದಾಚಾರಿಗಳೂ ಅತ್ಯಧಿಕ ಬುದ್ಧಿಶಾಲಿಗಳೂ ಎಂದು ಕೀರ್ತಿ ಪಡೆದದ್ದನ್ನು ನೋಡಿ, ನಮ್ಮ ಎಲ್ಲ ಪ್ರಜೆಗಳು ಅವರಿಗೆ ಕೊಡುವ ಮಾನವನ್ನು ಮತ್ತು ಅವರ ಮರಣಕ್ಕಾಗಿ ಶೋಕಿಸುವ ಸಹಾನುಭೂತಿಯನ್ನು ನೋಡಿ, ನಿಮ್ಮ ಮನಸಿಗೆ ಸಮಾಧಾನ ಮಾಡಿಕೊಳ್ಳತಕ್ಕದ್ದು. ಅವರು ನಮ್ಮ ಕಲ್ಯಾಣಕ್ಕೂ ನಮ್ಮ ಮನೆತನದ ಒಳಿತಿಗೂ ತಮ್ಮಿಂದಾದಷ್ಟು ಲಕ್ಷಗೊಟ್ಟು, ವಿಶೇಷ ಶ್ರಮಪಟ್ಟು ನಮ್ಮ ಮೇಲೆ ಮಾಡಿರುವ ಉಪಕಾರಗಳನ್ನು ನಾವು ಎಂದೂ ಮರೆಯಲಿಕ್ಕಿಲ್ಲ.

ಗ್ಲ್ಯಾಡಸ್ಟನ್ನನ ಸ್ಮಶಾನ ಯಾತ್ರೆಯು.

ಗ್ಲ್ಯಾಡ್‌ಸ್ಟನ್ ದೊರೆಯ ಸ್ಮಶಾನಯಾತ್ರೆಯು ಗಂಭೀರವಾಗಿಯೂ ವಿಧಾನಪೂರ್ವಕವಾಗಿಯೂ ಆಯಿತು. ವೆಸ್ಟಮಿನ್‌ಸ್ಟರ್ ಹಾಲದಿಂದ ವೆಸ್ಟಮಿನ್‌ಸ್ಟರ್ ಅಬ್ಬೇ ಎಂಬ ದೇವಾಲಯದ ಪಶ್ಚಿಮದ್ವಾರದ ವರೆಗೆ ಉಭಯ ಪಾರ್ಶ್ವಗಳಲ್ಲಿ ಜನರು ಕಿಕ್ಕಿರಿದು ನಿಂತುಕೊಂಡಿದ್ದರು. ಅವರೆಲ್ಲರೂ ದುಃಖದಿಂದ ಸಣ್ಣ ಮೋರೆ ಮಾಡಿ

ಕೊಂಡು ಶವವು ಬರುವ ನಿಟ್ಟಿಗೆ ಒಂದೇಸಮನೆ ಸುಮ್ಮನೆ ನೋಡುತ್ತಿದ್ದರು. ನಿಯಮಿತವೇಳೆಗೆ ಶವದ ಪೆಟ್ಟಿಗೆಯು ವೆಸ್ಟಮಿನ್‌ಸ್ಟರ ಹಾಲದಿಂದ ಹೊರಟಿತು. ಅದರ ಹಿಂದೆ ಪಾರ್ಲಮೆಂಟಿನ ಸಭಾಸದರೂ, ಅವರ ತರುವಾಯ ಗ್ಲ್ಯಾಡಸ್ಟನ್ನನ ಕುಟುಂಬದವರೂ, ಅವರ ಹಿಂದೆ ಹವಾರ್ಡೀವದೊಳಗಿನ ರೈತರೂ, ಈ ಮೇರೆಗೆ ಅನುಕ್ರಮವಾಗಿ ಸಾಗಿದರು. ಯುವರಾಜರು ಅಂದರೆ ನಮ್ಮ ಈಗಿನ ೭ನೆಯ ಎಡ್ವರ್ಡ ಚಕ್ರವರ್ತಿಗಳೂ, ಅವರ ಮಕ್ಕಳಾದ ಡ್ಯೂಕ್-ಆಫ್-ಯಾರ್ಕರೂ, ಗ್ಲ್ಯಾಡ್‌ಸ್ಟನ್ನನ ಪಶ್ಚಾತ್ ಮುಖ್ಯ ಮಂತ್ರಿಯಾದ ಲಾರ್ಡ್‌ರೋಜಬರಿಯೂ, ಡ್ಯೂಕ್-ಆಫ-ರಟ್ಲಂಡ್, ಲಾರ್ಡ್ ಕಿಂಬರ್ಲೀ, ಮಿಸ್ಟರ್ ಬಾಲ್‌ಫರ್, ಸರ್ ವಿಲಿಯಮ್ ಹಾರ್ಕೋರ್ಟ, ಲಾರ್ಡ್ ರೆಂಡೆಲ್, ಮಿಸ್ಟರ್ ಆರ್ಮಿಸ್ಟೆಡ್ ಇವರೆಲ್ಲರೂ ಆ ಶವದ ಪೆಟ್ಟಿಗೆಗೆ ತಮ್ಮ ಹೆಗಲುಗೊಟ್ಟರು!! ಧನ್ಯ, ಧನ್ಯ, ಗ್ಲ್ಯಾಡಸ್ಟನ್ನನು ಧನ್ಯನೆಂದು ಹೇಳಬೇಕು; ಯಾಕೆಂದರೆ ಇಹಲೋಕದಲ್ಲಿ ಜನಿಸಿದವನು ಪಡೆಯತಕ್ಕ ಹೆಚ್ಚಿನ ಮನ್ನಣೆಯು ಇನ್ನಾವದುಂಟು? ಆ ಪೆಟ್ಟಿಗೆಯು ಈ ರೀತಿಯಿಂದ ಸಾಗಿರಲು, ಎರಡೂ ಮಗ್ಗಲುಗಳಲ್ಲಿ ಸಾಲ್ಗೊಂಡು ನಿಂತಿದ್ದ ಜನರು ತಮ್ಮ ಟೊಪ್ಪಿಗೆಗಳನ್ನು ತೆಗೆದು, ಆ ಸನ್ಮಾನಿತ ಮೃತಶಿರಃ ಪ್ರಧಾನಿಗೆ ವಂದನೆಯನ್ನು ಮಾಡಿದರು. ಈ ನೋಟವು ಅತಿಶಯ ಖೇದಪ್ರದವಾಯಿತು. ಆ ದೇವಾಲಯವನ್ನು ಪ್ರವೇಶಿಸಲು ಅಪ್ಪಣೆಯನ್ನು ಪಡೆದವರು ಅಲ್ಲಿ ನಡೆದ ಅಂತ್ಯವಿಧಿಗಳನ್ನು ಆಜನ್ಮ ಮರೆಯಲಿಕ್ಕಿಲ್ಲ. ಗ್ಲ್ಯಾಡ್‌ಸ್ಟನ್ನನ ಪ್ರೀತಿಯ ಗೀತಗಳನ್ನು ಎಲ್ಲರೂ ಕೂಡಿ ಸ್ವರಮೇಳದಿಂದ ಹಾಡಿದರು, ವೆಸ್ಟಮಿನ್‌ಸ್ಟರದ ಮುಖ್ಯಗುರುವೂ ಕಾಂಟರಬರಿಯ ಶ್ರೀಪ್ರಾಧ್ಯಕ್ಷನೂ ಅಂತ್ಯವಿಧಿಗಳನ್ನು ಮುಗಿಸಿದರು. ಈ ಸಮಯದಲ್ಲಿ ಗ್ಲ್ಯಾಡ್‌ಸ್ಟನ್ನನ ವೃದ್ಧ ಪತ್ನಿಯು ಸಮಾಧಿಯ ಮೇಲೆ ಅದರ ಶಿರೋಭಾಗದಲ್ಲಿ ಕುಳಿತುಕೊಂಡಿದ್ದಳು. ಅವನ ಮಕ್ಕಳೂ ಆಪ್ತರಿಷ್ಟರೂ ಅವಳ ನೆರೆಯಲ್ಲಿ ನಿಂತುಕೊಂಡಿದ್ದರು. ಯುವರಾಜರೂ ಯುವರಾಜ್ಞಿಯರೂ, ಡ್ಯೂಕ್-ಆಫ್ ಯಾರ್ಕರೂ, ಲಾರ್ಡ-ಸಾಲಿಸಬರಿಯೂ ಮುಂತಾದ ಪ್ರಮುಖ ಜನರು ಸಮಾಧಿಯ ಹುಲಿವರಿದು ನಿಂತುಕೊಂಡಿದ್ದರು. ಅವರೆಲ್ಲರ ಕಣ್ಣುಗಳಿಂದ ದುಃಖಾಶ್ರುಗಳು ತಮ್ಮಷ್ಟಕ್ಕೆ ತಾವೇ ಹರಿಯಹತ್ತಿದ್ದವು. ಗ್ಲ್ಯಾಡ್‌ಸ್ಟನ್ನನಿಗೆ ಪರಲೋಕದ ಸುಖವನ್ನು ದಯಪಾಲಿಸೆಂದು ಅವರು ತಮ್ಮ ಹೃದಯಗಳಲ್ಲಿ ದೇವರನ್ನು ಪ್ರಾರ್ಥಿಸುತ್ತಿದ್ದರೆಂದು ಅವರ ಮುಖಲಕ್ಷಣಗಳಿಂದ ತೋರುತ್ತಿತ್ತು. ಕಟ್ಟಕಡೆಗೆ ಶವದ ಪೆಟ್ಟಿಗೆಯನ್ನು ಸಮಾಧಿಯಲ್ಲಿ ಇಳಿಸಿದ ಬಳಿಕ, ಯುವರಾಜರು ದುಃಖಸಾಗರದಲ್ಲಿ ಮುಳುಗಿದ್ದ ಆ ವಿಧವಾ ಸ್ತ್ರೀಯಳ ಬಳಿಗೆ ಹೋಗಿ, ಬಾಗಿ ಬಹು ಮರ್ಯಾದೆಯಿಂದ ಅವಳ ಕೈಗಳನ್ನು ಹಿಡಿದು ಚುಂಬಿಸಿದರು! ಅವರ ತರುವಾಯ ಶವದ ಪೆಟ್ಟಿಗೆಗೆ ಹೆಗಲುಗೊಟ್ಟವರೆಲ್ಲರೂ

ಒಬ್ಬರ ಹಿಂದೊಬ್ಬರು ಅದೇ ಮೇರೆಗೆ ಅವಳ ಕೈಗಳನ್ನು ಮುದ್ದಿಟ್ಟರು. ಆ ಮೇಲೆ ಆ ವೃದ್ಧ ವಿಧವೆಯು ಸಾವಕಾಶವಾಗಿ ಎದ್ದು, ಸಮಾಧಿಯಲ್ಲಿಯ ಪೆಟ್ಟಿಗೆಯನ್ನು ಕಡೆಯ ಸಾರೆ ನೋಡಿದ ಬಳಿಕ, ಅವಳ ಇಬ್ಬರು ಮಕ್ಕಳು ನಿಕ್ಕಿಯವಾಗಿ ಈಗ ಅನಾಥಳಾದಂಥ ತಮ್ಮ ತಾಯಿಯ ಕೈಗಳನ್ನು ಹಿಡಿದು, ಅವಳನ್ನು ಮೆಲ್ಲಗೆ ದೇವಾಲಯದ ಹೊರಗೆ ಕರೆದುಕೊಂಡು ಹೋದರು. ಆ ಮೇಲೆ ವಿಕ್ಟೋರಿಯಾ ಮಹಾರಾಣೀ ಸಾಹೇಬರ ಕಾಲದಲ್ಲಿಯ ರಾಜ್ಯಕಾರ್ಯ ಧುರಂಧರನಾದ ಶ್ರೇಷ್ಠ ಪ್ರಧಾನಿಯ ಶರೀರಕ್ಕೆ ಒಬ್ಬರ ತರುವಾಯ ಒಬ್ಬರು ಮೌನದಿಂದಲೂ ದುಃಖದಿಂದಲೂ ಕಡೆಯ ವಂದನೆಯನ್ನು ಮಾಡಿ, ಅಲ್ಲಿಂದ ಹೊರಟರು. ಆ ವೇಳೆಯ ಹೃದಯದ್ರಾವಕ ನೋಟವನ್ನು ವರ್ಣಿಸುವದು ಅಶಕ್ಯವು. ಗ್ಲಾಡ್‌ಸ್ಟನ್ನನ ಮರಣದ ತರುವಾಯ ಅವನ ಶರೀರಕ್ಕೆ ಸ್ವದೇಶದವರು ಕೊಟ್ಟ ವಿಶೇಷ ಮನ್ನಣೆಗಳನ್ನೂ ಪೃಥ್ವಿಯ ಎಲ್ಲ ಭಾಗಗಳಲ್ಲಿಯ ಜನರು ಅವನ ವಿಷಯವಾಗಿ ಹೊರಗೆಡವಿದ ದುಃಖೋದ್ಗಾರಗಳನ್ನೂ ನೋಡಿದರೆ, ಗ್ರೀಸ ದೇಶದ ಬುದ್ಧಿಶಾಲಿಯಾದ (Pericles) ಪೆರಿಕ್ಲೀಸನು ಒಂದು ಪ್ರಸಂಗದಲ್ಲಿ ಅಥೆನ್ಸದ ನಿವಾಸಿಗಳಿಗೆ ಹೇಳಿದ ಮಾತು ನೆನಪಿಗೆ ಬರುತ್ತದೆ. ಅದರ ತಾತ್ಪರ್ಯವೇನೆಂದರೆ:—"ಸ್ವದೇಶದವರು ತಮ್ಮ ಮಹಾಪುರುಷರ ಮೃತಶರೀರಗಳನ್ನು ಪವಿತ್ರಸ್ಥಳಗಳಲ್ಲಿ ಹೂಳಿ ಅವರ ಪ್ರತಿಮೆಗಳನ್ನು ಸ್ಥಾಪಿಸಿ ಇಲ್ಲವೆ ಶಿಲಾಸ್ತಂಭಗಳನ್ನು ನಿಲ್ಲಿಸಿ ಅವುಗಳಮೇಲೆ ಅವರಲ್ಲಿದ್ದ ವಿಶೇಷ ಗುಣಗಳನ್ನು ಬರೆದು, ಅವರ ಸ್ಮಾರಕಗಳನ್ನು ಮಾಡುತ್ತಾರೆ. ಪರದೇಶದವರು ಅವರಿಗೆ ತಮ್ಮ ಶರೀರಗಳನ್ನೇ ಸಮಾಧಿಗಳನ್ನಾಗಿ ಮಾಡಿ, ಅವರ ಸತ್ಕೃತ್ಯಗಳ ವಿಳಾಸಗಳನ್ನು ತಮ್ಮ ಹೃತ್‌ಪಟಲದಮೇಲೆ ಬರೆದುಕೊಂಡು ಅವರನ್ನು ಚಿರಸ್ಮರಣೀಯವಾಗಿ ಮಾಡುತ್ತಾರೆ" ಇದಲ್ಲದೆ॥ ನರಃ ಪತಿತಕಾಯೋಪಿ ಯಶಃಕಾಯೇನ ಜೀವತಿ ॥ ಅಂದರೆ "ಮನುಷ್ಯನು ಈ ಪಂಚಭೂತಾತ್ಮಕವಾದ ದೇಹವನ್ನು ಕಳೆದುಕೊಂಡರೂ ಯಶೋರೂಪವಾದ ದೇಹದಿಂದ ಜೀವಿಸುತ್ತಾನೆ" ಎಂಬ ಸಾಧು ವಚನವು ಸಹ ಗ್ಲ್ಯಾಡ್‌ಸ್ಟನ್ನನಿಗೆ ಸರಿಯಾಗಿ ಹತ್ತುತ್ತದೆ.

# ೮ನೆಯ ಅಧ್ಯಾಯ.

## ವಕ್ತೃತ್ವವೂ ಗ್ರಂಥಕರ್ತೃತ್ವವೂ.

ತದ್ವಕ್ತಾ ಸದಸಿ ಬ್ರವೀತು ವಚನಂ ಯಚ್ಛೃಣ್ವತಾಂ ಚೇತಸಃ।
ಪ್ರೋಲ್ಲಾಸಂ ರಸಪೂರಣಂ ಶ್ರವಣಯೋ ರಕ್ಷ್ಣೋರ್ವಿಕಾಸಶ್ರಿಯಮ್॥
ಕ್ಷುನ್ನಿದ್ರಾಶ್ರಮದುಃಖ ಕಾಲಗತಿಹೃತ್ ಕಾರ್ಯಾಂತರೆ ಪ್ರಸ್ಮೃತಿಂ।
ಪ್ರೋತ್ಕಂಠಾ ಮನಿಶಂ ಶ್ರುತೌ ವಿತನುತೇ ಶೋಕಂ ವಿರಾಮಾದಪಿ॥೧॥

ವಾಗ್ಮಿಯು ಸಭೆಯಲ್ಲಿ ಎದ್ದುನಿಂತು ಹೇಗೆ ಮಾತನಾಡತಕ್ಕದ್ದೆಂದರೆ:— ಅವನ ಭಾಷಣವನ್ನು ಕೇಳುವಾಗ್ಗೆ, ಜನರ ಅಂತಃಕರಣಗಳು ಪ್ರಸನ್ನವಾಗಬೇಕು, ಕಿವಿಗಳು ವಾಗ್ರಸದಿಂದ ತುಂಬಿಕೊಳ್ಳಬೇಕು, ಕಣ್ಣುಗಳು ಆಶ್ಚರ್ಯದಿಂದ ವಿಕಾಸಹೊಂದಬೇಕು, ಇದಲ್ಲದೆ ಹಸಿವೆ, ನಿದ್ರೆ, ಶ್ರಮ, ದುಃಖ, ಕಾಲಗತಿ ಇವುಗಳ ಪರವೆಯು ಅವರಿಗೆ ಇಲ್ಲದಂತಾಗಬೇಕು; ಅವರು ಉಳಿದ ತಮ್ಮ ಕಾರ್ಯಗಳನ್ನೆಲ್ಲ ಮರೆತು, ಭಾಷಣವನ್ನು ಕೇಳುವದರಲ್ಲಿಯೇ ಅತಿಶಯ ಉತ್ಕಂಠಿತರಾಗಬೇಕು, ಅದು ಮುಗಿಯಲು ಅವರು ವಿಷಾದಗೊಳ್ಳಬೇಕು.

---

ನಾವು ಈ ವರೆಗೆ ಬರೆದ ಚರಿತ್ರೆಯಿಂದ ಗ್ಲ್ಯಾಡ್‌ಸ್ಟನ್ನನಲ್ಲಿ ವಕ್ತೃತ್ವಗುಣವು ಸಂಪೂರ್ಣವಾಗಿತ್ತೆಂತಲೂ ಅದರ ಪ್ರಭಾವದಿಂದ ಅವನು ದಿಗಂತ ಕೀರ್ತಿಯನ್ನು ಹೊಂದಿದನೆಂತಲೂ ವಾಚಕರ ಲಕ್ಷದಲ್ಲಿ ಬಂದಿರಬಹುದು. ಇನ್ನು ಮೇಲೆ ಅವನನ್ನು ಇಷ್ಟು ಉನ್ನತಿಗೇರಿಸಿದ ಆ ಶ್ರೇಷ್ಠಗುಣದ ಮೂಲಸ್ಥಾನವು ಯಾವುದು? ಅದರ ಆರಯ್ಕೆಗೂ ಅಭಿವೃದ್ಧಿಗೂ ಯಾವ ರಾಜ್ಯಪದ್ಧತಿಯು ಅನುಕೂಲವಾಯಿತು? ಅದು ಕ್ರಮೇಣ ಹೇಗೆ ಪ್ರಚಾರಗೊಂಡಿತು? ಇವೇ ಮುಂತಾದ ಸಂಗತಿಗಳನ್ನು ಮತ್ತು ಗ್ಲ್ಯಾಡ್‌ಸ್ಟನ್ನನ ವಕ್ತೃತ್ವದ ವಿಷಯವಾಗಿ ದೊಡ್ಡದೊಡ್ಡ ವಾಗ್ಮಿಗಳು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಅತಿ ಸಂಕ್ಷೇಪವಾಗಿ ವಿವರಿಸಿ, ಕಡೆಯಲ್ಲಿ ಅವನ ಗ್ರಂಥಕರ್ತೃತ್ವದ ವಿಷಯವಾಗಿಯೂ ಒಂದೆರಡು ಮಾತುಗಳನ್ನು ಹೇಳುವೆವು.

ವಕ್ತೃತ್ವಗುಣದ ಮೂಲಸ್ಥಾನವೂ ಅದರ ಪ್ರಚಾರವೂ.

ಜಗತ್ತಿನ ಇತಿಹಾಸದಿಂದ, ಲೋಕಸತ್ತಾತ್ಮಕ ರಾಜ್ಯಗಳಲ್ಲಿ ವಕ್ತೃತ್ವಗುಣವು ಬೆಳೆದು, ಪರಮಾವಧಿ ಘನತೆಗೇರಿತೆಂದು ತಿಳಿಯುವದು. ಸಮಗ್ರ ಗ್ರೀಸ ದೇಶದಲ್ಲಿ ಅಥೆನ್ಸವು ಮಾತ್ರ ಲೋಕಸತ್ತಾತ್ಮಕ ರಾಜ್ಯಪದ್ಧತಿಗೆ ತವರೂರಾಗಿದ್ದದರಿಂದ, ಡಿಮಾಸ್ಥನೀಸ್, ಹೈಪರಡೀಜ್ ಚಾರೀಸ್

ಹಾರಿರಿಮಸ್ ಮುಂತಾದ ಜಗದ್ವಿಖ್ಯಾತ ವಾಕ್ಕೋವಿದರು ಅಲ್ಲಿ ಹುಟ್ಟಿದರು. ಅಥೆನ್ಸವನ್ನು ಸರಿಗಟ್ಟುವ ಸ್ಪಾರ್ಟಾ, ಥೀಬ್ಸ್, ಮೆಸಿಡನ್ ಮುಂತಾದ ಸಂಸ್ಥಾನಗಳು ಆ ದೇಶದಲ್ಲಿ ಹೇರಳವಾಗಿದ್ದರೂ, ಅವುಗಳ ಸಂಪೂರ್ಣ ಇತಿಹಾಸವನ್ನು ಶೋಧಿಸಿದರೆ, ಮೇಲಿನ ವಾಗ್ಮಿಯು ಬೆಳಕಿಗೆ ಬಂದ ಉದಾಹರಣೆಯು ಅದರಲ್ಲಿ ನಮಗೆ ಒಂದಾದರೂ ದೊರೆಯುವದಿಲ್ಲ. ಗ್ರೀಸದ ತರುವಾಯ ಪ್ರಸಿದ್ಧಿಗೆ ಬಂದ ಇಟಲೀದೇಶದ ಸ್ಥಿತಿಯಾದರೂ ಹೀಗೆಯೇ ಉಂಟು. ಆ ದೇಶದಲ್ಲಿಯೂ ಗ್ರೀಸದಲ್ಲಿದ್ದಂತೆ ಅನೇಕ ಸಂಸ್ಥಾನಗಳಿದ್ದವು. ಆದರೆ ಸಿಸಿರೋ, ಸೀನಿಯಸ್ ಸಿಪಿಯೋ ಮುಂತಾದ ದೊಡ್ಡದೊಡ್ಡ ವಾಗೀಶರು ಲೋಕಸತ್ತಾತ್ಮಕ ರಾಜ್ಯಪದ್ಧತಿಗೆ ಸ್ಥಾನವಾಗಿದ್ದ ರೋಮ ಪಟ್ಟಣದಲ್ಲಿ ಹುಟ್ಟಿದ್ದು ಇತಿಹಾಸ ಪ್ರಸಿದ್ಧ ಸಂಗತಿಯಾಗಿದೆ. ಇದೇಮೇರೆಗೆ ಅರ್ವಾಚೀನ ಕಾಲದಲ್ಲಿ ಅಂದರೆ ಸುಮಾರು ನೂರಿನ್ನೂರು ವರ್ಷಗಳಿಂದೀತ್ತ ಇಂಗ್ಲಂಡದಲ್ಲಿಯೂ ಆಗಿದೆ. ಅಲ್ಲಿಯ ಪ್ರಜೆಗಳು ತಮ್ಮ ಅರಸರ ಕೂಡ ಯುದ್ಧಮಾಡಿ, ಹೆಚ್ಚುಹೆಚ್ಚು ಸ್ವಾತಂತ್ರ್ಯವನ್ನು ಪಡೆಕೊಳ್ಳಹತ್ತಿದಂದಿನಿಂದ, ಪ್ರಖ್ಯಾತರಾದ ವಾಗ್ಮಿಗಳು ಬಯಲಿಗೆ ಬರಹತ್ತಿದರು. ಇದರಂತೆಯೇ ಸುಮಾರು ಒಂದು ನೂರಿಪ್ಪತ್ತು ವರ್ಷಗಳಹಿಂದೆ ಫ್ರಾನ್ಸದೇಶದಲ್ಲಿ ದೊಡ್ಡ ರಾಜ್ಯಕ್ರಾಂತಿಯುಂಟಾಗಲು, ಅಲ್ಲಿಯ ಪ್ರಜೆಗಳು ಕ್ಷಣಿಕ ಸ್ವಾತಂತ್ರ್ಯವನ್ನು ಪಡೆದುಕೊಂಡರು. ಆ ಅಲ್ಪಕಾಲದಲ್ಲಿಯೇ ವಕ್ತೃತ್ವ ಕಲೆಯಲ್ಲಿ ನಿಪುಣರಾದ ಬಹುಜನರು ಹುಟ್ಟಿದರು. ಅಮೇರಿಕೆಯಲ್ಲಿ ಪ್ರಜಾಸತ್ತಾತ್ಮಕ ರಾಜ್ಯವು ಹೊಸದಾಗಿ ಸ್ಥಾಪಿಸಲ್ಪಟ್ಟಂದಿನಿಂದ ಅಲ್ಲಿಯೂ ಇದೇ ಸ್ಥಿತಿಯಾಗಿದೆ. ಪ್ರಜಾಸತ್ತಾತ್ಮಕ ರಾಜ್ಯದಲ್ಲಿ ವಕ್ತೃತ್ವಗುಣವು ಇಷ್ಟು ಅಭಿವೃದ್ಧಿಸಲು ಕಾರಣವೇನೆಂದರೆ:— ಅಲ್ಲಿಯ ರಾಜ್ಯದಾಡಳಿತವು ಪ್ರಜೆಗಳ ಅಥವಾ ಪ್ರಜೆಗಳು ನಿಯಮಿಸಿಕೊಟ್ಟ ಮಹಾಸಭೆಯವರ ಬಹು-ಮತಕ್ಕನುಗುಣವಾಗಿ ನಡೆಯುವದು. ಅದು ಕಾರಣ ಬುದ್ಧಿಶಾಲಿಯಾದ ಪುರುಷನು ಆ ಪ್ರಜೆಗಳ ಅಥವಾ ಆ ಮಹಾಸಭೆಯವರ ಮನಸ್ಸುಗಳನ್ನು ತನ್ನ ಕಡೆಗೆ ತಿರುಗಿಸಿಕೊಳ್ಳಬಯಸಿದರೆ, ಅವನಿಗೆ ಅಂಥ ಪ್ರಸಂಗದಲ್ಲಿ ವಕ್ತೃತ್ವದಷ್ಟು ಬಲವಾದ ಶಸ್ತ್ರವು ಮತ್ತಾವುದೂ ದೊರೆಯುವದಿಲ್ಲ. ವಕ್ತೃತ್ವಗುಣವುಳ್ಳ ಮನುಷ್ಯನ ಹಿಡಿತದಲ್ಲಿ ಎಲ್ಲ ಜನರು ಸಿಗುವರೆಂತಲೇ ಭಾವಿಸಬೇಕು. ಗಾಳಿಯು ಮೋಡಗಳನ್ನು ಬೇಕಾದ ದಿಕ್ಕಿಗೆ ದೂಡಿಕೊಂಡು ಹೋಗುವಂತೆ, ವಾಗ್ಮಿಯು ತನ್ನ ಪ್ರಬಲೋಕ್ತಿಗಳಿಂದ ಜನರ ಮನಸ್ಸುಗಳನ್ನು ಬೇಕಾದತ್ತ ತಿರುಗಿಸಲು ಸಮರ್ಥನಾಗುವನು. ಅದು ಕಾರಣ ಪ್ರಜಾಸತ್ತಾತ್ಮಕ ರಾಜ್ಯಗಳಲ್ಲಿ ಈ ಗುಣವು ವಿಶೇಷವಾಗಿ ಬೆಳೆಯುವದು. ಈ ಸಂದರ್ಭದಲ್ಲಿ ಆಸಿಯಾ ಖಂಡದ ವಿಷಯವಾಗಿ ಸ್ವಲ್ಪ ಹೇಳುವದು ಅವಶ್ಯವಿದೆ. ಈ ಖಂಡದಲ್ಲಿ ಇವತ್ತಿನ ವರೆಗೆ

ನೂರಾರು ದೊಡ್ಡದೊಡ್ಡ ರಾಜ್ಯಗಳು ಸ್ಥಾಪಿಸಲ್ಪಟ್ಟವು; ಆದರೆ ಅವುಗಳೊಳಗಿನ ಒಂದರಲ್ಲಾದರೂ ಜನರು ವಾಗ್ಮಿಗಳ ಭಾಷಣಗಳನ್ನು ಕೇಳಿ ಹುರಿದುಂಬಿ, ಯಾವುದೊಂದು ರಾಜಕೀಯ ದೊಡ್ಡ ಕಾರ್ಯವನ್ನೆಸಗಿದ ಅಥವಾ ವಕ್ತೃತ್ವದ ಪಾಠಶಾಲೆಗಳನ್ನು ಸ್ಥಾಪಿಸಿ ಅವುಗಳಲ್ಲಿ ಪ್ರಸಿದ್ಧಪಟ್ಟ ಗುರುಗಳನ್ನಿಟ್ಟು, ವಿದ್ಯಾರ್ಥಿಗಳಿಗೆ ವಕ್ತೃತ್ವಕಲೆಯನ್ನು ಕಲಿಸಿದ ಉದಾಹರಣೆಯು ಸಿಗುವದಿಲ್ಲ. ವಿಶೇಷ ಹೇಳುವದೇನು, 'ವಕ್ತಾ' ಮತ್ತು 'ವಕ್ತೃತ್ವ' ಎಂಬ ಶಬ್ದಗಳಿಗೆ ಈಗಿನ ಅರ್ಥಗಳು ಆಸಿಯಾ ಖಂಡದೊಳಗಿನ ಯಾವ ಭಾಷೆಯಲ್ಲಿಯೂ ಸಿಗುವಂತೆ ತೋರುವದಿಲ್ಲ. ಯಾಕೆಂದರೆ ಯಾವುದೊಂದು ಶಬ್ದದಿಂದ ವ್ಯಕ್ತವಾಗುವ ಅರ್ಥವು ಜನರ ಮನಸ್ಸಿನಲ್ಲಿ ಇರದಿದ್ದರೆ, ಆ ಅರ್ಥವನ್ನು ಸೂಚಿಸುವ ಶಬ್ದವಾದರೂ ಇರಲಾರದೆಂಬುದು ಸ್ಪಷ್ಟವದೆ. ಆಸಿಯಾ ಖಂಡದಲ್ಲಿ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯ ಬದಲು ರಾಜಸತ್ತಾತ್ಮಕ ರಾಜ್ಯಪದ್ಧತಿಯು ಅಂದರೆ ಅರಸನೇ ಸರ್ವಾಧಿಕಾರಿಯು, ಅವನ ಅಪ್ಪಣೆಗಳನ್ನೆಲ್ಲ ಪಾಲಿಸುವದೇ ಪ್ರಜೆಗಳ ಧರ್ಮವು ಎಂಬ ಸಾಮ್ರಾಜ್ಯಪದ್ಧತಿಯು ಬಹು ಪ್ರಾಚೀನಕಾಲದಿಂದ ಅವಿಚ್ಛಿನ್ನವಾಗಿ ನಡೆಯುತ್ತಬಂದಿದೆ. ಇದರಿಂದ ವಕ್ತೃತ್ವಗುಣಕ್ಕೆ ಪಶ್ಚಿಮ ರಾಷ್ಟ್ರಗಳಲ್ಲಿ ಬೆಳೆಯಲು ಅಸ್ಪದವಾದಂತೆ ಇತ್ತಕಡೆಗೆ ಅಸ್ಪದವಾಗಲಿಲ್ಲ. ಆದರೂ ಹಿಂದುಸ್ತಾನದಲ್ಲಿ ಅದು ರಾಮಾಯಣ ಮತ್ತು ಮಹಾಭಾರತ ಕಾಲಗಳಲ್ಲಿಯೂ ಗೌತಮ ಶಂಕರಾಚಾರ್ಯರೇ ಮೊದಲಾದ ಧರ್ಮಸಂಸ್ಥಾಪಕರ ಕಾಲಗಳಲ್ಲಿಯೂ ತಕ್ಕಮಟ್ಟಿಗೆ ಪ್ರಬಲಿಗೆ ಬಂದಿತ್ತೆಂದು ಹೇಳಬಹುದು. ಈಗಿನಂತೆ ವಾಗ್ಮಿಯು ಸಭೆಯಲ್ಲಿ ನಿಂತು, ನಿಯಮಿತ ವಿಷಯಗಳಮೇಲೆ ವ್ಯಾಖ್ಯಾನಗಳನ್ನು ಕೊಟ್ಟು, ಕೇಳುವವರ ಮನಸ್ಸುಗಳನ್ನು ತನ್ನ ಕಡೆಗೆ ತಿರುಗಿಸಿಕೊಳ್ಳುವ ಪದ್ಧತಿಯು ಮೊದಲು ಇಲ್ಲದಿದ್ದರೂ ಸಭೆಯಲ್ಲಿ ಒಬ್ಬನು ಪೂರ್ವಪಕ್ಷವನ್ನೂ ಮತ್ತೊಬ್ಬನು ಉತ್ತರ ಪಕ್ಷವನ್ನೂ ಸ್ವೀಕರಿಸಿ, ವಾದವಿವಾದ ಮಾಡಿ, ಒಬ್ಬನು ಮತ್ತೊಬ್ಬನನ್ನು ಜಯಿಸಿದ ಮತ್ತು ಕಾಳಗದಲ್ಲಿ ಸೇನಾನಾಯಕನು ತನ್ನ ಕೈಕೆಳಗಿನ ದಂಡಾಳುಗಳನ್ನು ಪ್ರೋತ್ಸಾಹಗೊಳಿಸಿದ ಉದಾಹರಣೆಗಳು ನಮ್ಮ ಪ್ರಾಚೀನಗ್ರಂಥಗಳಲ್ಲಿ ವಿಪುಲವಾಗಿ ದೊರೆಯುವವು. ಇವು ವಕ್ತೃತ್ವದ ಉದಾಹರಣೆಗಳಾಗವೆಂಬಲ್ಲಿ ಸಂದೇಹವಿಲ್ಲ.

ವಕ್ತೃತ್ವಗುಣದ ಮಹಿಮೆಯು.

ಮನುಷ್ಯನಲ್ಲಿರತಕ್ಕ ಸರ್ವಶಕ್ತಿಗಳಲ್ಲಿ ಅನ್ಯರ ಮನಸ್ಸುಗಳನ್ನು ಆಕರ್ಷಿಸಿ, ಅವುಗಳನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುವ ಶಕ್ತಿಯೇ ಹೆಚ್ಚಿನದು. ಈ ಶಕ್ತಿಯು ಉತ್ಕೃಷ್ಟ ಪ್ರತಿಯ ವಾಗ್ಮಿಯಲ್ಲಿ ಸಂಪೂರ್ಣವಾಗಿರುವದು. ಅವನು ತನ್ನ ವಾಕ್ಪ್ರಭಾತಿಕಯದಿಂದ ಜನರಲ್ಲಿದ್ದ ಅಜ್ಞಾನಾಂಧಕಾರವನ್ನು ತೊಲಗಿಸಿ, ಅವರ ವಿಚಾರ

ಗಳನ್ನು ಯೋಗ್ಯ ದಿಕ್ಕಿಗೆ ಒಯ್ಯಲು ಸಮರ್ಥನಾಗುವನು. ಅವನು ಅದರ ಬಲದಿಂದ ಅವರ ಆಯುಷ್ಯಕ್ರಮವನ್ನು ಸಹ ಬದಲುಮಾಡಿ, ಅವರನ್ನು ಸನ್ಮಾರ್ಗಕ್ಕೆ ತಿರುಗಿಸಲು ಶಕ್ತನಾಗುವನಿಷ್ಟೇ ಅಲ್ಲ ಆದರೆ ಅವರ ಚಂಚಲ ಮನೋಭಾವಗಳನ್ನು ಸಹ ತನ್ನ ಅಧೀನದಲ್ಲಿಟ್ಟುಕೊಳ್ಳಲು ಸಮರ್ಥನಾಗುವನು. ತನ್ನ ಹಿಡಿತದಲ್ಲಿ ಸಿಕ್ಕಿದ್ದನ್ನು ತನ್ನೆಡೆಗೆ ಎಳೆದುಕೊಳ್ಳುವ ಶಕ್ತಿಯು ವಕ್ತೃತ್ವದಲ್ಲಿ ವಿಶೇಷ ಉಂಟು. 'ವಕ್ತೃತ್ವವು ಜಗತ್ತಿನ ರಾಣಿ" ಎಂದು ಒಬ್ಬ ಪ್ರಾಚೀನ ಕವಿಯು ವರ್ಣಿಸಿರುವನು. ಇದು ಅಕ್ಷರಶಃ ನಿಜವಿರುತ್ತದೆ. ಯಾಕೆಂದರೆ ಪೃಥ್ವಿಯೊಳಗಿನ ಸುಧಾರಿಸಿದ ಎಲ್ಲ ರಾಷ್ಟ್ರಗಳು ಅಸಂಖ್ಯ ಪ್ರಸಂಗಗಳಲ್ಲಿ ಅದರ ಅಸದೃಶವಾದ ಶಕ್ತಿಗೊಳಗಾಗಿ ಅದರ ಶ್ರೇಷ್ಠಾಧಿಕಾರವನ್ನು ಶಿರಸಾವಹಿಸಿದ್ದಾವೆ. ಈ ಮಾತಿಗೆ ಆಧುನಿಕ ಮತ್ತು ಪ್ರಾಚೀನ ಇತಿಹಾಸಗಳಲ್ಲಿರುವ ದೃಷ್ಟಾಂತಗಳೇ ತಕ್ಕ ಸಾಕ್ಷಿಗಳಾಗಿವೆ. ಮಹತ್ವದ ಪ್ರಸಂಗಗಳಲ್ಲಿ ಜನರು ವಾಗೀಶನ ಬಾಯಿಯಿಂದ ಹೊರಟ ನುಡಿಗಳನ್ನು ವೇದವಾಕ್ಯಗಳಂತೆ ಸ್ವೀಕರಿಸಿದ್ದಾರೆ; ಅವರು ತಮ್ಮ ದೇಶಕ್ಕೊದಗಿದ ವಿಧವಿಧದ ವಿಪತ್ತುಗಳನ್ನು ನೋಡಿ, ಧೈರ್ಯಗೆಟ್ಟು, ಹಾಹಾಕಾರದ ಪ್ರಸಂಗಗಳಲ್ಲಿ, ವಾಗೀಶನು ತನ್ನ ಆವೇಶಯುಕ್ತ ಭಾಷಣಗಳಿಂದ ಅವರ ಹೃದಯಗಳಲ್ಲಿ ಸೇರಿಕೊಂಡಿದ್ದ ಭಯವನ್ನು ಹೊರಗೆ ದೂಡಿ, ಅದರ ಸ್ಥಳದಲ್ಲಿ ಸ್ವದೇಶಾಭಿಮಾನವನ್ನು ಹುಟ್ಟಿಸಿ, ವಾಗ್ಮಸುವಿಂದ ಅದನ್ನು ಪ್ರಬಲಗೊಳಿಸಿ, ಅವರನ್ನೇ ಕಾರ್ಯಧುರಂಧರರನ್ನಾಗಿ ಮಾಡಿದ್ದಾನೆ. ಅವನು ತನ್ನ ರಾಜ್ಯದಲ್ಲಿ ನಡೆದಿದ್ದ ಅನ್ಯಾಯಗಳನ್ನು ಸಾರ್ವಜನಿಕ ಸಭೆಗಳಲ್ಲಿ ತನ್ನ ಆವೇಶಯುಕ್ತ ಭಾಷಣಗಳಿಂದ ವರ್ಣಿಸಿ, ಆ ಅನ್ಯಾಯಗಳನ್ನು ನಿವಾರಿಸಲು ಜನರನ್ನು ಉತ್ಸಾಹಪೂರಿತರನ್ನಾಗಿ ಮಾಡಿದ್ದಾನೆ. ಒಮ್ಮೆ ಧರ್ಮೋತ್ಸುಕ್ಯದಿಂದ ತುಂಬಿಡುವನಾಗಿ ತನ್ನ ದೇಶಬಾಂಧವರನ್ನು ವಾಕ್ಪಾಂಡಿತ್ಯದಿಂದ ಹುರಿದುಂಬಿಸಿ, ಅವರ ಕೈಯಿಂದ ಧರ್ಮೋನ್ನತಿಯ ಕೆಲಸಗಳನ್ನು ಮಾಡಿಸಿದ್ದಾನೆ; ಒಮ್ಮೆ ಅವರ ಮನಸ್ಸಿನಲ್ಲಿ ದ್ವೇಷಾಸೂಯೆಗಳನ್ನು ಹುಟ್ಟಿಸಿ, ಅವರಲ್ಲಿ ದರ್ಪಾಟೋಪವನ್ನು ಹೆಚ್ಚಿಸಿ, ಅವರನ್ನು ರಾಕ್ಷಸರಂತೆ ಯುದ್ಧಮತ್ತರನ್ನಾಗಿ ಮಾಡಿದ್ದಾನೆ; ಮತ್ತೊಂದು ಕ್ಷಣದಲ್ಲಿ ಆ ಮದವನ್ನು ಮಧುರೋಕ್ತಿಗಳಿಂದಿಳಿಸಿ, ಅವರನ್ನು ಕುರಿಗಳಂತೆ ಶಾಂತವೃತ್ತಿಯುಳ್ಳವರನ್ನಾಗಿ ಮಾಡಿದ್ದಾನೆ. ವಾಕ್ಕೋವಿದನಲ್ಲಿರತಕ್ಕ ಇಂಥ ಪರಮಾವಧಿ ಶಕ್ತಿಗೆ ಸರಿಯಾದ ಶಕ್ತಿಯು ಇನ್ನಾವದುಂಟು? "ಮಾಸಿಡೋನದ ರಣಧುರಂಧರನಾದ ಫಿಲಿಪ್ಪನೆಂಬ ಅರಸನು ಯುದ್ಧಸಾಧನದಲ್ಲಿ ನುರಿತಂಥ ಅಸಂಖ್ಯ ಸೇನೆಗೆ ಅಲ್ಪವೂ ಹೆದರುತ್ತಿದ್ದಿಲ್ಲ; ಆದರೆ ಅಥೆನ್ಸ ಪಟ್ಟಣದೊಳಗಿನ ಡಿಮಾಸ್ಥನೀಸ್ ಹೈಪರಡೀಸ್ ಮುಂತಾದ ಹತ್ತು ಹನ್ನೆರಡು ಜನ ವಾಗ್ಮಿಗಳ ಹೆಸರುಗಳನ್ನು ಕೇಳಿದ ಮಾತ್ರಕ್ಕೆ ಗಡಗಡ ನಡುಗುತ್ತಿದ್ದನು" ಎಂದು ಒಬ್ಬ ಗ್ರಂಥಕಾರನು

ಒರೆದಿರುವನು. ದೊಡ್ಡ ದೊಡ್ಡ ಮಾತುಗಳನ್ನಾಡುವವನಿಗಿಂತ ಮೌನದಿಂದ ಕಾರ್ಯ ಮಾಡುವವನೇ ಮೇಲಾದವನೆಂದು ಕೆಲವರು ಹೇಳುವರು. ಆದರೆ ವಾಗೀಶ್ವರನೇ ಮೇಲಾದವನೆಂದು ಮೇಲಿಂದಮೇಲೆ ನಮ್ಮ ನಿದರ್ಶನಕ್ಕೆ ಬರುವದು. ಒಂದು ವೇಳೆ ಅವನೇ ಇಲ್ಲದಿದ್ದರೆ, ಕಾರ್ಯಸಾಧಕರೂ ಕರ್ತವ್ಯದಕ್ಷರೂ ಜೀವವು ಹುಲ್ಲಿಗಿಂತ ಕಡೆಯೆಂದೆಣಿಸಿ ರಣಭೂಮಿಯಲ್ಲಿ ಹೋರಾಡುವವರೂ ಧರ್ಮಸಂಸ್ಥಾಪಕರೂ ಧರ್ಮಪ್ರಚಾರಕರೂ ಆಗುತ್ತಿದ್ದಿಲ್ಲವಷ್ಟೇ ಅಲ್ಲ, ಆದರೆ ಜನರ ಕನಸುಮನಸುಗಳಲ್ಲಿ ಸಹ ಈ ತರದ ಕಾರ್ಯಸಾಧನೆಯ ಕಲ್ಪನೆಗಳು ಹುಟ್ಟುತ್ತಿದ್ದಿಲ್ಲ. ‘ನುಡಿಯು ಬೆಳ್ಳಿಯಂತೆ ಮೌನವು ಚಿನ್ನದಂತೆ’ ಎಂಬ ನಾಣ್ಣುಡಿಯು ಹಲಕೆಲವು ಪ್ರಸಂಗಗಳಲ್ಲಿ ಉಚಿತವೆಂದು ತೋರಿದರೂ ಎಷ್ಟೋ ಪ್ರಸಂಗಗಳಲ್ಲಿ ಅದು ಅನುಚಿತವೆಂತಲೂ ತೋರುವದು. ಯಾಕೆಂದರೆ ಪ್ರಸಂಗವಶಾತ್ ನುಡಿದ ಒಂದು ಮಾತು ಶಕ್ತಿದಾಯಕವಾಗಿಯೂ ಆ ಪ್ರಸಂಗದಲ್ಲಿ ಧಾರಣ ಮಾಡಿದ ಮೌನವೃತ್ತಿಯು ಶಕ್ತಿಹಾರಕವಾಗಿಯೂ ಪರಿಣಮಿಸಿದ ಉದಾಹರಣೆಗಳು ಜಗತ್ತಿನ ಇತಿಹಾಸದಲ್ಲಿ ವಿಪುಲವಾಗಿ ದೊರೆಯುವವು. ಆದಕಾರಣ ವಿದ್ಯಾಚಾರಸಂಪನ್ನ ರಾಷ್ಟ್ರಗಳ ಜನರು ವಕ್ತೃತ್ವವು ಅತಿ ಮಹಿಮೆಯುಳ್ಳದ್ದೆಂದೆಣಿಸುವರು. ಪೈಥಾಗರಸನೆಂಬ ತತ್ವಜ್ಞಾನಿಯು, ವಕ್ತೃತ್ವಕಲೆಯಲ್ಲಿ ನಿಪುಣನಾಗಲಪೇಕ್ಷಿಸುವವನು ವಾಗ್ಮಿಗಳ ಸಭೆಯಲ್ಲಿ ಏಳು ವರ್ಷಗಳವರೆಗೆ ಕುಳಿತುಕೊಂಡು, ಅಲ್ಲಿ ನಡೆಯುವ ಉಪನ್ಯಾಸಗಳನ್ನೂ ವಾದವಿವಾದಗಳನ್ನೂ ಸುಮ್ಮನೆ ಕೇಳಬೇಕೆಂತಲೂ ಬುಲ್ವರ್ ಲಿಟನ್ನನೆಂಬ ಗ್ರಂಥಕಾರನು ಅದನ್ನು ಅಭ್ಯಾಸಿಸುವವನು ಕನಿಷ್ಠಪಕ್ಷಕ್ಕೆ ಮೂರು ವರ್ಷಗಳವರೆಗೆ ಅವುಗಳನ್ನು ಲಕ್ಷಗೊಟ್ಟು ಆಲಿಸಬೇಕೆಂತಲೂ ಉಲ್ಲೇಖಿಸಿರುವರು. ಮಹಾಭಾರತ ಯುದ್ಧದಲ್ಲಿ, ಬುದ್ಧಿಶಾಲಿಯಾದ ಪಾರ್ಥನು ಸ್ವಕುಲೋತ್ಪನ್ನರ ಮೇಲೂ ಗುರುಗಳ ಮೇಲೂ ತನ್ನ ಶಸ್ತ್ರವನ್ನೆತ್ತಲು ಅಲ್ಲಗಳೆದ ಸಮಯದಲ್ಲಿ ಶ್ರೀ ಕೃಷ್ಣನು ಅವನಿಗೆ ಗೀತೆಯನ್ನು ಹೇಳಿ, ಅವನ ಮನಸ್ಸನ್ನು ತಿರುಗಿಸಿದನು. ಇದು ವಕ್ತೃತ್ವಶಕ್ತಿಯ ಒಂದು ದೊಡ್ಡ ಉದಾಹರಣೆಯಾಗಿದೆ. ಈ ತರದ ಉದಾಹರಣೆಗಳು ಗ್ರೀಸದ ಮತ್ತು ರೋಮದ ಪ್ರಾಚೀನ ಇತಿಹಾಸಗಳಲ್ಲಿ ಬೇಕಾದಷ್ಟು ಸಿಗುವವು. ಇಂಥ ಉದಾಹರಣೆಗಳು ಇಂಗ್ಲಂಡದ ಇತಿಹಾಸದಲ್ಲಿಯೂ ದೊರೆಯುವವು. ಹಿಂದುಸ್ಥಾನದ ಮೊದಲನೆಯ ಸರ್ವಾಧಿಪತಿಯಾದ, ವಾರನ್‌ಹೆಸ್ಟಿಂಗ್ಸನು ಸನ್ ೧೭೮೫ನೆಯ ಇಸವಿಯಲ್ಲಿ ಸ್ವದೇಶಕ್ಕೆ ತಿರುಗಿ ಹೋಗಲು, ಅವನು ಹಿಂದುಸ್ಥಾನದಲ್ಲಿ ಎಸಗಿದ ಅನ್ಯಾಯದ ಕೃತ್ಯಗಳ ವಿಷಯವಾಗಿ ವಿಚಾರಣೆಯು ನಡೆದ ಪ್ರಸಂಗದಲ್ಲಿ ಎಡ್ಮಂಡ್‌ಬರ್ಕ, ಫಾಕ್ಸ ಮತ್ತು ಶೆರಿಡನ್ ಎಂಬ ಮೂರು ಜನ ಇಂಗ್ಲಿಷ್ ವಾಗ್ಮಿಗಳು ಪಾರ್ಲಮೆಂಟ ಸಭೆಯಲ್ಲಿ ಒಬ್ಬರಗಿಂತಲೂ ಒಬ್ಬರು ಮೇಲಾದ ಭಾವ

ಣಗಳನ್ನು ಮಾಡಿದರು. ಎಡ್ಮಂಡ್ ಬರ್ಕನು ವಾರ್ನ್‌ಹೆಸ್ಟಿಂಗ್ಸನ ಅನುಚಿತ ಕೃತ್ಯಗಳನ್ನು ವಿವರಿಸುವಾಗ್ಗೆ ಸಭಾಸದರು ಕಣ್ಣೀರು ಸುರಿಸಿದ್ದು ಆಶ್ಚರ್ಯವಲ್ಲ, ಆದರೆ ಸ್ವತಃ ವಾರ್ನ್‌ಹೆಸ್ಟಿಂಗ್ಸನು ಸಹ ಕಣ್ಣೀರು ಸುರಿಸಿದನು! ತರುವಾಯ ಫಾಕ್ಸನು ಮಾಡಿದ ಭಾಷಣವು ಬರ್ಕನ ಭಾಷಣಕ್ಕೂ ಮೇಲಾಯಿತು. ಮೂರನೆಯವನಾದ ಶೆರಿಡನ್ನನ ಭಾಷಣವಂತು ಸರ್ವೋತ್ಕೃಷ್ಟವಾಯಿತು. ಅವನ ಭಾಷಣವು ಸಾಗಿದಾಗ್ಗೆ ಸಭಾಸದರು ದುಃಖೋದ್ರೇಕದಿಂದ ತುಂಬಿದವರಾಗಿ, ಉಸುರುಗರೆಯುತ್ತಲೂ ಕಣ್ಣೀರುದರಿಸುತ್ತಲೂ ಕುಳಿತುಕೊಂಡರು. ಇಂಥ ಭಾಷಣವು ಈವೊತ್ತಿನವರೆಗೆ ಎಲ್ಲಿಯೂ ಆಗಿರಲಿಕ್ಕಿಲ್ಲೆಂದು ಬಹು ಜನರು ಎಣಿಸಿದರು ಮತ್ತು ಅವರೊಳಗಿನ ಕೆಲವರು 'ತಮ್ಮ ಈ ಭಾಷಣವನ್ನು ಮುದ್ರಿಸಲು ಅಪ್ಪಣೆಯನ್ನಿತ್ತರೆ, ತಮಗೆ ಹತ್ತು ಸಾವಿರ ರೂಪಾಯಿಗಳನ್ನು ಕೊಡುವೆವು' ಎಂದು ಶೆರಿಡನ್ನನಿಗೆ ಬೇಡಿಕೊಂಡರು. ಅವನು ತನ್ನ ಭಾಷಣದಲ್ಲಿ ಅಯೋಧ್ಯೆಯ ನವಾಬ-ಮನೆತನಕ್ಕೆ ಸೇರಿದ ನಿರಾಶ್ರಯರಾದ ರಾಜಸ್ತ್ರೀಯರಿಗೆ ಕೊಟ್ಟ ತರತರದ ಪೀಡೆಗಳನ್ನು ಅತಿಶಯ ಹೃದಯಭೇದಕ ರೀತಿಯಿಂದ ವರ್ಣಿಸಿ, ಆರೋಪಿಯಾದ ವಾರ್ನಹೆಸ್ಟಿಂಗ್ಸನನ್ನು ತನ್ನ ಬಲವಾದ ವಾಗ್ಬಾಣಗಳಿಂದ ಮುಚ್ಚಿಬಿಟ್ಟನು. ಈ ಭಾಷಣವನ್ನು ಕೇಳಿ, ಸಭಿಕರ ಮನಸ್ಸುಗಳು ಅತ್ಯಂತ ಚಂಚಲವಾದದ್ದರಿಂದ, ವಿಚಾರಣೆಯ ಕೆಲಸವನ್ನು ಆ ದಿವಸ ಅಷ್ಟಕ್ಕೇ ನಿಲ್ಲಿಸಬೇಕಾಯಿತು. ಪ್ರಾಚೀನ ಕಾಲದಲ್ಲಿ ಅಥೆನ್ಸ ಮತ್ತು ರೋಮ ಪಟ್ಟಣಗಳಲ್ಲಿ ಸಂಭವಿಸಿದ ಇತಿಹಾಸಪ್ರಸಿದ್ಧ ವಕ್ತೃತ್ವದ ಪ್ರಸಂಗಗಳನ್ನು ಇಂಗ್ಲಂಡದೊಳಗಿನ ಈವೊತ್ತಿನ ಪ್ರಸಂಗವು ಸರಿಗಟ್ಟಿತೆಂಬ ಉದ್ಗಾರಗಳನ್ನು ಬಹು ಜನರು ಹೊರಗೆಡವಿದರು. ಈ ಮೇರೆಗೆ ವಕ್ತೃತ್ವಕ್ಕೆ ವಿಲಕ್ಷಣವಾದ ಶಕ್ತಿ ಇರುತ್ತದೆ. ಅಂಥ ಶಕ್ತಿಯು ನಮ್ಮ ಚರಿತ್ರನಾಯಕನಲ್ಲಿ ಸಂಪೂರ್ಣವಾಗಿತ್ತು.

ವಾಗ್ಮಿಯ ಭಾಷಣವನ್ನು ಕಿವಿಮುಟ್ಟ ಕೇಳುವದಕ್ಕೂ ಅದನ್ನೇ ವರ್ತಮಾನಪತ್ರಗಳಲ್ಲಿ ಅಥವಾ ಮಾಸಿಕ ಪುಸ್ತಕದಲ್ಲಿ ಓದುವದಕ್ಕೂ ಇರುವ ಹೆಚ್ಚುಕಡಿಮೆಯು.

ವ್ಯಾಖ್ಯಾನಗಳನ್ನು ಸ್ವತಃ ಕಿವಿಯಿಂದ ಕೇಳುವದಕ್ಕೂ ಮುದ್ರಿಸಲ್ಪಟ್ಟ ಅವೇ ವ್ಯಾಖ್ಯಾನಗಳನ್ನು ವರ್ತಮಾನಪತ್ರಗಳಲ್ಲಾಗಲಿ, ಮಾಸಿಕ ಪುಸ್ತಕಗಳಲ್ಲಾಗಲಿ ಓದುವದಕ್ಕೂ ಬಹಳ ಹೆಚ್ಚುಕಡಿಮೆಯುಂಟು. ಜಗತ್ಪ್ರಸಿದ್ಧ ವಾಗ್ಮಿಗಳ ವ್ಯಾಖ್ಯಾನಗಳ ಸಂಬಂಧದಲ್ಲಂತು ಈ ವ್ಯತ್ಯಾಸವು ಅತ್ಯಧಿಕವಾಗಿರುವದು. ಯಾಕೆಂದರೆ ಮೇಲಾದ ವಾಗ್ಮಿಯ ವಕ್ತೃತ್ವದಿಂದೊಡಗೂಡಿದ ವ್ಯಾಖ್ಯಾನವೆಂದರೆ ಅವನು ಯಾವುದೊಂದು ವಿಷಯವನ್ನು ಪ್ರತಿಪಾದಿಸುವಾಗ್ಗೆ ಮಾಡಿದ ಬರೀ ಭಾಷಣವಲ್ಲ; ಆದರೆ ಅವನ ಉಚ್ಚ

ಮತ್ತು ಚಿತ್ತಾಕರ್ಷಕವಾದ ಸ್ವರವೂ ಅವನು ತನ್ನ ಭಾಷಣಕ್ಕೆ ಅನುಗುಣವಾಗಿ
ಮಾಡುವ ಅಂಗವಿಕ್ಷೇಪಗಳೂ ಬೇರೆ ಬೇರೆ ಮನೋವೃತ್ತಿಗಳಿಗೆ ಸರಿಯಾಗಿ ಮು
ವಿಲಕ್ಷಣದಲ್ಲಿ ತೋರ್ಪಡಿಸುವ ಆವಿರ್ಭಾವಗಳೂ ಪ್ರಸಂಗಕ್ಕೆ ಸರಿಯಾದ ಅವನ
ಶಬ್ದಗಳ ಜೋಡಣೆಯು ಮಹತ್ವದ ವಾಕ್ಯಗಳಮೇಲೆ ಅಥವಾ ಶಬ್ದಗಳಮೇಲೆ
ಆಗಾಗ್ಗೆ ಕೊಡುವ ಸ್ವರಾಘಾತಗಳೂ ಉಳಿದ ಅಲ್ಪಸ್ವಲ್ಪ ಸಂಗತಿಗಳೂ ಆ ವ್ಯಾ
ಖ್ಯಾನದಲ್ಲಿ ಸಮಾವೇಶವಾಗುತ್ತವೆ. ಇದಲ್ಲದೆ ಅವನ ವ್ಯಾಖ್ಯಾನದೊಳಗಿನ ಪ್ರತಿ
ಒಂದು ಶಬ್ದವು ಸಜೀವವಾಗಿರುತ್ತದೆಂದು ಹೇಳಬಹುದು. ಇಷ್ಟಗಳ ಹೊರತ
ವಕ್ತೃತ್ವಸ್ಥಾನದ ಅಪೂರ್ವ ಶೋಭೆಯನ್ನೂ ನೆರೆದ ಜನಸ್ತೋಮದ ಸೊಬಗನ್ನೂ
ನೋಡಿ, ಸಭಿಕರ ಪ್ರಸನ್ನವಾದ ಹೃದಯಗಳಮೇಲೆ ವಾಗೀಶನ ರಸಭರಿತ ಮತ್ತು
ಸಜೀವ ಭಾಷಣವು ಮೂಡಿಸುವ ಚಿತ್ರಕ್ಕೆ ಸರಿಯಾದ ಚಿತ್ರವನ್ನು ಬಿಳೀಕಾಗದದ
ಮೇಲೆ ನಿರ್ಜೀವವಾದ ಕರೀ ಗೆರೆಗಳಿಂದ ಬರೆಯಲ್ಪಟ್ಟ ಅದೇ ಭಾಷಣವು ಎಂದಾ
ದರೂ ಮೂಡಿಸುವದುಂಟೆ? ಬಹಳ ಹೇಳುವದೇನು, ಕೇಳುವ ಮತ್ತು ಓದುವ
ವ್ಯಾಪಾರಗಳಲ್ಲಿ ಮನಸ್ಸು ಹೆಚ್ಚುಕಡಿಮೆ ಪ್ರಮಾಣದಿಂದ ರಮಿಸುವದು. ಯಾವ
ದೊಂದು ಸಂಗತಿಯನ್ನು ಪುಸ್ತಕದಲ್ಲಿ ಓದುವದರಿಂದ ಮನಸ್ಸು ಬೇಗನೆ ಬೇಸರಿಯು
ವದು. ಆದರೆ ಅದೇ ಸಂಗತಿಯನ್ನು ಕೇಳುವದರಿಂದ ಮನಸ್ಸು ಅಷ್ಟು ಬೇಗನೆ
ದಣಿಯುವದಿಲ್ಲೆಂಬದನ್ನು ಎಲ್ಲರೂ ಬಲ್ಲರು. ಇದರಂತೆಯೇ ಸಭೆಯಲ್ಲಿ ಭಾಷಣ
ವನ್ನು ಕಿವಿಮುಟ್ಟ ಕೇಳುವದರಿಂದುಂಟಾಗುವಷ್ಟು ಆನಂದವು, ಕೆಲವು ದಿವಸಗಳ
ದ ಬಳಿಕ ಅದೇ ಭಾಷಣವನ್ನು ವರ್ತಮಾನಪತ್ರಗಳಲ್ಲಿ ಅಥವಾ ಮಾಸಿಕ ಪುಸ್ತಕ
ಗಳಲ್ಲಿ ಓದುವದರಿಂದುಂಟಾಗುವದಿಲ್ಲೆಂಬದನ್ನಾದರೂ ಸರ್ವರು ಅರಿತಿರುವರು. ಇದ
ದ ಹೊರತು ಪ್ರಸಂಗ ವಿಶೇಷದಿಂದ ವಾಗ್ಮಿಯ ಭಾಷಣಕ್ಕೆ ಒಮ್ಮೊಮ್ಮೆ ಕಳೆಯೇ
ರಿ, ಅದು ಸಭಿಕರ ಚಿತ್ತವನ್ನು ಸಂಪೂರ್ಣವಾಗಿ ಆಕರ್ಷಿಸಿಕೊಂಡು ಇಷ್ಟ
ಕಾರ್ಯವನ್ನು ಆ ಕ್ಷಣವೇ ನೆರವೇರಿಸಿಕೊಳ್ಳುವದು. ಆ ಪ್ರಸಂಗವು ಹೊರಟು
ಹೋದಮೇಲೆ ಒಂದೆರಡು ದಿವಸಗಳ ತರುವಾಯ ಓದಿದ ಅದೇ ಭಾಷಣವು ತೀ
ಸಪ್ಪಗಾಗಿ ತೋರುವದು. ಕಮಲಪತ್ರದ ಮೇಲಿನ ಜಲಬಿಂದುವು ಮುತ್ತಿ
ಸೊಬಗನ್ನು ಪಡೆಯುವಂತೆ ಅಥವಾ ಅಸ್ತಮಯಕಾಲದಲ್ಲಿ ಪಶ್ಚಿಮ ದಿಕ್ಕಿನ ಮೋ
ದಲ್ಲಿ ಹಗಲು ಸೂರ್ಯನ ಹೊಂಬಣ್ಣದ ಕಿರಣಗಳಿಂದ ವಿಶೇಷ ರಮಣೀಯವಾ
ಗದಲ್ಲಿ ಏರುವಂತೆ ಪ್ರಸಂಗ ವಿಶೇಷದ ಮೂಲಕ, ವಾಗ್ಮಿಯ ಬಾಯಿಯಿಂದ ಹೊ
ವಾಗ್ಮಿಗಳ ವಕ್ತೃತ್ವವು ವಿಲಕ್ಷಣವಾದ ತೇಜಸ್ಸಿನಿಂದ ಒಪ್ಪುವದು. ಆ ವೇಳೆಯು
ತೆರಳಿ ಹೋದಬಳಿಕ ಅವನ ಅದೇ ಭಾಷಣವು ಸೂರ್ಯನು ಕೆಳಗಿಳಿದ ಆ
ಬೂದಿಯ ಹಾಗೆ ನಿಸ್ತೇಜವಾಗಿ ಕಾಣಿಸುವ ಮೋಡಗಳಂತೆ ನಿಸ

